# ಧಾರ್ಮಿಕ ಪ್ರಶ್ನೋತ್ತರಮಾಲಾ




ಪ್ರಧಾನ ಸಂಪಾದಕರು :

ರಾಷ್ಟ್ರಪತಿ ಪ್ರಶಸ್ತಿ ವಿಜೇತ ಮಹಾಮಹೋಪಾಧ್ಯಾಯ ಪಂಡಿತಕೇಸರಿ

**ರಾಜಾ. ಎಸ್. ಗಿರಿಯಾಚಾರ್ಯರು**

ಪ್ರಕಾಶಕರು :

**ಶ್ರೀ ಗುರುಸಾರ್ವಭೌಮ ಸಂಶೋಧನಾ ಮಂದಿರ**

**ಶ್ರೀರಾಘವೇಂದ್ರ ಸ್ವಾಮಿ ಮಠ, ಮಂತ್ರಾಲಯ.**




# ಧಾರ್ಮಿಕ ಪ್ರಶ್ನೋತ್ತರಮಾಲಾ



ಪ್ರಧಾನಸಂಪಾದಕರು :

ರಾಷ್ಟ್ರಪತಿ ಪ್ರಶಸ್ತಿ ವಿಜೇತ ಮಹಾಮಹೋಪಾಧ್ಯಾಯ ಪಂಡಿತಕೇಸರಿ

## ರಾಜಾ. ಎಸ್. ಗಿರಿಯಾಚಾರ್ಯರು

(ಅನೇಕ ಜ್ಞಾನಸತ್ರಗಳಲ್ಲಿ ಸಭೆಗಳಲ್ಲಿ ಸಭಿಕರ ಪ್ರಶ್ನೆಗಳಿಗೆ
ಪ್ರಮಾಣಸಹಿತವಾಗಿ ನೀಡಿದ ಉತ್ತರಗಳ ಸಂಗ್ರಹ)



ಪ್ರಕಾಶಕರು :

**ಶ್ರೀ ಗುರುಸಾರ್ವಭೌಮ ಸಂಶೋಧನಾ ಮಂದಿರ**

**ಶ್ರೀ ರಾಘವೇಂದ್ರ ಸ್ವಾಮಿ ಮಠ,**


ಮಂತ್ರಾಲಯ - 518 345. ಕರ್ನೂಲು ಜಿಲ್ಲೆ. ಆಂ.ಪ್ರ.


ಪ್ರಕಾಶಕರು :

**ಶ್ರೀ ಗುರುಸಾರ್ವಭೌಮ ಸಂಶೋಧನಾ ಮಂದಿರ**

ಕುಸುಮ-3

ಶ್ರೀರಾಘವೇಂದ್ರಸ್ವಾಮಿ ಮಠ,

ಮಂತ್ರಾಲಯ.

ಪ್ರಥಮ ಮುದ್ರಣ - 2012 2000 ಪ್ರತಿಗಳು

ದ್ವಿತೀಯ ಮುದ್ರಣ - 2017 2000 ಪ್ರತಿಗಳು

ಪ್ರತಿಗಳು ದೊರೆಯುವ ಸ್ಥಳ :

**ಶ್ರೀಗುರುಸಾರ್ವಭೌಮಸಂಸ್ಕೃತ ವಿದ್ಯಾಪೀಠ,**

**ಪುಸ್ತಕಭಾಂಡಾಗಾರ,**

ಮಂತ್ರಾಲಯ.

---

ಮುದ್ರಣ:

**ಶ್ರೀರಾಘವೇಂದ್ರ ಸ್ವಾಮಿ ಆಫ್‌ಸೆಟ್ ಪ್ರಿಂಟಿಂಗ್ ಪ್ರೆಸ್**

ತೇರು ಬಜಾರು, ಎಮ್ಮಿಗನೂರು-518 360.

ಮೊ: 9247188605, 9247853681

# ಪ್ರಥಮ ಮುದ್ರಣದ ಅನುಗ್ರಹ ಸಂದೇಶ

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ
ಪದವಾಕ್ಯ ಪ್ರಮಾಣಪಾರಾವಾರಪಾರಂಗತ ಸರ್ವತಂತ್ರಸ್ವತಂತ್ರ
ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿವೇದವ್ಯಾಸದೇವ ದಿವ್ಯ ಶ್ರೀಪಾದಪದ್ಮಾರಾಧಕ
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ
ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ ಶ್ರೀಮತ್ಸುಜಯೀಂದ್ರತೀರ್ಥ
ಶ್ರೀಪಾದಂಗಳವರ ಕರಕಮಲಸಂಜಾತರಾದ

**ಶ್ರೀಮತ್ಸುಶಮೀಂದ್ರತೀರ್ಥ**
**ಶ್ರೀಪಾದಂಗಳವರ ವರಕುಮಾರಕರಾದ**
**೧೦೮ ಶ್ರೀಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರು**

## ಮಾಡುವ ನಾರಾಯಣ ಸ್ಮರಣೆಗಳು

ಈಗಿನ ಕಾಲದಲ್ಲಿ ಎಲ್ಲರೂ ಎಲ್ಲ ಗ್ರಂಥಗಳನ್ನು ಓದಿ ಧಾರ್ಮಿಕ ವಿಷಯಗಳನ್ನು ಮತ್ತು ಆಚಾರ-ವಿಚಾರ-ಸತ್ಸಂಪ್ರದಾಯಗಳನ್ನು ತಿಳಿದುಕೊಳ್ಳುವುದು ತುಂಬಾ ಕಷ್ಟ. ಅಂಥಾದ್ದು ಈ ಎಲ್ಲ ವಿಚಾರಗಳನ್ನು ಪ್ರಮಾಣ ಸಹಿತವಾಗಿ ''ಧಾರ್ಮಿಕ ಪ್ರಶ್ನೋತ್ತರಮಾಲಾ'' ಎಂಬ ಗ್ರಂಥದಲ್ಲಿ, ಪ್ರಶ್ನೋತ್ತರ ರೂಪದಲ್ಲಿ ಜನರಿಗೆ ಸುಲಭವಾಗಿ ತಿಳಿಸಿಕೊಟ್ಟ ವಿದ್ವಾನ್. ಪಂಡಿತಕೇಸರಿ ರಾಜಾ ಎಸ್. ಗಿರಿಯಾಚಾರ್ಯರಿಗೂ ಮತ್ತು ಚಿ॥ ವಿದ್ವಾನ್, ರಾಜಾ. ಎಸ್. ಪವಮಾನಾಚಾರ್ಯರಿಗೂ ಹಾಗೂ ಈ ಗ್ರಂಥವನ್ನು ಸಂಶೋಧಿಸಿದ, ಮುದ್ರಿಸಿದ ಹಾಗು ಅಧ್ಯಯನ ಅಧ್ಯಾಪನಾದಿಗಳನ್ನು ಮಾಡುವ ಸಮಸ್ತರಿಗೂ ಅಸ್ಮದುಪಾಸ್ಯಮೂರ್ತಿ ಶ್ರೀಮನ್ಮೂಲರಘುಪತಿ ವೇದವ್ಯಾಸದೇವರು ಇತೋಽಪ್ಯತಿಶಯವಾಗಿ ಆಯುರಾರೋಗ್ಯವನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ಅನುಗ್ರಹವಚನ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ ಪಾರಾವಾರಪಾರಂಗತ ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿ ವೇದವ್ಯಾಸದೇವದಿವ್ಯ ಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾ ಸಂಸ್ಥಾನಾಧೀಶ್ವರರಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ ಶ್ರೀಮತ್ಸುಯತೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ

## ಪರಮಪೂಜ್ಯ 1008 ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರ ಅನುಗ್ರಹವಚನ

"ಸ್ವೋಚಿತಕರ್ಮಗಳಾಚರಿಸುತ" ಎಂಬ ಶ್ರೀಜಗನ್ನಾಥದಾಸರ ವಚನದಂತೆ ನಮಗೆ ವಿಹಿತವಾದ ಧರ್ಮಗಳನ್ನು ತಪ್ಪದಲೇ ಅನುಷ್ಠಾನ ಮಾಡಬೇಕೆಂದು ತಿಳಿದು ಬರುತ್ತದೆ. ಆ ಧರ್ಮಗಳನ್ನು ಅನುಷ್ಠಾನಕ್ಕೆ ತರಬೇಕೆಂದರೆ ಕೆಲವೊಂದು ಜಿಜ್ಞಾಸೆಗಳು ನಮ್ಮ ಮುಂದೆ ನಿಲ್ಲುತ್ತವೆ. ಆ ಜಿಜ್ಞಾಸೆಗಳ ಪರಿಹಾರವಾಗಬೇಕಾದರೆ ಧರ್ಮಶಾಸ್ತ್ರಗಳ ಅಧ್ಯಯನದ ಆವಶ್ಯಕತೆ ಇರುತ್ತದೆ. ಈಗಿನ ಕಾಲದಲ್ಲಿ ಎಲ್ಲರೂ ಎಲ್ಲ ಗ್ರಂಥಗಳನ್ನು ಓದಿ ಧಾರ್ಮಿಕ ವಿಷಯಗಳನ್ನು ಮತ್ತು ಆಚಾರ-ವಿಚಾರ-ಸತ್ಸಂಪ್ರದಾಯಗಳನ್ನು ತಿಳಿದುಕೊಳ್ಳುವುದು ತುಂಬಾ ಕಷ್ಟ. ಅಂಥಹ ವಿಚಾರಗಳನ್ನು ಪ್ರಮಾಣ ಸಹಿತವಾಗಿ "ಧಾರ್ಮಿಕ ಪ್ರಶ್ನೋತ್ತರಮಾಲಾ" ಎಂಬ ಗ್ರಂಥದಲ್ಲಿ, ಪ್ರಶ್ನೋತ್ತರ ರೂಪದಲ್ಲಿ ಜನರಿಗೆ ಸುಲಭವಾಗಿ ತಿಳಿಸಿಕೊಡಲು ರಾಷ್ಟ್ರಪತಿ ಪ್ರಶಸ್ತಿ ವಿಜೇತ ಮಹಾಮಹೋಪಾಧ್ಯಾಯ ಪಂಡಿತಕೇಸರಿ ಶ್ರೀ ರಾಜಾ ಎಸ್. ಗಿರಿಯಾಚಾರ್ಯರು ಹಾಗೂ ನಾವು ಪೂರ್ವಾಶ್ರಮದಲ್ಲಿ ಒಟ್ಟಿಗೆ ಸಂಗ್ರಹಿಸಿ ಸಂಪಾದಿಸಿ, ಶ್ರೀಮಠದಿಂದ ಮುದ್ರಿಸಲಾಗಿತ್ತು. ಪ್ರಕೃತ ಆ ಪುಸ್ತಕಗಳು ಈಗ ಉಪಲಬ್ಧವಿಲ್ಲ ಎಂದುತಿಳದು ಪುನಃ ಮುದ್ರಣ ಮಾಡಿಸಲು ಆದೇಶಿಸಿದ್ದೆವು. ಪ್ರಕೃತ ಅದು ಮುದ್ರಣಗೊಂಡು **ಶ್ರೀಗುರುರಾಜರ 346 ನೇ ಆರಾಧನಾ** ಸಂದರ್ಭದಲ್ಲಿ ಪ್ರಕಾಶನಗೊಳ್ಳುತ್ತಿರುವುದು ನಮಗೆ ತುಂಬಾ ಸಂತಸವನ್ನುಂಟು ಮಾಡಿದೆ. ಈ ಗ್ರಂಥವನ್ನು ಸಂಶೋಧಿಸಿದ, ಮುದ್ರಿಸಿದ ಹಾಗು ಅಧ್ಯಯನ ಅಧ್ಯಾಪನಾದಿಗಳನ್ನು ಮಾಡುವ ಸಮಸ್ತರಿಗೂ ಅಸ್ಮದುಪಾಸ್ಯಮೂರ್ತಿ ಶ್ರೀಮನ್ಮೂಲರಘುಪತಿ ವೇದವ್ಯಾಸದೇವರು ಇತೋಽಪ್ಯತಿಶಯವಾಗಿ ಆಯುರಾರೋಗ್ಯವನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# ಮುನ್ನುಡಿ

**ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನಿಹ ।** ಎಂದು ಭಾಗವತದಲ್ಲಿ ಪ್ರಹ್ಲಾದರಾಜರು ಎಚ್ಚರಿಸಿದಂತೆ, ಧರ್ಮವು ನಮ್ಮ ಜೀವನದ ಹಾಸುಹೊಕ್ಕಾಗಿರಬೇಕು.

ಇಂತಹ ಧರ್ಮವನ್ನು ಜನತೆಗೆ ತಿಳಿಸುವ ಬಗೆಗಳು ಅನೇಕವಾಗಿವೆ. 1. ಪಾಠವನ್ನು ಹೇಳುವುದು. 2. ಪ್ರವಚನ ಮಾಡುವುದು. 3. ಸಭೆ ಸಮ್ಮೇಳನಗಳಲ್ಲಿ ಚರ್ಚಿಸುವುದು. 4. ಮೂಲ ಗ್ರಂಥಪ್ರಕಾಶನ ಮಾಡುವುದು. 5. ಪ್ರಾಂತೀಯ ಭಾಷೆಗಳಲ್ಲಿ ಅನುವಾದಿಸುವುದು. ಇವುಗಳಕ್ಕಿಂತಲೂ ಪ್ರಶ್ನೋತ್ತರಗಳ ಮೂಲಕ ಜಿಜ್ಞಾಸುಗಳ ಸಂಶಯವನ್ನು ಪ್ರಮಾಣ ಸಹಿತವಾಗಿ ಪರಿಹರಿಸುವುದು ಅತ್ಯಂತ ಪ್ರಭಾವಕಾರಿಯಾಗಿದೆ.

ನಾವು ಅನೇಕ ಸಂದರ್ಭಗಳಲ್ಲಿ, ಅನೇಕ ಕಡೆಗಳಲ್ಲಿ ಜನರು ಕೇಳಿದ ಪ್ರಶ್ನೆಗಳಿಗೆ ಉತ್ತರಿಸಿದ್ದನ್ನು ನಮ್ಮ ಚಿರಂಜೀವಿ ಹಾಗು ನಮ್ಮ ಶಿಷ್ಯರು ಸೆರೆ ಹಿಡಿದಿದ್ದಾರೆ. ಅದನ್ನು ಏಕತ್ರ ಸಂಗ್ರಹಿಸಿ ಜನತೆಯ ಉಪಯೋಗಕ್ಕಾಗಿ ಪ್ರಕಾಶಿಸಲು ನಿರ್ಧರಿಸಿ, ಪ್ರಾತಃಸ್ಮರಣೀಯರಾದ ಪರಮಪೂಜ್ಯ ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ ಕಾಲದಲ್ಲಿ ಪ್ರಥಮ ಮುದ್ರಣಗೊಂಡಿತ್ತು. ಪ್ರತಿಗಳು ಮುಗಿದಿರುವುದರಿಂದ ಪ್ರಸ್ತುತ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀ 1008 ಶ್ರೀಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಮರು ಮುದ್ರಿಸುವಂತೆ ಆಜ್ಞಾಪಿಸಿದರು.

ಪ್ರಕೃತ 381 ಪ್ರಶ್ನೋತ್ತರಗಳನ್ನೊಳಗೊಂಡ ''ಧಾರ್ಮಿಕ ಪ್ರಶ್ನೋತ್ತರಮಾಲಾ'' ಎಂಬ ಗ್ರಂಥವನ್ನು ಮೊದಲನೇ ಭಾಗವಾಗಿ, **ಶ್ರೀರಾಘವೇಂದ್ರಸ್ವಾಮಿಗಳವರ 346 ನೇ ಆರಾಧನಾಮಹೋತ್ಸವಾಂಗವಾಗಿ** ನಮ್ಮ ಶ್ರೀಮಠದ ಶ್ರೀಗುರುಸಾರ್ವಭೌಮ ಸಂಶೋಧನಾಮಂದಿರದ ವತಿಯಿಂದ ಮರು ಮುದ್ರಿಸುತ್ತಿರುವುದು ಸಂತಸದ ವಿಷಯ. ಈ ಕಾರ್ಯಕ್ಕೆ ವಿಶೇಷವಾಗಿ ಪ್ರೋತ್ಸಹಿಸಿದ ನಮ್ಮ ವಿದ್ಯಾಶಿಷ್ಯರುಗಳಿಗೆ, ಈ ಗ್ರಂಥವನ್ನು ಓದಿ ಅದರಂತೆ ಅನುಷ್ಠಾನಾದಿಗಳನ್ನು ಮಾಡುವವರಿಗೂ, ಅಲ್ಪಕಾಲದಲ್ಲಿ ಸುಂದರವಾಗಿ ಮುದ್ರಿಸಿದವರಿಗೂ, ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವೇದವ್ಯಾಸಾಭಿನ್ನಸೀತಾಪತಿ ಶ್ರೀಮನ್ಮೂಲರಾಮಚಂದ್ರದೇವರು ಇತೋಽಪ್ಯತಿಶಯವಾದ ಆಯುರಾರೋಗ್ಯಭಾಗ್ಯಗಳನ್ನು ಕೊಟ್ಟು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇತಿ

**ರಾಷ್ಟ್ರಪತಿ ಪ್ರಶಸ್ತಿ ವಿಜೇತ ಮಹಾಮಹೋಪಾಧ್ಯಾಯ ಪಂಡಿತಕೇಸರಿ**

**ರಾಜಾ. ಎಸ್. ಗಿರಿಯಾಚಾರ್ಯರು**

ಶ್ರೀ ರಾಘವೇಂದ್ರಸ್ವಾಮಿ ಮಠ, ಮಂತ್ರಾಲಯ.

## ವಿಷಯ ಸೂಚಿಕ

# ಶ್ರೀಕೃಷ್ಣ

**1. ಕೃಷ್ಣಜಯಂತಿಯಲ್ಲಿ ಉಪವಾಸವನ್ನು ಮಾಡುವಂತೆ ರಾಮಾದಿಜಯಂತಿಗಳಲ್ಲಿ ಏಕೆ ಉಪವಾಸವನ್ನು ಮಾಡುವುದಿಲ್ಲ?**

ಉ. **"ಸರ್ವಾಸಾಂ ಜಯಂತೀನಾಂ ಶ್ರೇಷ್ಠಾ ಕೃಷ್ಣಾಷ್ಟಮೀ ಮತಾ ।**
**ಯಸ್ಮಾತ್ ಸನ್ನಿಹಿತಾತ್ಯಂತಂ ತತ್ರೈವೋಪವಸೇನ್ನರಃ ॥**
**ತಥಾ ಸರ್ವಾಸ್ವಪಿ ಜಯಂತೀಷು ಪೂಜಾ ಕಾರ್ಯಾ ವಿಶೇಷತಃ ।**
**ಸಾನ್ನಿಧ್ಯ ಏವ ಕರ್ತವ್ಯೋ ಉಪವಾಸೋ ನ ದೂರಗೇ ॥**
**ಇತ್ಯಭಿಧಾನಾತ್ ಕೃಷ್ಣಜಯಂತ್ಯಾ ಏವ ಸನ್ನಿಹಿತತ್ವೇನ,**
**ಶ್ರೇಷ್ಠತ್ವೇನ ಚ ಸರ್ವೇಷಾಂ ತತ್ರೈವೋಪವಾಸಃ ॥**
**ನ ರಾಮಜಯಂತ್ಯಾದಿಷು । ತಸ್ಯಾಃ ವ್ಯವಧಾನಶ್ರವಣಾತ್ ।**
**ಭಾರತೇ ರಾಜಸೂಯೇ ಚತುರ್ವಿಂಶತಿತಮೇ ತ್ರೇತಾಯುಗೇ ರಾಮಾವತಾರಶ್ರವಣಾತ್ ।**
**ಅಷ್ಟಾವಿಶಂತಿತಮೇ ದ್ವಾಪರಯುಗೇ ಕೃಷ್ಣಾವತಾರಶ್ರವಣಾತ್ ।**
**ಇದಾನೀಂತನಕಲಿಯುಗಸ್ಥಜನಾನಾಂ ರಾಮಾವತಾರಸ್ಯ ವ್ಯವಹಿತತ್ವ ಶ್ರವಣಾತ್ ನ ತತ್ರ ಉಪವಾಸಃ ಕಾರ್ಯಃ ॥"**

ಎಂಬೀ ಮುಂತಾಗಿ 'ಕೃಷ್ಣಾಚಾರ್ಯಸ್ಮೃತಿಮುಕ್ತಾವಲೀ ಕಾಲನಿರ್ಣಯ ಪ್ರಕರಣದಲ್ಲಿ ಹೇಳಿರುವಂತೆ ಆಯಾ ಯಾ ಜನಾಂಗಕ್ಕೆ ಸನ್ನಿಹಿತವಾದ ಜಯಂತಿಯಂದು ಉಪವಾಸವನ್ನು ಆಯಾ ಯಾ ಜನರು ಮಾಡಬೇಕು. ದೂರಸ್ಥವಾದ ಜಯಂತಿಯಂದು ಉಪವಾಸವನ್ನು ಮಾಡಬಾರದು. ಪ್ರಕೃತ, ಕಲಿಯುಗದ ಜನರಿಗೆ ರಾಮಾವತಾರಾದಿಗಳಿಗಿಂತಲೂ ಕೃಷ್ಣಾವತಾರವೇ ಅತ್ಯಂತ ಸನ್ನಿಹಿತವಾಗಿರುವುದರಿಂದ, ಕಲಿಯುಗದ ಜನರು ರಾಮಾದಿ ಜಯಂತಿಗಳಲ್ಲಿ ಉಪವಾಸವನ್ನು ಮಾಡದಲೆ, ಕೃಷ್ಣಜಯಂತಿಯಂದೇ ಉಪವಾಸವನ್ನು ಮಾಡುವುದು ಶಾಸ್ತ್ರಸಮ್ಮತ, ಅದ್ದರಿಂದಲೇ ಕಲಿಯುಗದ ಜನರು ಕೃಷ್ಣಜಯಂತಿಯಂದು ಉಪವಾಸವನ್ನು ಮಾಡುವಂತ ರಾಮಾದಿಜಯಂತಿಗಳಲ್ಲಿ ಉಪವಾಸವನ್ನು ಮಾಡುವುದಿಲ್ಲ.

**2. ನಾವು ಯಾವುದೇ ಕರ್ಮವನ್ನು ಅನುಷ್ಠಾನ ಮಾಡಿದ ಮೇಲೆ ಕೊನೆಯಲ್ಲಿ 'ಶ್ರೀಕೃಷ್ಣಾರ್ಪಣಮಸ್ತು" ಎಂದು ಹೇಳುತ್ತೇವೆ. ಇದಕ್ಕೆ ಕಾರಣವೇನು?**

ಉ. 1) ಭಾಗವತ ತಾತ್ಪರ್ಯದ ಪ್ರಥಮ ಸ್ಕಂಧ 3ನೇ ಅಧ್ಯಾಯದಲ್ಲಿ " **ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ**" ಎಂದು ಹೇಳಿದ್ದಾರೆ. ಮೂಲರೂಪೀ ಸ್ವಯಮೇವ ಎಂದು ಹೇಳಲಾಗಿದೆ.

2) ಆಯೀ ನರಹರಿ ಆಚಾರ್ಯಕೃತ ಭಾಗವತ ತಾತ್ಪರ್ಯ ವ್ಯಾಖ್ಯಾನದಲ್ಲಿ **"ಮೂಲರೂಪಸ್ಯ ಕೃಷ್ಣಶಬ್ದವಾಚ್ಯತ್ವಂ ಕೃಷ್ಣೋ ಮುಕ್ತೌ ಇತ್ಯಾದಿ ಪ್ರಮಾಣಾತ್ ಜ್ಞಾತವ್ಯಂ।**
**ಏವಂ ಕೃಷ್ಣಃ ಭಗವಾನೇವ ಮೂಲರೂಪ್ಯೇವೇತಿ ಯೋಜನಾ ಉಕ್ತಾ ಇತ್ಯಪಿ ಉಕ್ತಮ್॥**

3) ಭಾಗವತತಾತ್ಪರ್ಯ ವ್ಯಾಖ್ಯಾನವಾದ ಪ್ರಬೋಧಿನಿಯಲ್ಲಿ **"ಕೃಷ್ಣಶಬ್ದಸ್ತು ಆನಂದಾತ್ಮಕಮೂಲರೂಪಾರ್ಥಕಃ"** ಎಂದು ಹೇಳಲಾಗಿದೆ.
ಇದರಿಂದ ಭಗವಂತನ ಮೂಲರೂಪವು ಕೃಷ್ಣಶಬ್ದವಾಚ್ಯವೆಂದು ಸ್ಪಷ್ಟವಾಗುತ್ತದೆ. ಕೃಷ್ಣಶಬ್ದವಾಚ್ಯವಾದ ಮೂಲರೂಪದಲ್ಲಿ ನಾವು ಮಾಡಿದ ಕರ್ಮಗಳನ್ನು ಸಮರ್ಪಣಮಾಡಬೇಕೆಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಕರ್ಮಾನುಷ್ಠಾನದ ಕೊನೆಯಲ್ಲಿ ಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳಲಾಗುತ್ತದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

4) ಮತ್ತು ಅರ್ಜುನನನ್ನು ನಿಮಿತ್ತ ಮಾಡಿಕೊಂಡು ತತ್ತ್ವವನ್ನು ಉಪದೇಶಮಾಡಿದ ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಹೇ ! ಅರ್ಜುನ,
**"ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ॥"**

ಎಂಬ ಶ್ಲೋಕದಿಂದ ಎಲ್ಲವನ್ನು ತನ್ನಲ್ಲಿ ಸಮರ್ಪಿಸು ಎಂದು ಹೇಳಿರುವುದರ ಹಿನ್ನೆಲೆಯಲ್ಲೂ ಕರ್ಮಾನುಷ್ಠಾನದ ಕೊನೆಯಲ್ಲಿ ಶ್ರೀಕೃಷ್ಣಾರ್ಪಣಮಸ್ತು ಎಂದು ಹೇಳುವುದು ವಾಡಿಕೆಯಲ್ಲಿ ಬಂದಿರಲಿಕ್ಕೆ ಸಾಕು.



# ದೇವರ ಪೂಜೆ

**3. ದೇವರ ಪೂಜೆಯ ಸಂದರ್ಭದಲ್ಲಿ ನಗಾರಿ ಮುಂತಾದ ವಾದ್ಯಗಳನ್ನು ಬಾರಿಸುವುದು ಶಾಸ್ತ್ರಸಮ್ಮತ. ಹೀಗಿದ್ದರೂ ಕೆಲವೊಂದು ಮಠಗಳಲ್ಲಿ ಕಾರಣಾಂತರದಿಂದ ದೇವರ ಪೂಜೆಯ ಸಂದರ್ಭದಲ್ಲಿ ನಗಾರಿಯನ್ನು ಬಾರಿಸುವುದಿಲ್ಲ. ಇದು ಸರಿಯೇ?**

ಉ. ದೇವರ ಪೂಜೆಯ ಸಂದರ್ಭದಲ್ಲಿ ನಗಾರಿ ಮುಂತಾದ ವಾದ್ಯಗಳನ್ನು ಬಾರಿಸುವುದು ಶಾಸ್ತ್ರಸಮ್ಮತವಾದಕಾರಣ ಬಾರಿಸಲೇಬೇಕು. ಆದರೆ ನಗಾರಿಯನ್ನು ಕಾರಣಾಂತರದಿಂದ ಬಾರಿಸಲು ಆಗದಿದ್ದರೆ ದೋಷವಿಲ್ಲ. ಏಕೆಂದರೆ-

**ಘಂಟಾಶಬ್ದಃ ನರೈಃ ಕಾರ್ಯಃ ಸರ್ವವಾದ್ಯಮಯೋ ಯತಃ।**
**ಸರ್ವವಾದ್ಯಮಯೀ ಘಂಟಾ ದೇವದೇವಸ್ಯ ವಲ್ಲಭಾ।**
**ತಸ್ಮಾತ್ ಸರ್ವಪ್ರಯತ್ನೇನ ಘಂಟಾನಾದಂ ತು ಕಾರಯೇತ್।**
**ಘಂಟಾನಾದೇನ ದೇವೇಶಃ ಪ್ರೀತೋ ಭವತಿ ಕೇಶವಃ ॥**

ಎಂಬೀ ಮುಂತಾಗಿ ಸ್ಕಾಂದಪುರಾಣದಲ್ಲಿ ಹೇಳಿರುತ್ತಾರೆ. ಇದರಿಂದ ಘಂಟೆಯು ಸರ್ವವಾದ್ಯಮಯವೆಂದು ಸಿದ್ಧವಾಗುತ್ತದೆ. ಸರ್ವವಾದ್ಯಮಯ ವಾದ ಘಂಟೆಯನ್ನು ಬಾರಿಸಿದರೆ ಸಕಲ ವಾದ್ಯಗಳನ್ನೂ ಬಾರಿಸಿದಂತೆಯೇ ಸರಿ. ಆದ್ದರಿಂದ ಕಾರಣಾಂತರದಿಂದ ದೇವರ ಪೂಜೆಯ ಸಮಯದಲ್ಲಿ ನಗಾರಿಯನ್ನು ಬಾರಿಸಲು ಆಗದಿದ್ದರೆ ಅದು ತಪ್ಪಾಗುವುದಿಲ್ಲ. ಘಂಟೆಯನ್ನು ಬಾರಿಸಿದರೆ ಸಾಕು ಎಂದು ತೋರುತ್ತದೆ.

**4. ಪ್ರತಿನಿತ್ಯದಲ್ಲೂ ದೇವರ ಪೂಜೆಯನ್ನು ಮಾಡಿ, ದೇವರನ್ನು ಭುಜಂಗಿಸುವ ಸಂದರ್ಭದಲ್ಲಿ ತುಳಸೀ ಸಹಿತವಾಗಿ ಸಾಲಿಗ್ರಾಮವನ್ನು ಸಂಪುಟದಲ್ಲಿಟ್ಟು ಭುಜಂಗಿಸಬೇಕೋ ಅಥವಾ ತುಳಸೀಪುಷ್ಪಗಳನ್ನು ತೆಗೆದು ಸಾಲಿಗ್ರಾಮಾದಿ ಗಳನ್ನು ಮಾತ್ರ ಸಂಪುಟದಲ್ಲಿಟ್ಟು ಭುಜಂಗಿಸಬೇಕೋ?**

ಉ. ಶ್ರೀಹಂಸನಾಮಕ ಪರಮಾತ್ಮನ ಸಾಕ್ಷಾತ್ ಪರಂಪರೆಯಲ್ಲಿ ಬಂದಿರುವ ಶ್ರೀವರದೇಂದ್ರತೀರ್ಥರು ತಂತ್ರಸಾರಸಂಗ್ರಹಾದಿಗ್ರಂಥಗಳಲ್ಲಿ ಹೇಳಿರುವುದನ್ನು ಸಂಗ್ರಹಿಸಿ, ರಚಿಸಿರುವ ತಮ್ಮದೇವಪೂಜಾಪದ್ಧತಿಯಲ್ಲಿ.

**ಅರುಣೋದಯಸ್ನಾನಶಕ್ತಶ್ಚೇತ್ ತುಲಸ್ಯಾ ಸಹೈವ ಸಾಲಿಗ್ರಾಮಸ್ಥಾಪನಮ್।**
**ಅಶಕ್ತಶ್ಚೇತ್ ದೇವತುಲಸೀಪುಷ್ಪಾಣಿ ವಿಸರ್ಜಯೇತ್ ॥**

ಎಂದು ಹೇಳಿರುತ್ತಾರೆ. ಅದರ ಪ್ರಕಾರ ಅರುಣೋದಯ ಕಾಲದಲ್ಲಿ ಸ್ನಾನ ಮಾಡಲು ಶಕ್ತನಾಗಿದ್ದರೆ ತುಳಸೀ - ಪುಷ್ಪ ಸಹಿತವಾಗಿಯೇ ಸಂಪುಟದಲ್ಲಿ ಸಾಲಿಗ್ರಾಮವನ್ನು ಇಟ್ಟು ದೇವರನ್ನು ಭುಜಂಗಿಸಬೇಕು. ಅರುಣೋದಯ ಕಾಲದಲ್ಲಿ ಸ್ನಾನಮಾಡಲು ಅಶಕ್ತನಾಗಿದ್ದರೆ, ತುಳಸೀ - ಪುಷ್ಪಗಳನ್ನು ತೆಗೆದು ಸಾಲಿಗ್ರಾಮಾದಿಗಳನ್ನು ಮಾತ್ರ ಸಂಪುಟದಲ್ಲಿಟ್ಟು ದೇವರನ್ನು ಭುಜಂಗಿಸಬೇಕು.

5. **ಪ್ರತಿನಿತ್ಯದಲ್ಲೂ ದೇವರ ಪೂಜೆಯನ್ನು ಮಾಡುವಾಗ ಯಾವ ದಿಕ್ಕಿನ ಅಭಿಮುಖವಾಗಿ ಕುಳಿತು ಪೂಜೆಯನ್ನು ಮಾಡಬೇಕು?**

ಉ. **"ತತೋ ದೇವಂ ದಕ್ಷಿಣತಃ ಪೀಠೇ ಉಪವೇಶಯೇತ್ ।**
**ತದುಕ್ತಂ ತಿಲಕೇ-ದೇವಂ ದಕ್ಷಿಣತಃ ಕೃತ್ವಾ ಪೂಜಾಂ ಕುರ್ಯಾದತಂದ್ರಿತಃ।**
**ಪ್ರಾಚ್ಯಾದಿನಿಯಮೋ ನಾತ್ರ ವರ್ತತೇ ಚಾಧಿಕಾರಿಣಃ ॥**
ಎಂದು ತಿಲಕವೆಂಬ ಗ್ರಂಥದಲ್ಲಿ ಹೇಳಿರುವುದನ್ನು ಶ್ರೀವರದೇಂದ್ರ ತೀರ್ಥರು ತಮ್ಮ ''ದೇವಪೂಜಾ ಪದ್ಧತಿ'' ಯಲ್ಲಿ ಉಲ್ಲೇಖಿಸಿರುತ್ತಾರೆ. ಇದರ ಪ್ರಕಾರ ದೇವರ ಪೂಜೆಯನ್ನು ಮಾಡುವವರಿಗೆ ಪ್ರಾಚ್ಯಾದಿ ದಿಕ್ಕುಗಳ ನಿಯಮವು ಇರುವುದಿಲ್ಲ. ಆದ್ದರಿಂದ ದೇವರ ಪೂಜೆಯನ್ನು ಮಾಡುವಾಗ ಇಂತಹ ದಿಕ್ಕಿಗೇ ಅಭಿಮುಖವಾಗಿ ಕುಳಿತು ನಾವು ಪೂಜೆ ಮಾಡಬೇಕೆಂಬ ಕಟ್ಟಳೆ ಇಲ್ಲ. ಆದರೆ ನಮ್ಮ ಬಲಭಾಗಕ್ಕೆ ದೇವರನ್ನು ಪೀಠದಲ್ಲಿ ಕೂಡಿಸಿ ಪೂಜೆಯನ್ನು ಮಾಡಬೇಕೆಂದು ತಿಲಕ ಗ್ರಂಥದಲ್ಲಿ ಹೇಳಿದೆ.

6. **ಪೂಜಾಕಾಲದಲ್ಲಿ ದೇವರಿಗೆ ಬಿಡಿಹೂವನ್ನು ಏರಿಸುವುದು ಶ್ರೇಷ್ಠವೋ? ಅಥವಾ ಕಟ್ಟಿದ ಹೂವನ್ನು ಏರಿಸುವುದು ಶ್ರೇಷ್ಠವೋ?**

ಉ. **"ಕಪಿಂಜಲಸಂಹಿತಾಯಾಂ-ಅಬಂಧೇಭ್ಯಃ ಪ್ರಸೂನೇಭ್ಯಃ ಬದ್ಧಮಾಲಾ ಪ್ರಶಸ್ಯತೇ"(ಕೃ.ಸ್ಮೃ.ಆ.ಪ್ರ.ಪು.-142)**
ಎಂದು ಕಪಿಂಜಲಸಂಹಿತೆಯಲ್ಲಿ ಹೇಳಿದಂತೆ ಬಿಡಿ ಹೂವಗಳಕ್ಕಿಂತಲೂ ಕಟ್ಟಿದ ಹೂ ಶ್ರೇಷ್ಠವಾದ ಕಾರಣ ಕಟ್ಟಿದ ಹೂವನ್ನು ದೇವರಿಗೆ ಏರಿಸುವುದು ಪ್ರಶಸ್ತ (ಶ್ರೇಷ್ಠ)

7. ತೀರ್ಥವಾಗಬೇಕಾದರೆ ಏನೇನಿರಬೇಕು?

ಉ. "ಸುದರ್ಶನಂ ಕೃಷ್ಣಮೂರ್ತಿಃ ದ್ವಿಚಕ್ರಾಂಕಿತಮಿತ್ಯಪಿ।
ಚತುರ್ಣಾಂ ಯೋಗತಸ್ತೀರ್ಥಂ ಸಾಲಿಗ್ರಾಮಸ್ಯ ನಾನ್ಯಥಾ ॥
ಎಂದು ಪಂಚರಾತ್ರಾಗಮ=ಪಾಂಚರಾತ್ರಾಗಮದಲ್ಲಿ ಹೇಳಿದಂತೆ ತೀರ್ಥವಾಗಬೇಕಾದರೆ, ಸುದರ್ಶನ-ಕೃಷ್ಣಪ್ರತಿಮೆ-ಎರಡು ಚಕ್ರಾಂಕಿತಗಳು-(ವಿಷ್ಣುಪಾದ) ಹಾಗೂ ಸಾಲಿಗ್ರಾಮ ಇವುಗಳು ಇರಬೇಕು. ಮತ್ತು ಇವುಗಳಿಗೆ ಮಾಡುವ ಅಭಿಷೇಕದ ಜಲವೇ ತೀರ್ಥವೆನಿಸುವುದು.

8. ಹೂವು-ಹಣ್ಣು ಮುಂತಾದವುಗಳನ್ನು ಅಧೋಮುಖವಾಗಿ (ಕೆಳಮುಖವಾಗಿ) ದೇವರಿಗೆ ಸಮರ್ಪಿಸಬಾರದೆಂದು ಹಿರಿಯರು ಹೇಳುತ್ತಾರೆ. ಈ ವಿಷಯಕ್ಕೆ ಪ್ರಮಾಣವೇನು?

ಉ. ಪತ್ರಂ ವಾ ಯದಿ ವಾ ಪುಷ್ಪಂ ಫಲಂ ನೇಷ್ಟಮಧೋಮುಖಮ್ ।
ಯಥೋತ್ಪನ್ನಂ ತಥಾ ದೇಯಂ ಬಿಲ್ವಪತ್ರಮಧೋಮುಖಮ್ ॥
ಎಂಬ ಪ್ರಮಾಣದಲ್ಲಿ ಹೇಳಿದಂತೆ, (ಪತ್ರ=ಎಲೆ-ವಿಳೆದೆಲೆ-ದಳ-ಪರ್ಣ) ವಿಳೆದೆಲೆ - ಹೂವು ಮತ್ತು ಹಣ್ಣು ಇವುಗಳನ್ನು ದೇವರಿಗೆ ಸಮರ್ಪಿಸುವ ಕಾಲದಲ್ಲೇ ಆಗಲಿ ಅಥವಾ ಬ್ರಾಹ್ಮಣರಿಗೆ ಕೊಡುವ ಕಾಲದಲ್ಲೇ ಆಗಲಿ ಅಧೋಮುಖವಾಗಿ ಸಮರ್ಪಿಸಬಾರದು. ಮತ್ತು ಕೊಡಬಾರದು. ಅದರೆ ಇವುಗಳು ವೃಕ್ಷಗಳಲ್ಲಿ ಹೇಗೆ ಉತ್ಪನ್ನವಾಗಿರುತ್ತವೆಯೋ/ಬಿಟ್ಟಿರುತ್ತವೆಯೋ ಹಾಗೇ ದೇವರಿಗೆ ಸಮರ್ಪಿಸಬೇಕು ಮತ್ತು ಬ್ರಾಹ್ಮಣರಿಗೆ ಕೊಡಬೇಕು. ಆದರೆ ಬಿಲ್ವಪತ್ರವನ್ನು ದೇವರಿಗೆ ಅಧೋಮುಖವಾಗಿಯೇ ಸಮರ್ಪಿಸಬೇಕು.

9. ದೇವರಿಗೆ ಏರಿಸಲು ವಿಹಿತವಾದ ಪುಷ್ಪಗಳಲ್ಲಿ ಶ್ರೇಷ್ಠವಾದ ಪುಷ್ಪಯಾವುದು?

ಉ. (ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ - ಆಹ್ನಿಕಪ್ರಕರಣ ಪುಟ 142)
ಪಾದ್ಮೇ:-
ವರ್ಣಾನಾಂ ತು ಯಥಾ ವಿಪ್ರಃ ತೀರ್ಥಾನಾಂ ಜಾಹ್ನವೀ ಯಥಾ ।
ಸುರಾಣಾಂ ಚ ಯಥಾ ವಿಷ್ಣುಃ ಪುಷ್ಪಾಣಾಂ ಮಾಲತೀ ಯಥಾ ॥

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಮಾಲತೀ ಪುಷ್ಪವು ಅಂದರೆ ಜಾಜೀಹೂವು ಪುಷ್ಪಗಳಲ್ಲಿ ಶ್ರೇಷ್ಠವಾದ ಪುಷ್ಪ.

**10. ಶಂಖವನ್ನು ಭೂಮಿಯ ಮೇಲೆ ಇಡಬಾರದೆಂದು ಹೇಳುತ್ತಾರೆ ಇದಕ್ಕೆ ಕಾರಣವೇನು? ಮತ್ತು ಪ್ರಮಾಣವೇನು?**

**ಉ. ಯಸ್ತು ಶಂಖಂ ಭುವಿ ಸ್ಥಾಪ್ಯ ಪೂಜಯೇನ್ಮಧುಸೂದನಮ್ ।
ತಸ್ಯ ಪೂಜಾಂ ನ ಗೃಹ್ಣಾತಿ ತಸ್ಮಾತ್ಪೀಠಂ ಪ್ರಕಲ್ಪಯೇತ್ ॥**

**(ಸ್ಮ.ಮು.ಆ.ಪ್ರ. ಪುಟ-269)**

ಎಂಬ ಪ್ರಮಾಣದಲ್ಲಿ ಹೇಳಿದಂತೆ ಶಂಖವನ್ನು ಭೂಮಿಯ ಮೇಲೆ ಇಟ್ಟು ಪೂಜೆ ಮಾಡಿದರೆ ಅಂತಹ ಪೂಜೆಯನ್ನು ಭಗವಂತನು ಸ್ವೀಕರಿಸುವುದಿಲ್ಲ. ಆದಕಾರಣ ಶಂಖವನ್ನು ಪೀಠದ ಮೇಲೆ ಇಡಬೇಕು.

**11. ವೈಶ್ವದೇವವನ್ನು ಮಾಡದಲೆ ನಾವು ಭೋಜನ ಮಾಡಬಹುದೆ?**

**ಉ. ಪರಾಶರಃ : -**

**ಅಕೃತ್ವಾ ವೈಶ್ವದೇವಂ ತು ಯೋಽನ್ನಂ ಭುಂಕ್ತೇ ದ್ವಿಜಾಧಮಃ ।
ಸ ಭುಂಕ್ತೇ ಹಿ ಕ್ರಿಮೀನ್ಸರ್ವಾನ್ ಕಾಕಯೋನಿಷು ಜಾಯತೇ ॥**

ಅಂದರೆ ಯಾರು ವೈಶ್ವದೇವವನ್ನು ಮಾಡದಲೆ ಭೋಜನವನ್ನು ಮಾಡುತ್ತಾರೊ ಅವರು ಕ್ರಿಮಿಗಳನ್ನು ತಿಂದಂತೇ ಸರಿ. ಮತ್ತು ಕಾಗೆಯ ಯೋನಿಗಳಲ್ಲಿ ಹುಟ್ಟುತ್ತಾರೆ. ಆದಕಾರಣ ವೈಶ್ವದೇವ ಮಾಡಿಯೇ ಭೋಜನ ಮಾಡಬೇಕು.

**12. ದೇವರಿಗೆ ಹೂವನ್ನು ತೊಳೆದು ಏರಿಸಬೇಕೆ? ತೊಳೆಯದಲೆ ಏರಿಸಬೇಕೆ?**

**ಅಪ್ರಕ್ಷಾಲಿತಪುಷ್ಪಾಣಿ ಪ್ರಕ್ಷಾಲ್ಯ ತುಲಸೀಂ ತಥಾ ॥**

**ಇತಿ ಶತಾಪರಾಧಮಧ್ಯೇ ಅಪ್ರಕ್ಷಾಲಿತಪುಷ್ಪಸಮರ್ಪಣಸ್ಯ ಅಪರಾಧತ್ವೇ ನೋಕ್ತೇಃ ।**

ಅಂದರೆ ಸಂಪಿಗೆ ಹೂವೇ ಮೊದಲಾದ ಹೂಗಳನ್ನು ದೇವರಿಗೆ ಏರಿಸಬೇಕಾದರೆ ಅದನ್ನು ನೀರಿನಿಂದ ತೊಳೆದೇ ಏರಿಸಬೇಕು. ತೊಳೆಯದಲೆ ಏರಿಸಬಾರದು. ನೂರು ಅಪರಾಧಗಳ ಪೈಕಿ ಹೂಗಳನ್ನು ತೊಳೆಯದಲೆ ದೇವರಿಗೆ ಏರಿಸುವುದೂ ಒಂದು ಅಪರಾಧವೆಂದು ಪುರಾಣಗಳಲ್ಲಿ ಪ್ರಸಕ್ತವಾದ ಶತಾಪರಾಧಸ್ತೋತ್ರದಲ್ಲಿ ಹೇಳಿದ್ದಾರೆ. ಆದರೆ ಕ್ಷಾಲನೇ ಯಸ್ಯ ರಂಗೋ ಗಚ್ಛತಿ ತನ್ನ ಕ್ಷಾಲಯೇತ್ ॥ ಅಂದರೆ ನೀರಿನಿಂದ

ತೊಳೆಯುವುದರಿಂದ ಯಾವ ಹೂವಿನ ಬಣ್ಣವು ಹೋಗುತ್ತದೋ ಆ ಹೂವನ್ನು ನೀರಿನಿಂದ ತೊಳೆಯಬಾರದು. ಆದರೆ ನೀರಿನಿಂದ ಪ್ರೋಕ್ಷಣೆ ಮಾಡಿ ಅದನ್ನು ದೇವರಿಗೆ ಏರಿಸಬೇಕು.

ಆದರೆ ಸ್ತ್ರೀಯರು ತಮ್ಮ ಭೋಗದ ಸಲುವಾಗ (ಮುಡೆಯಲು) ಹೂವನ್ನು ಉಪಯೋಗಿಸುವುದಾದರೆ " ಪತ್ರಂ ಪುಷ್ಪಂ ಪ್ರಕ್ಷಾಲನೇನ ಗಂಧರಹಿತಂ ಸ್ಯಾತ್ ತತ್ ಪ್ರೋಕ್ಷಯೇತ್। ಇದಂ ತು ಭೋಗಾರ್ಥಮ್'' ಎಂದು ಹೇಳಿದಂತೆ ಹೂವನ್ನು ನೀರಿನಿಂದ ಪ್ರೋಕ್ಷಣೆ ಮಾಡಿ ಮುಡಿಯಬೇಕು.

**13. ದೇವರ ಮನೆಯಲ್ಲಿ ತೆಂಗಿನ ಕಡ್ಡಿಯ ಕಸಬರಿಗೆಯಿಂದೇ ಆಗಲಿ ಅಂಚಿನ ಕಡ್ಡಿ ಕಸಬರಿಗೆಯಿಂದಲೇ ಆಗಲಿ ಕಸವನ್ನು ಗುಡಿಸಬಾರದು. ಹುಲ್ಲಿನ ಕಸಬರಿಗೆಯಿಂದ ಗುಡಿಸಬೇಕೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

**ಉ. (ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀಕೃತಪುಟ ೩೦)**
**"ಶನೈಸ್ಸಮ್ಮಾರ್ಜನಂ ಕುರ್ಯಾತ್ ಮಾರ್ಜನ್ಯಾ ಮೃದುಕೂರ್ಚಯಾ"**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ದೇವರ ಮನೆಯಲ್ಲಿ ಹುಲ್ಲಿನ ಕಸಬರಿಗೆ ಮೊದಲಾದ ಮೃದುವಾದ ಕಸಬರಿಗೆಯಿಂದ ನಿಧಾನವಾಗಿ ಕಸವನ್ನು ಗುಡಿಸಬೇಕು.

**14. ನೀರಾಗಿರುವ ಗಂಧವನ್ನು (ದ್ರವೀಭೂತವಾದ ಗಂಧವನ್ನು) ದೇವರಿಗೆ ಸಮರ್ಪಿಸಬಹುದೇ?**

**ಉ. (ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀಕೃತಪುಟ ೩೨)**
**ವಾರಾಹೇ - ದ್ರವೀಭೂತಂ ಘೃತಂ ಚೈವ ದ್ರವೀಭೂತಂ ಚ ಚಂದನಂ।**
**ನಾರ್ಪಯೇತ್ ಮಮ ತುಷ್ಟ್ಯರ್ಥಂ ಘನೀಭೂತಂ ತದರ್ಪಯೇತ್।**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ನೀರಾದ ತುಪ್ಪವನ್ನೇ ಆಗಲಿ, ನೀರಾದ ಗಂಧವನ್ನೇ ಆಗಲಿ ದೇವರಿಗೆ ಸಮರ್ಪಣೆ ಮಾಡಬಾರದು.

**15. ಪ್ರತಿನಿತ್ಯ ಪ್ರಾತಃಕಾಲದ ಸಂಧ್ಯಾವಂದನೆಯನ್ನು ಮಾಡಿದ ಮೇಲೆ ದೇವರ ನಿರ್ಮಾಲ್ಯವಿಸರ್ಜನೆ ಮಾಡಬೇಕೊ? ಅಥವಾ ನಿರ್ಮಾಲ್ಯವಿಸರ್ಜನೆ ಮಾಡಿದ ಮೇಲೆ ಪ್ರಾತಃಕಾಲದ ಸಂಧ್ಯಾವಂದನೆ ಯನ್ನು ಮಾಡಬೇಕೊ?**

**ಉ. (ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀಕೃತಪುಟ ೨೩)**
**"ಅಥ ಸಂಧ್ಯೋತ್ತರಂ ನಿರ್ಮಾಲ್ಯವಿಸರ್ಜನಂ ಕುರ್ಯಾತ್।**

**ತಥಾ ಚೋಕ್ತಂ ನಾರಸಿಂಹೇ -**
**"ಯಃ ಪ್ರಾತರುತ್ಥಾಯ ವಿಧಾಯ ನಿತ್ಯಂ ನಿರ್ಮಾಲ್ಯಮೀಶಸ್ಯ ನಿರಾಕರೋತಿ?**
**ನ ತಸ್ಯ ದುಃಖಂ ನ ದರಿದ್ರತಾ ಚ ನಾಕಾಲಮೃತ್ಯುಃ ನ ಚ ರೋಗಮಾತ್ರಂ ॥ಇತಿ॥**
**ನಿತ್ಯಂ - ಸಂಧ್ಯಾವಂದನಂ ವಿಧಾಯೇತ್ಯರ್ಥಃ।**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪ್ರತಿನಿತ್ಯ ಪ್ರಾತಃಕಾಲದ ಸಂಧ್ಯಾವಂದನೆಯನ್ನು ಮಾಡಿದ ಮೇಲೆ ದೇವರ ನಿರ್ಮಾಲ್ಯ ವಿಸರ್ಜನೆಯನ್ನು ಮಾಡಬೇಕು.

**16. ಶ್ರೀ ವಾಯುದೇವರ ನೈವೇದ್ಯವನ್ನು ನಾವು ಸ್ವೀಕರಿಸಬಹುದೆ? ಇಲ್ಲವೆ? ಸ್ವೀಕರಿಸಬಹುದಾದಲ್ಲಿ ಆ ವಿಷಯಕ ಪ್ರಮಾಣವೇನು?**

**ಉ. (ವಾಮನ ಪುರಾಣ ಕನ್ನಡ ತತ್ತ್ವವಾದ ಸೆಪ್ಟೆಂಬರ ೮೬ ಪುಟ ೪)**
**ಜಗತ್ಪ್ರಭುಃ ದೇವದೇವಃ ನಿರ್ದೋಷಃ ಶ್ರೀಶವಲ್ಲಭಃ।**
**ದೇವತಾಸು ತದನ್ಯಸ್ಯ ನೈವೇದ್ಯಂ ವರ್ಜಯೇದ್ಬುಧಃ ॥**
**ಪವಿತ್ರಂ ಪವಮಾನಸ್ಯ ಭುಕ್ತಶೇಷಂ ಜಗದ್ಗುರೋಃ।**
**ಭುಂಜೀತ ಭಕ್ತಿಭಾವೇನ ಭಕ್ತಿಜ್ಞಾನವಿವರ್ಧನಂ ॥**
**ವಾಯೂಪಭುಕ್ತನೈವೇದ್ಯಂ ನ ಗ್ರಾಹ್ಯಮಿತಿ ಯೋ ವದೇತ್।**
**ಸ ಭುಕ್ತ್ವಾ ನರಕಾನ್ ಘೋರಾನ್ ಚಂಡಾಲೋ ಭುವಿ ಜಾಯತೇ ॥**
**- ವಾಮನ ಪುರಾಣ**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಜಗದ್ಗುರುಗಳಾದ ಶ್ರೀವಾಯುದೇವರ ನೈವೇದ್ಯವನ್ನು ನಾವು ಅವಶ್ಯವಾಗಿ ತೆಗೆದುಕೊಳ್ಳಲೇ ಬೇಕು. ಶ್ರೀ ವಾಯುದೇವರ ನೈವೇದ್ಯವು ಗ್ರಾಹ್ಯವಲ್ಲವೆಂದು ಯಾರು ಹೇಳುತ್ತಾರೋ ಅವರು ಘೋರ ನರಕಗಳನ್ನು ಅನುಭವಿಸಿ ಭೂಮಿಯಲ್ಲಿ ಚಂಡಾಲರಾಗಿ ಹುಟ್ಟುತ್ತಾರೆ.

# ತುಳಸಿ

**17. ದೇವರ ಪೂಜೆಗೆ ಸ್ನಾನಮಾಡದಲೆ ತುಳಸಿಯನ್ನು ಕಿತ್ತಬಹುದೇ?**

**ಉ. ಅಸ್ನಾನಹರಣೇ ದೋಷಃ-**
**ಅಸ್ನಾತ್ವಾ ತುಲಸೀಂ ಛಿತ್ವಾ ದೇವಾರ್ಚಾ ಪಿತೃಕರ್ಮಣಿ।**

**ತತ್ಸರ್ವಂ ನಿಷ್ಫಲಂ ಯಾಂತಿ ಪಂಚಗವ್ಯೇನ ಶುದ್ಧ್ಯತಿ ।ಇತಿ।**
ಎಂದು ಸ್ಮೃತಿ ಮುಕ್ತಾವಳಿ - ಅಹ್ನಿಕಪ್ರಕರಣ ಪುಟ 144 ರಲ್ಲಿ ಹೇಳಿರುವಂತೆ ದೇವರ ಪೂಜೆಗೆ ಸ್ನಾನ ಮಾಡದಲೆ ತುಳಸಿಯನ್ನು ಕಿತ್ತಬಾರದು. ಒಂದು ವೇಳೆ ಸ್ನಾನ ಮಾಡದಲೆ ತುಳಸಿಯನ್ನು ಕಿತ್ತಿ ಅದರಿಂದ ದೇವಪೂಜಾದಿಗಳನ್ನು ಮಾಡಿದರೆ ಅಂತಹ ದೇವಪೂಜಾದಿಗಳೆಲ್ಲವೂ ನಿಷ್ಫಲವಾಗುವುದಲ್ಲದೇ ನಾವು ಪಂಚಗವ್ಯವನ್ನು ಪ್ರಾಶನ ಮಾಡಿ ಶುದ್ಧರಗಾಬೇಕಾಗುತ್ತದೆ.

**18. ನಿಷಿದ್ಧವಾದ ತಿಥಿ-ವಾರಗಳಲ್ಲಿ ದೇವರ ಪೂಜೆಗಾಗಿ ತುಳಸಿಯನ್ನು ಕಿತ್ತಿದರೆ ದೋಷವೇ?**

**ಉ. (ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ - ಆಹ್ನಿಕಪ್ರಕರಣ ಪುಟ 144)**
**ವಿಷ್ಣುರಹಸ್ಯೇ:-**
**ನಿಷಿದ್ಧತಿಥಿವಾರೇಷು ತುಲಸ್ಯಾಹರಣಂ ಮುನೇ ।**
**ವೈಷ್ಣವಾನಾಂ ನ ದೋಷಾಯ ವಿಷ್ಣೋಃ ಪ್ರೀತಿಕರತ್ವತಃ ॥**
ಎಂದು ವಿಷ್ಣುರಹಸ್ಯದಲ್ಲಿ ಹೇಳಿದಂತೆ, ವೈಷ್ಣವರು ನಿಷಿದ್ಧ-ತಿಥಿ-ವಾರಗಳಲ್ಲಿ ದೇವರ ಪೂಜೆಯ ಸಲುವಾಗಿ ತುಳಸಿಯನ್ನು ಕಿತ್ತಿದರೆ ದೋಷವಿಲ್ಲ.

**19. ತುಳಸೀಮಣಿ ಮಾಲೆಯನ್ನು ಏಕೆ ಧರಿಸಬೇಕು?**

**ಉ. ತುಳಸೀಮಣಿಹೀನಂ ಚ ಗಾತ್ರಂ ನಿಸ್ಸಾರಮುಚ್ಯತೇ ॥**
ಎಂದು ಗರುಡಪುರಾಣ ಬ್ರಹ್ಮಕಾಂಡದಲ್ಲಿ ಹೇಳಿದಂತೆ ತುಳಸೀಮಣಿ ಮಾಲೆಯನ್ನು ಕಂಠದಲ್ಲಿ ಧರಿಸದಿದ್ದರೆ ನಮ್ಮ ದೇಹವು ನಿಸ್ಸಾರವಾಗುತ್ತದೆ. ಆದ್ದರಿಂದ ನಮ್ಮ ದೇಹವು ಸಾರವತ್ತಾದದ್ದು ಆಗಬೇಕಾದರೆ ತುಳಸೀಮಣಿಮಾಲೆಯನ್ನು ಅವಶ್ಯವಾಗಿ ಧರಿಸಲೇಬಾಕು.

**20. ಪ್ರತಿ ನಿತ್ಯದಲ್ಲೂ ನಾವು ಎಷ್ಟು ತುಳಸೀದಳಗಳನ್ನು ಹೇಗೆ ಉಪಯೋಗಿಸ ಬೇಕು?**

**ಉ. ಚತುಃ ಕರ್ಣೇ, ಮುಖೇ ಚೈಕಂ, ನಾಭಾವೇಕಂ ತಥೈವ ಚ ।**
**ಶಿರಸ್ಯೇಕಂ, ತಥಾ ಪ್ರೋಕ್ತಂ, ತೀರ್ಥೇ ತ್ರಯಮುದಾಹೃತಮ್ ॥**
**ಅನ್ನೋಪರಿ ತಥಾ ಪಂಚ, ಭೋಜನಾಂತೇ ದಲತ್ರಯಮ್ ।**
**ಏವಂ ಶ್ರೀತುಲಸೀ ಗ್ರಾಹ್ಯಾ ಅಷ್ಟಾದಶದಲಾ ಸದಾ ॥**

ಎಂದು ಹೇಳಿರುವಂತೆ ಒಂದೊಂದು ಕಿವಿಯಲ್ಲಿ ಎರಡರಂತೆ ಎರಡು ಕಿವಿಗಳಲ್ಲಿ ನಾಲ್ಕು ದಳಗಳನ್ನು ಬಾಯಿಯಲ್ಲಿ ಒಂದು ದಳವನ್ನು ನಾಭಿಯಲ್ಲಿ ಒಂದು ದಳವನ್ನು ಶಿರಸ್ಸಿನಲ್ಲಿ ಒಂದು ದಳವನ್ನು ಧರಿಸಿ ಮೂರು ದಳಗಳನ್ನು ತೀರ್ಥಪಾನ ಮಾಡುವಾಗ, ಪಂಚಪ್ರಾಣಾಹುತಿಯ ಸಮಯದಲ್ಲಿ ಐದು ದಳಗಳನ್ನು ಭೋಜನದ ತರುವಾಯ ಮೂರು ದಳಗಳನ್ನು ಉಪಯೋಗಿಸ ಬೇಕು.ಹೀಗೆ ಪ್ರತಿನಿತ್ಯದಲ್ಲೂ ಹದಿನೆಂಟು ತುಳಸೀ ದಳಗಳನ್ನು ಉಪ ಯೋಗಿಸಬೇಕು.

**21. ತುಳಸಿಯನ್ನು ಗಿಡದಿಂದ ಕಿತ್ತುವಾಗ ಉಗುರಿನ ಸ್ಪರ್ಶವಾಗಬಾರದೆಂದು ಕೆಲವರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **"ನಖಸ್ಪರ್ಶೇನ ರಹಿತಂ ಚಿನುಯಾತ್ ಶುಚಿನಾ ಸ್ವಯಮ್ ।"**
ಎಂದು ಪ್ರಮಾಣದಲ್ಲಿ ಹೇಳಿದಂತೆ ಉಗುರಿನ ಸ್ಪರ್ಶವಾಗದಂತೆ ಪವಿತ್ರಮನಸ್ಕನಾಗಿದ್ದುಕೊಂಡು ತುಳಸೀದಳಗಳನ್ನು ಗಿಡದಿಂದ ಕಿತ್ತಬೇಕು.

**22. ಭಗವಂತನ ಪೂಜೆಗೆ ಅತ್ಯವಶ್ಯಕವೂ ಮತ್ತು ಭಗವಂತನಿಗೆ ಅತ್ಯಂತ ಪ್ರಿಯವಾದದ್ದು ತುಳಸೀ, ಈ ಪತ್ರವಿಶೇಷವನ್ನು ತುಳಸೀ ಎಂದು ಕರೆಯಲು ಕಾರಣವೇನು?**

ಉ. ಬ್ರಹ್ಮವೈವರ್ತಪುರಾಣದಲ್ಲಿ **" ನರಾಃ ನಾರ್ಯಶ್ಚ ತಾಂ ದೃಷ್ಟ್ವಾ ತುಲನಾಂ ದಾತುಮಕ್ಷಮಾಃ । ತೇನ ನಾಮ್ನಾ ಚ ತುಲಸೀಂ ತಾಂ ವದನ್ತಿ ಪುರಾವಿದಃ ॥"** ಎಂದು ಹೇಳಿದಂತೆ ಹಿಂದೆ ನರರು ಮತ್ತು ನಾರಿಯರು ಕೂಡಿ ವಿಚಾರ ಮಾಡಿದರೂ ತುಲಸಿಗೆ ಸಮರಾದವರು ಯಾರೂ ಸಿಗದಿದ್ದರಿಂದ ತುಲನೆ ಮಾಡಲು ಬಾರದ ಕಾರಣ ತುಲಸೀ ಎಂದೇ ಕರೆದರಂತೆ. ಸತ್ಯಭಾಮೆಯು ಶ್ರೀಕೃಷ್ಣನ ತುಲಾಭಾರದ ಸಂದರ್ಭದಲ್ಲಿ ಎಷ್ಟು ಮುತ್ತು-ರತ್ನ-ಬಂಗಾರ ಹಾಕಿದರೂ ಶ್ರೀಕೃಷ್ಣನ ತೂಕ ಬರಲಿಲ್ಲ. ಆಗ ರುಕ್ಮಿಣೀದೇವಿಯು ಬಂದು ಒಂದು ತುಳಸೀದಳವನ್ನು ತಕ್ಕಡಿಯಲ್ಲಿ ಇಟ್ಟಕೂಡಲೇ ತೂಕ ಬಂದಿತೆಂದು ತುಳಸಿಯ ಮಹಿಮೆಯನ್ನು ಕೊಂಡಾಡಲಾಗಿದೆ. ಆದ್ದರಿಂದ ಬೇರೆ ಯಾವ ಪದಾರ್ಥದೊಡನೆಯೂ ಇದನ್ನು ತುಲನೆ ಮಾಡಲು ಬರುವುದಿಲ್ಲವಾದ ಕಾರಣ ಇದನ್ನು ತುಲಸೀ ಎಂದು ಕರೆಯುತ್ತಾರೆ (ಕರೆಯಲಾಗಿದೆ).

**23. ತುಳಸಿ ಮತ್ತು ಪುಷ್ಪಗಳಲ್ಲಿ ಎಷ್ಟು ಭಗವದ್ರೂಪಗಳು ಇವೆ?**

**ಉ. ಚತುರ್ವಿಂಶತಿರೂಪಾಣಿ ಜಲಮಧ್ಯೇ ಸ್ಥಿತಾನಿ ಚ ।**
**ಶೃಣು ಪಂಚಸಹಸ್ರೈಶ್ಚತ್ರಿಶತ್ಯೈಶ್ಚೈಕಷೋಡಶೈಃ ॥**
**ತುಲಸೀಗತರೂಪಾಣಿ ಜ್ಞೇಯಾನಿ ವಿಬುಧೈಸ್ಸದಾ ।**
**ಸುಮನೋಗಣಮಧ್ಯಸ್ಥೋ ಜ್ಯೋತಿದೀಪಗತೋ ಭವೇತ್ ।**
**ಗಂಧದೋ ಗಂಧಗೋಪ್ಯಾಸೀತ್ ತ್ರ್ಯಧಿಕೈಶ್ಚಚತುಶ್ಶತೈಃ ॥ ಇತಿ.**
ಹರಿಕಥಾಮೃತಸಾರ - ಸಂ 5 - ಪ8 ಶ್ರೀಜಗನ್ನಾಥದಾಸರು
ವಾರಿಯೊಳಗಿಪ್ಪತ್ತು ನಾಲಕು
ಮೂರೆರಡು ಸಾವಿರದ ಮೇಲ್ಮ
ನ್ನೂರು ಹದಿನೇಳೆನಿಪ ರೂಪವು ಶ್ರೀತುಳಸಿದಳದಿ ।
ನೂರು ಅರವತ್ತೊಂದು ಪುಷ್ಪದಿ
ಮೂರಧಿಕ ದಶ ದೀಪದೊಳು ನಾ
ನೂರು ಮೂರು ಸುಮೂರ್ತಿಗಳು ಗಂಧದೊಳಗಿರುತಿಹವು ॥
ಎಂದು ಹೇಳಿದಂತೆ ತುಳಸೀ ಮುಂತಾದವುಗಳಲ್ಲಿ ಇರುವ

| | |
|---|---|
| ನೀರಿನಲ್ಲಿ | - 24 ಭಗದ್ರೂಪಗಳು |
| ತುಳಸಿಯಲ್ಲಿ | - 5317 ಭಗವದ್ರೂಗಳು |
| ಪುಷ್ಪದಲ್ಲಿ | - 161 ಭಗವದ್ರೂಪಗಳು |
| ದೀಪದಲ್ಲಿ | -13 ಭಗವದ್ರೂಪಗಳು |
| ಗಂಧದಲಿ | - 403 ಭಗವದ್ರೂಪಗಳು ಇವೆ |

# ಏಕಾದಶಿ - ದ್ವಾದಶಿ

**24. ಪ್ರತಿ ದ್ವಾದಶೀ ದಿನದಿಂದುಬಾಳೆಎಲೆಯ ಮೇಲೆ ಊಟ ಮಾಡಬಾರದೆಂದು ಕೆಲವರು ಹೇಳುತ್ತಾರೆ. ಇದಕ್ಕೆ ಕಾರಣವೇನು?**

**ಉ. "ರಂಭಾಪಲಾಶಪತ್ರೇ ಚ ಯೋ ಭುಂಕ್ತೇ ದ್ವಾದಶೀದಿನೇ ।**
**ಸಪ್ತಜನ್ಮಾರ್ಜಿತಂ ಪುಣ್ಯಂ ತತ್ಕ್ಷಣಾದೇವ ನಶ್ಯತಿ ॥"**
ಬಾಳೆಎಲೆ - ಮುತ್ತುಗದ ಎಲೆ ಇವುಗಳ ಮೇಲೆ ದ್ವಾದಶೀ ದಿನದಂದು ಭೋಜನ ಮಾಡಿದರೆ, ಏಳು ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯವು ತಕ್ಷಣದಲ್ಲಿಯೇ ನಷ್ಟವಾಗುತ್ತದೆ.

**25. ಏಕಾದಶೀ ದಿನದಂದು ನಮ್ಮ - ನಮ್ಮ ಮನೆಗಳಲ್ಲಿ ದೇವರಿಗೆ ಅನ್ನವನ್ನು ನಿವೇದಿಸಬಹುದೇ?**

ಉ. **"ಅಥವಾ ಉಭಯವಾಕ್ಯಾನುಸಾರಾತ್ ಸ್ವಯಂವ್ಯಕ್ತಾದಿಸ್ಥಲೇ ಅನ್ನನೈವೇದ್ಯಂ ಕಾರ್ಯಮ್।**

**ಗೃಹಾರ್ಚಾದೌ ಚ ಫಲಾದಿಕಮೇವ ನೈವೇದ್ಯಮಿತ್ಯವಿರೋಧೋ ಜ್ಞೇಯಃ॥"**

ಎಂದು ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಲೀಕಾಲನಿರ್ಣಯ ಪ್ರಕರಣದಲ್ಲಿ ಹೇಳಿದಂತೆ, ಸ್ವಯಂವ್ಯಕ್ತ ಪ್ರತಿಮಾವುಳ್ಳ ತಿರುಪತಿ-ಉಡುಪಿ ಮುಂತಾದ ಸ್ಥಳಗಳಲ್ಲಿ ಏಕಾದಶೀ ದಿನದಂದು ದೇವರಿಗೆ ಅನ್ನ ನೈವೇದ್ಯವನ್ನು ಮಾಡಬಹುದು. ನಮ್ಮ - ನಮ್ಮ ಮನೆಗಳಲ್ಲಾದರೂ ದೇವರ ಪ್ರತಿಮೆ ಮುಂತಾದವುಗಳಿಗೆ ಹಣ್ಣು ಮುಂತಾದವುಗಳ ನೈವೇದ್ಯವನ್ನೇ ಮಾಡಬೇಕು. ಅನ್ನ ನೈವೇದ್ಯವನ್ನು ಮಾಡಬಾರದು.

**26. ಏಕಾದಶಿ ಮತ್ತು ದ್ವಾದಶೀ ದಿನಗಳಲ್ಲಿ ನೆಲ್ಲಿಕಾಯಿ ರಸವನ್ನು ಹಚ್ಚಿಕೊಂಡು ಸ್ನಾನಮಾಡಬೇಕು ಮತ್ತು ದ್ವಾದಶೀ ದಿನದಂದು ನೆಲ್ಲಿಕಾಯಿ ಭಕ್ಷಣವನ್ನು ಮಾಡಬೇಕೆಂದು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **ತುಷ್ಯತ್ಯಾಮಲಕೈಃ ವಿಷ್ಣುಃ ಏಕಾದಶ್ಯಾಂ ವಿಶೇಷತಃ।**

**ದ್ವಾದಶ್ಯಾಂ ತು ವಿಶೇಷೇಣ ಭಕ್ಷಯೇತ್ ಸ್ನಾನಮಾಚರೇತ್॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಏಕಾದಶೀ - ದ್ವಾದಶೀ ದಿನಗಳಲ್ಲಿ ನೆಲ್ಲೀಕಾಯಿಯ ರಸವನ್ನು ಹಚ್ಚಿಕೊಂಡು ಸ್ನಾನಮಾಡಬೇಕು ಮತ್ತು ದ್ವಾದಶೀ ದಿನದಂದು ವಿಶೇಷವಾಗಿ ನೆಲ್ಲೀಕಾಯಿಯನ್ನು ಭಕ್ಷಿಸಬೇಕು.

**27. ಪ್ರಾತಃಕಾಲದಲ್ಲಿ ಧಾತ್ರೀಫಲದಿಂದ ಸ್ನಾನಮಾಡಬಾರದೆಂದು ಕೆಲವರು ಹೇಳುತ್ತಾರೆ. ಹಾಗೆ ನಿಷೇಧವಿದೆಯೇ? ಇದ್ದರೆ ದ್ವಾದಶೀ ದಿನದಲ್ಲಿ ಪ್ರಾತಃಕಾಲದಲ್ಲಿ ಧಾತ್ರೀಫಲದಿಂದ ಸ್ನಾನಮಾಡುವುದು ಹೇಗೆ ಸಮಂಜಸ ವಾಗುತ್ತದೆ?**

ಉ. **ಧಾತ್ರೀಫಲೇನ ಸ್ನಾನಂ ಪ್ರಾತಃಕಾಲೇ ಚ ವರ್ಜಯೇತ್।ಇತಿ॥**

**ಏತತ್ ದ್ವಾದಶೀವ್ಯತಿರಿಕ್ತವಿಷಯಮ್।**

**ದ್ವಾದಶ್ಯಾಂ ತು ವಿಶೇಷೇಣ ಭಕ್ಷಯೇತ್ ಸ್ನಾನಮಾಚರೇತ್।**

**ಇತಿ ವಿಶೇಷವಿಧಾನಾತ್॥**

ಎಂದು ಹೇಳಿದಂತೆ ದ್ವಾದಶೀ ವ್ಯತಿರಿಕ್ತ ದಿನಗಳಲ್ಲಿ ಪ್ರಾತಃಕಾಲದಲ್ಲಿ ಧಾತ್ರೀ

ಫಲದಿಂದ ಸ್ನಾನಮಾಡಬಾರದು. ದ್ವಾದಶೀ ದಿನದಂದು ಪ್ರಾತಃಕಾಲದಲ್ಲಿ ಧಾತ್ರೀಫಲದಿಂದ ಸ್ನಾನಮಾಡಿದರೆ ಯಾವ ದೋಷವೂ ಇರುವುದಿಲ್ಲ.

**28. ಏಕಾದಶೀ ದಿನ ಷಣ್ಣವತಿ ಶ್ರಾದ್ಧ ಬಂದರೆ ತರ್ಪಣದ ಬದಲು ಪವಮಾನ ಸೂಕ್ತ ಪಾರಾಯಣ ಮಾಡುತ್ತೇವೆ. ಇದಕ್ಕೆ ಕಾರಣವೇನು ಮತ್ತು ಪ್ರಮಾಣವೇನು?**

**ಉ. ಏಕಾದಶ್ಯಾಂ ಸಂಕ್ರಾಂತ್ಯಾದಿವಿಷಯೇ-**
**ವ್ಯತೀಪಾತಶ್ಚ ಸಂಕ್ರಾಂತಿಃ ವೈಧೃತಿರ್ವಾ ಯದಾ ಭವೇತ್ ।**
**ಏಕಾದಶ್ಯಾಂ ತದಾ ವಿದ್ವಾನ್ ಪಾವಮಾನೀ ಋಚಃ ಪಠೇತ್ ॥**
**ಅಥವಾ ಪಿತೃಸೂಕ್ತಾನಿ ಸ್ವಸ್ವಶಾಖೋದಿತಾನಿ ಚ ।**
**ತೇನೈವ ತೃಪ್ತಿಮಾಯಾಂತಿ ತಥೈವ ಹರಿವಾಸರೇ ॥**
**ಯದಿ ಮೋಹಾತ್ ಪ್ರಕುರ್ವೀತ ಶ್ರಾದ್ಧಹೋಮಾದಿ ಕಿಂಚನ ।**
**ಜಲಂ ಮೂತ್ರಸಮಂ ತಚ್ಚ ಹವ್ಯಕವ್ಯಂ ಚ ವಿಟ್ಸಮಮ್ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಷಣ್ಣವತಿ ಶ್ರಾದ್ಧದ ದಿನದಂದು ಪಿತೃಗಳಿಗೆ ತಿಲತರ್ಪಣವನ್ನು ಕೊಡಬೇಕೆಂದು ಯದ್ಯಪಿ ಶಾಸ್ತ್ರದಲ್ಲಿ ಹೇಳಿದ್ದರೂ, ಏಕಾದಶೀ ದಿನದಂದು ಷಣ್ಣವತಿ ಶ್ರಾದ್ಧವು ಬಂದರೆ ಅಂದು ಪಿತೃಗಳಿಗೆ ತಿಲತರ್ಪಣವನ್ನು (ತರ್ಪಣವನ್ನು) ಕೊಡಬಾರದು. ಅದರ ಬದಲಾಗಿ ಪವಮಾನಸೂಕ್ತ ಪಾರಾಯಣವನ್ನು ಮಾಡಬೇಕು. ಅದರಿಂದಲೇ ಪಿತೃಗಳು ತೃಪ್ತರಾಗುತ್ತಾರೆ ಅಥವಾ ತಮ್ಮ ತಮ್ಮ ಶಾಖೆಯಲ್ಲಿ ಹೇಳಿರುವ (ಕಂಡುಬರುವ) ಪಿತೃ ಸೂಕ್ತಗಳನ್ನು ಪಠಿಸಬೇಕು. ಒಂದು ವೇಳೆ ಅಜ್ಞಾನದಿಂದ ಏಕಾದಶೀ ದಿನದಂದು ಶ್ರಾದ್ಧ-ಹೋಮ-ತರ್ಪಣ ಮುಂತಾದ ಕಾರ್ಯಗಳನ್ನು ಮಾಡಿದರೆ ಆ ಕಾರ್ಯದಲ್ಲಿ ಉಪಯೋಗಿಸುವ ಜಲವು ಮೂತ್ರಕ್ಕೆ ಸಮಾನವು. ಆ ಕಾರ್ಯದಲ್ಲಿ ಉಪಯೋಗಿಸುವ ಹವ್ಯ-ಕವ್ಯಗಳು ಅಮೇಧ್ಯಕ್ಕೆ ಸಮಾನ ಎಂದು ಶಾಸ್ತ್ರವು ಹೇಳುತ್ತದೆ. ಆದಕಾರಣ, ಏಕಾದಶೀ ದಿನದಂದು ಷಣ್ಣವತಿ ಶ್ರಾದ್ಧವು ಬಂದರೆ ಪಿತೃಗಳಿಗೆ ತರ್ಪಣವನ್ನು ಕೊಡಬಾರದು. ಅದರ ಬದಲು ಪವಮಾನ ಸೂಕ್ತವನ್ನು ಪಾರಾಯಣ ಮಾಡಬೇಕು.

**29. ಪ್ರತಿದ್ವಾದಶೀ ಅಗಸೆ ಮತ್ತು ನೆಲ್ಲೀಕಾಯಿಯನ್ನು ಸೇವಿಸಬೇಕೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಕಾರಣವೇನು? ಮತ್ತು ಪ್ರಮಾಣವೇನು? (ಕೃ.ಸ್ಮೃ.ಕಾ.ಪ್ರ.ಪು.-449)**

ಉ. **"ಅಸಂಭಾಷ್ಯಾನ್ ಸಮಾಭಾಷ್ಯತುಲಸ್ಯತಸಿಕಾದಲಮ್ ।**
**ಆಮಲಕ್ಯಾಃ ಫಲಂ ವಾಽಪಿ ಪಾರಣೇ ಪ್ರಾಶ್ಯ ಶುದ್ಧ್ಯತಿ ॥"**
ಎಂಬೀ ಮುಂತಾದ ಪ್ರಮಾಣಗಳಿಂದ ಪ್ರತಿದ್ವಾದಶಿಯ ನಿಯಮಗಳನ್ನು ತಿಳಿಸುವ ಸಂದರ್ಭದಲ್ಲಿ ತಿಥಿತ್ರಯದಲ್ಲಿ ಸಂಭಾಷಣೆಗೆ ಅನರ್ಹರಾದವರ ಜೊತೆಯಲ್ಲಿ ನಾವು ಸಂಭಾಷಣವನ್ನು ಮಾಡಿದರೆ ಬರುವ ದೋಷದಿಂದ ಮುಕ್ತರಾಗಿ ಶುದ್ಧರಾಗಬೇಕಾದರೆ ದ್ವಾದಶೀ ದಿನದಂದು ಅಗಸೆ ಮತ್ತು ನಲ್ಲೀಕಾಯಿಯನ್ನು ಸೇವಿಸಬೇಕೆಂದು ಹೇಳಿರುವುದರಿಂದ ಪ್ರತಿದ್ವಾದಶೀ ನಾವು ಅಗಸೆ ಮತ್ತು ನೆಲ್ಲೀಕಾಯಿಯನ್ನು ಸೇವಿಸಬೇಕು.

**30. ಸಾಧನ ದ್ವಾದಶೀದಿನದಂದು ಸ್ತ್ರೀಯರು ದ್ವಾದಶೀಘಳಿಗೆಯನ್ನು ಮೀರಿ ಪಾರಣೆಯನ್ನು ಮಾಡಿದರೆ ದೋಷವುಂಟೆ?**

ಉ. **(ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ ಆಹ್ನಿಕಪ್ರಕರಣ)**
**ಅಶಿರಸ್ಕಂ ಚ ಯತ್ಸ್ನಾನಂ ತಥಾ ಪರ್ಯುಷಿತಭೋಜನಮ್ ।**
**ದ್ವಾದಶ್ಯುಲ್ಲಂಘನಂ ಸ್ತ್ರೀಣಾಂ ನ ದೋಷೋ ಮನುರಬ್ರವೀತ್ ॥**
ಎಂದು ಮನುಸ್ಮೃತಿಯಲ್ಲಿ ಹೇಳಿದಂತೆ ಪ್ರತಿನಿತ್ಯ ತಲೆಯಮೇಲೆ ಸ್ನಾನಮಾಡದಿರುವುದು - ತಂಗಳನ್ನ ಭೋಜನ ಮತ್ತು ದ್ವಾದಶೀ ಉಲ್ಲಂಘನೆ ಇವುಗಳು ಸ್ತ್ರೀಯರಿಗೆ ದೋಷವಲ್ಲ ಆದ್ದರಿಂದ ಸ್ತ್ರೀಯರು ಸಾಧನ ದ್ವಾದಶೀ ದಿನದಂದು ದ್ವಾದಶೀಘಳಿಗೆಯನ್ನು ಮೀರಿ ಪಾರಣೆಯನ್ನು ಮಾಡಿದರೂ ದೋಷವಿಲ್ಲ.

**31. ದಶಮೀ ಮತ್ತು ದ್ವಾದಶೀದಿನಗಳಲ್ಲಿ ಪರಾನ್ನವನ್ನು ಭೋಜನ ಮಾಡುವುದು ಶಾಸ್ತ್ರಸಮ್ಮತವೇ?**

ಉ. **ಪರಾನ್ನಂ ಯೋ ಹಿ ಭುಂಜೀತ ದಶಮ್ಯಾಂ ದ್ವಾದಶೀದಿನೇ**
**ಏಕಾದಶೀವ್ರತಸ್ಯಾಸ್ಯ ದಶಮ್ಯಾಂ ತುರ್ಯಭಾಗತಃ ।**
**ದ್ವಾದಶ್ಯಾಮರ್ಧಭಾಗಶ್ಚ ದಾತಾರಮಧಿಗಚ್ಛತಿ ।**
ಎಂದು ಪ್ರಮಾಣದಲ್ಲಿ ಹೇಳಿದಂತೆ ದಶಮೀ ಮತ್ತು ದ್ವಾದಶೀ ದಿನಗಳಲ್ಲಿ

ಯಾವನು ಪರಾನ್ನವನ್ನು ಭೋಜನ ಮಾಡುತ್ತಾನೋ ಅವನು ಮಾಡಿದ ಏಕಾದಶೀವ್ರತದಲ್ಲಿ ದಶಮಿಯ ದಿನದ ನಾಲ್ಕನೆಯ ಒಂದುಭಾಗ ಪುಣ್ಯವು ದ್ವಾದಶಿಯ ಅರ್ಧಭಾಗಪುಣ್ಯವೂ ಅನ್ನದಾನ ಮಾಡಿದ ಯಜಮಾನನಿಗೆ ಸೇರುತ್ತದೆ. ಆದ್ದರಿಂದ ದಶಮೀ ಮತ್ತು ದ್ವಾದಶೀದಿನಗಳಲ್ಲಿ ಪರಾನ್ನ ಭೋಜನ ಮಾಡುವುದು ಶಾಸ್ತ್ರಸಮ್ಮತವಲ್ಲ. ನಮ್ಮ ಸ್ವಂತ ಮನೆಯಲ್ಲೇ ಭೋಜನ ಮಾಡಬೇಕು.

**32. ಶ್ರೀರಾಯರ ಮಠದವರಲ್ಲದೆ ಬೇರೆ ಯಾವುದೇ ಮಠದವರ ಮನೆಯಲ್ಲಿಯ ದೇವರ ಪೆಟ್ಟಿಗೆಯಲ್ಲಿ ಶ್ರೀರಾಯರ ಬೆಳ್ಳಿ ಮೃತ್ತಿಕಾ ಬೃಂದಾವನವಿದ್ದರೆ, ಮಠ-ಮಠಗಳಿಗೆ ಏಕಾದಶೀ ಮುಂತಾದ ವಿಷಯದಲ್ಲಿ ವ್ಯತ್ಯಾಸ ಬಂದಾಗ ಏನು ಮಾಡಬೇಕು?**

ಉ. ಇಂತಹ ಸಂದರ್ಭದಲ್ಲಿ ಶ್ರೀರಾಯರ ಬೆಳ್ಳಿ ಮೃತ್ತಿಕಾ ಬೃಂದಾವನವನ್ನು ತಮಗೆ ಬೇಕಾದ ಶ್ರೀರಾಯರ ಮಠದವರ ಮನೆಯಲ್ಲಿ ಇಟ್ಟು ಪೂಜಾರಾಧನೆ ಮಾಡಲು ಹೇಳಿ, ತಿಥಿತ್ರಯ ಮುಂತಾದವುಗಳು ಕಳೆದ ಮೇಲೆ ಪುನಃ ತಮ್ಮಮನೆಗೆ ಶ್ರೀ ರಾಯರ ಬೆಳ್ಳಿ ಮೃತ್ತಿಕಾ ಬೃಂದಾವನವನ್ನು ತಂದುಕೊಂಡು ಮಾಮೂಲಿನಂತೆ ಪೂಜಾರಾಧನೆಯನ್ನು ಮುಂದುವರಿಸಬೇಕು. ಹೀಗೆ ಮಾಡುವುದರಿಂದ ಎರಡು ಸಂಪ್ರದಾಯಗಳಿಗೆ ಮನ್ನಣೆ ಕೊಟ್ಟಂತೆ ಆಗಿ ಉಭಯರಿಗೆ ಅನುಗ್ರಹವಾಗಲು ಅವಕಾಶವುಂಟು. ಒಂದು ವೇಳೆ ಹೀಗೆ ಮಾಡಲು ಯಾವುದೇ ಕಾರಣದಿಂದ ಒಡಂಬಡದಿದ್ದಲ್ಲಿ ಭಿನ್ನ ಸಂಪ್ರದಾಯಕ್ಕೆ ಸೇರಿದ ಯತಿಗಳ ಬೆಳ್ಳಿ ಮೃತ್ತಿಕಾ ಬೃಂದಾವನವನ್ನು ತಮ್ಮ ಮನೆಯ ದೇವರ ಪೆಟ್ಟಿಗೆಯಲ್ಲಿ ಇಟ್ಟು ಕೊಳ್ಳದಿರುವುದೇ ಲೇಸು. ಇದರಿಂದ ಪಾರಮಾರ್ಥಿಕ ಹಾನಿ ಏನೂ ಇಲ್ಲ.

**33. ಸುದರ್ಶನ ಹೋಮ ಮಾಡಿದ ಏಕಾದಶೀ ದಿನದಂದು ಗುರುಗಳಿಂದ ಶಿಷ್ಯನು ತಪ್ತಮುದ್ರೆಯನ್ನು ಕಾರಣಾಂತರದಿಂದ ತೆಗೆದುಕೊಳ್ಳಲು ಆಗದಿದ್ದರೆ ಏನು ಮಾಡಬೇಕು?**

ಉ. **(ಕೃ.ಸ್ಮೃ.ಕಾ.ಪ್ರ.ಕನ್ನಡ ಪುಟ ೪೬೩)**
**ತದುಕ್ತಂ ಪಾದ್ಮೇ**
**ಕೃತ್ವಾ ಸುದರ್ಶನಂ ಹೋಮಂ ತಸ್ಮಿನ್ನಗ್ನೌ ಹರೇರ್ದಿನೇ ।**

**ಅನ್ಯಸ್ಮಿನ್ನಹ್ನಿ ವಾ ಕುರ್ಯಾತ್ ತಪ್ತಚಕ್ರಾಂಕನಂ ಗುರುಃ ॥ ಇತ್ಯಾದಿ.**

ಉ. ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಏಕಾದಶೀ ದಿನ ಸುದರ್ಶನ ಹೋಮವನ್ನು ಮಾಡಿ ಆ ಹೋಮಾಗ್ನಿಯಲ್ಲಿ ತಪ್ತವಾದ ಚಕ್ರ-ಶಂಖಗಳನ್ನು ಗುರುಗಳು ಸ್ವಯಂ ಧರಿಸಬೇಕು ಮತ್ತು ತಮ್ಮ ಶಿಷ್ಯರುಗಳಿಗೆ ಧಾರಣಮಾಡಿಸಬೇಕು. ಒಂದುವೇಳೆ ಸುದರ್ಶನ ಹೋಮವನ್ನು ಮಾಡಿದ ಏಕಾದಶೀ ದಿನದಂದು ಕಾರಣಾಂತರದಿಂದ ಗುರುಗಳಿಂದ ತಪ್ತಮುದ್ರೆಗಳನ್ನು ತೆಗೆದುಕೊಳ್ಳಲು ಆಗದಿದ್ದಲ್ಲಿ ಬೇರೆ ದಿನದಲ್ಲೂ ತಪ್ತಮುದ್ರೆಗಳನ್ನು ಗುರುಗಳಿಂದ ತೆಗೆದುಕೊಳ್ಳಬಹುದು.

**34. ದಶಮೀ ದಿನದಂದು ೧೦ ನ್ನು ಬಿಡಬೇಕೆಂದು ಹಿರಿಯರು ಹೇಳುತ್ತಾರೆ. ಬಿಡಬೇಕಾದ ಆ ೧೦ ಯಾವುವು?.**

ಉ. **(ಸ್ಮೃ.ಕಾ.ಪ್ರ.ಪು. ೪೩೮)**

**" ಕಾಂಸ್ಯಂ ಮಾಷಂ ಮಸೂರಂ ಚ ಅನೃತಂ ಕಾರುಭಾಷಣಮ್ ।**
**ಶಾಕಂ ಮಧು ಪರಾನ್ನಂ ಚ ಪುನರ್ಭೋಜನಸಂಗಮೌ ॥**
**ವೈಷ್ಣವಸ್ತು ನರೋ ನಿತ್ಯಂ ದಶಮ್ಯಾಂ ದಶ ವರ್ಜಯೇತ್ ।"**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಕಂಚಿನ ಪಾತ್ರೆ (ಕಂಚಿನ ಪಾತ್ರೆಯಲ್ಲಿ ಭೋಜನ ಮಾಡುವುದು), ಉದ್ದು - ಮಸೂರಧಾನ್ಯ ಅಂದರೆ ಕಾಡುಕಡಲೆ - ಸುಳ್ಳು ಹೇಳುವುದು-ಶಿಲ್ಪಿಗಳ ಜೊತೆಯಲ್ಲಿ ಮಾತನಾಡುವುದು-ಶಾಕ-(ಸೊಪ್ಪು)-ಜೇನುತಪ್ಪ-ಪರಾನ್ನ-ಪುನಃ ಭೋಜನ ಅಂದರೆ ಎರಡನೇ ಬಾರಿ ಊಟ ಮಾಡುವುದು ಹಾಗೂ ಸ್ತ್ರೀ ಸಂಗಮ ಈ ಹತ್ತನ್ನೂ ವೈಷ್ಣವರು ದಶಮೀ ದಿನದಂದು ಬಿಡಬೇಕು.

**35. ದಶಮೀ ಮತ್ತು ದ್ವಾದಶೀ ದಿನದಂದು ಉಪ್ಪನ್ನು ಉಪಯೋಗಿಸಬಾರದೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು? ದಶಮೀ ಮತ್ತು ದ್ವಾದಶೀ ದಿನಗಳಲ್ಲಿ ಉಪ್ಪನ್ನು ಬಿಡುವುದರಿಂದೇನು ಫಲ?**

ಉ. **"ಲವಣಸ್ಯ ಪರಿತ್ಯಾಗಂ ದಶಮೀದ್ವಾದಶೀದಿನೇ ।**
**ಯದಿ ಕುರ್ವೀತ ಚೈಕಾನ್ನಂ ವ್ರತಸ್ಯ ದ್ವಿಗುಣಂ ಫಲಮ್ ॥"**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ದಶಮೀ ದಿನಗಳಲ್ಲಿ ಉಪ್ಪನ್ನು ಸ್ವೀಕರಿಸದೇ ಊಟ ಮಾಡಿದರೆ ಮತ್ತು ಏಕಾನ್ನವನ್ನು ಭುಜಿಸಿದರೆ ಏಕಾದಶೀ ವ್ರತಕ್ಕೆ ಇಮ್ಮಡಿಯಾದ ಫಲವು ಬರುತ್ತದೆ. (ಏಕಾನ್ನವೆಂದರೆ

ಒಂದು ಬಾರಿ ಊಟಕ್ಕೆ ಬೇಕಾದ್ದನ್ನೆಲ್ಲಾ ಬಡಿಸಿಕೊಳ್ಳುವುದು. ಏರಡನೇ ಬಾರಿ ಏನನ್ನೂ ಹಾಕಿಸಿಕೊಳ್ಳದಿರುವುದು.)

**36. ಸಾಧನ ದ್ವಾದಶೀದಿನದಂದು ಮಾತಾ-ಪಿತೃಗಳ ಕಾಲ ಶ್ರಾದ್ಧವು ಇದ್ದರೆ ಆಗ ಶ್ರಾದ್ಧ ನಿಮಂತ್ರಿತ ಬ್ರಾಹ್ಮಣರ ಭೋಜನವಾದ ಮೇಲೆ ಯಜಮಾನನು ಭೋಜನ ಮಾಡಲು ತಡವಾದಲ್ಲಿ ದ್ವಾದಶೀ ಉಲ್ಲಂಘನ ಪ್ರಯುಕ್ತ ಪ್ರತ್ಯವಾಯವು ಯಜಮಾನನಿಗೆ ಬರುತ್ತದೆ ಅಲ್ಲವೆ? ಇದರ ಬಗ್ಗೆ ಶಾಸ್ತ್ರ ಏನು ಹೇಳುತ್ತದೆ?**

ಉ. **(ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀ ಕೃತ ಪು ೩೯)**
**ಸಾಧನದ್ವಾದಶ್ಯಾಂ ಶ್ರಾದ್ಧಂ ಕರ್ತುಂ ದ್ವಾದಶೀಲಂಘನಪ್ರತ್ಯವಾಯ ಇತಿ ಚೇತ್ ಯಜಮಾನೇನಾಪಿ ಶ್ರಾದ್ಧಕರ್ತ್ರಾಽಪಿ ಸಾಧಿತೇತಿ ನ ತಸ್ಯ ದ್ವಾದಶೀಲಂಘನಪ್ರತ್ಯವಾಯ ಇತಿ ॥ "**

**ಯಥೋಕ್ತಂ ವಾರಾಹೇ -**

**" ದ್ವಾದಶ್ಯಾಂ ಯದಿ ಸ್ವಲ್ಪಾಯಾಂ ಪಿತುಃ ಶ್ರಾದ್ಧಂ ಭವೇದ್ಯದಾ ।**
**ಬ್ರಾಹ್ಮಣಾನ್ ಭೋಜಯಿತ್ವಾಽಽದೌ ಸ್ವಯಂ ಫಲಮವಾಪ್ನುಯಾತ್ ॥**
**ನ ತಸ್ಯ ವ್ರತಹಾನಿಃ ಸ್ಯಾತ್ ಭುಂಜಾನಸ್ಯ ತತಃ ಪರಂ ॥ ಇತಿ.**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಸಾಧನ ದ್ವಾದಶೀ ದಿನದಂದು ಮಾತಾ ಪಿತೃಗಳ ಕಾಲಶ್ರಾದ್ಧವು ಇದ್ದರೆ ಅಂದು ದ್ವಾದಶೀ ಘಳಿಗೆ ಒಳಗಾಗಿ ನಿಮಂತ್ರಿತ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿದರೆ, ಯಾಜಮಾನನು ಭೋಜನ ಮಾಡಲು ತಡವಾದರೂ ದ್ವಾದಶೀ ಉಲ್ಲಂಘನೆಯ ಪ್ರಯುಕ್ತ ಪ್ರತ್ಯವಾಯವು ಯಜಮಾನನಿಗೆ ಬರುವುದಿಲ್ಲ. ದ್ವಾದಶೀ ಘಳಿಗೆ ಒಳಗಾಗಿ ನಿಮಂತ್ರಿತ ಬ್ರಾಹ್ಮಣರ ಭೋಜನವನ್ನು ಮಾಡಿಸಿದರೆ, ಯಜಮಾನನು ಸಾಧನ ದ್ವಾದಶಿಯನ್ನು ಸಾಧಿಸಿದಂತೆಯೇ ಸರಿ ಎಂದು ಧರ್ಮಶಾಸ್ತ್ರವು ಹೇಳುತ್ತದೆ.

**37. ದ್ವಾದಶೀ ದಿನದಂದು ಕೆಲವೊಂದು ಕಾರಣಕ್ಕಾಗಿ ಪಾರಣೆ ಮಾಡುವುದು ತಡವಾದಲ್ಲಿ, ತೀರ್ಥಪಾರಣೆಯನ್ನು ಮಾಡಿದರೆ ದ್ವಾದಶೀ ಫಲವು ಬರುತ್ತದೆ ಎಂದು ಹಿರಿಯರು ಹೇಳುತ್ತಾರೆ. ತೀರ್ಥಪಾರಣೆ ಎಂದರೇನು? ಆ ವಿಷಯಕ್ಕೆ ಪ್ರಮಾಣವೇನು?**

ಉ. **(ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀ ಕೃತ ಪುಟ೪೦)**
**ತಥಾ ಚ ವಾರಾಹೇ -**

**ದ್ವಾದಶ್ಯಾಮತಿಸೂಕ್ಷ್ಮಾಯಾಂ ಪರಾಧೀನಸ್ತು ಯೋ ಜನಃ।**
**ಸ ತೀರ್ಥಪಾರಣಂ ಕೃತ್ವಾ ದ್ವಾದಶೀಫಲಮವಾಪ್ನುಯಾತ್॥**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪರಾಧೀನತೆಯಿಂದಾಗಿ ದ್ವಾದಶೀ ದಿನದಂದು ವಿಹಿತ ಕಾಲದಲ್ಲಿ ಪಾರಣೆ ಮಾಡಲು ಆಗದಿದ್ದರೆ, ತೀರ್ಥ ಪಾರಣೆಯನ್ನು ಮಾಡಿದರೂ ದ್ವಾದಶೀ ಫಲವು ಬರುತ್ತದೆ. ಮೂರು ಸಲ ತುಳಸೀ ಸಹಿತ ತೀರ್ಥವನ್ನು ತೆಗೆದುಕೊಳ್ಳುವುದೇ ತೀರ್ಥಪಾರಣೆ.

38.**ಸಾಧನ ದ್ವಾದಶೀ ಎಂದರೇನು?**

ಉ. **(ವಂಶಪಲ್ಲೀಕೃತ ಸದಾಚಾರಸ್ಮೃತಿವ್ಯಾಖ್ಯಾನ - ಆಹ್ನಿಕ ಕೌಸ್ತುಭ ಪುಟ ೪೦) (ಮತ್ತು ನಮ್ಮ ಶ್ರೀಮಠದ ರಾಕ್ಷಸನಾಮ ಸಂವತ್ಸರದ ಕನ್ನಡ ಪಂಚಾಂಗ ಪುಟ ೩೮)**

**ಸಾಧನದ್ವಾದಶ್ಯಾಂ ಕರ್ಮಕರಣಯೋಗ್ಯಕಾಲಃ ವಾರಾಹೇ -**
**ತ್ರಯೋ ಭಾಗಾಃ ತ್ರಿಯಾಮಾಯಾಃ ತತ್ರಾದ್ಯೌ ಸಂತ್ಯಜೇತ್ ಬುಧಃ।**
**ಭಾಗೇ ತೃತೀಯೇ ಸ್ನಾತ್ವಾ ತು ನಿತ್ಯಕರ್ಮಾಣಿ ಕಾರಯೇತ್॥**
**ಆಮಾಧ್ಯಾಹ್ನಿಕಕರ್ಮಾಣಿ ರಾತ್ರಾವೇವ ವಿಧಾಯ ಚ॥**
**ಯದಾ ಸೂರ್ಯೋದಯಾತ್ಪೂರ್ವಂ ಘಟಿಕೈಕಾವಶಿಷ್ಯತೇ।**
**ಸ ವೈ ಸೂರ್ಯೋದಯೋ ನಾಮ ಮುನಿಭಿಃ ಪರಿಕೀರ್ತಿತಃ॥**
**ಹೋಮಂ ಚ ವೈಶ್ವದೇವಂ ಚ ಬ್ರಹ್ಮಯಜ್ಞಂ ಚ ತರ್ಪಣಮ್।**
**ಆಪೋಶನಂ ವಿಧಾಯ್ಯೆವ ಪ್ರತೀಕ್ಷೇದ್ರವಿದರ್ಶನಂ॥**
**ಸಾಧನೀಯಾಽಯತ್ನೇನ ತತಃ ಸಾ ಸಾಧನೀ ಮತಾ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಏಕಾದಶೀ - ದ್ವಾದಶೀ - ತ್ರಯೋದಶೀ ಈ ಮೂರು ದಿನಗಳಲ್ಲಿ ಸೂರ್ಯೋದಯಾನಂತರದಲ್ಲಿ ಯಾವ ದಿನದಲ್ಲಿ ತಿಥಿಯ ಘಟೀಪಳಗಳು ಕಡಿಮೆಯಾಗಿವೆಯೋ ಆ ಘಟೀಪಳಗಳೊಳಗೆ ಪಾರಣೆಯನ್ನು ಮಾಡಬೇಕು. ಈ ಘಟೀ ಪಳಗಳು ಆರು ಘಳಿಗೆಗಳಗಿಂತಲೂ ಕಡಿಮೆಯಾಗಿರುವಾಗ ಈ ನಿಯಮ. ಅದಕ್ಕಿಂತ ಅಧಿಕವಾಗಿದ್ದರೆ ಸಾಧನ ದ್ವಾದಶೀ ಎಂದು ಹೆಸರಿಲ್ಲ. ಸಾಧಾರಣದ್ವಾದಶೀ ಎಂದು ಹೆಸರು. ಸಾಧಾರಣ ದ್ವಾದಶೀ ದಿನದಲ್ಲಿಯೂ ಆರು ಘಳಿಗೆಗಳ ಒಳಗೆ ಪಾರಣೆಯನ್ನು ಮಾಡಬೇಕು. ಅದನ್ನು ಮೀರಬಾರದು. ಹೀಗಾಗಿ ಸಾಧನ ದ್ವಾದಶೀ ದಿನದಂದು ಕಷ್ಟವಾದರು (ಶ್ರಮವಾದರೂ) ತುಂಬಾ ಪ್ರಯತ್ನ ಪಟ್ಟು ಸಕಾಲಕ್ಕೆ ದೇವಪೂಜಾದಿಗಳನ್ನು ಮುಗಿಸಿ ವಿಹಿತ ಕಾಲದ ಒಳಗೆ ಪಾರಣೆಯನ್ನು ಮಾಡಿ ದ್ವಾದಶಿಯನ್ನು ಸಾಧಿಸಬೇಕಾಗಿರುವುದರಿಂದ

ಅಂತಹ ದ್ವಾದಶಿಗೆ ಸಾಧನದ್ವಾದಶೀ ಎಂದು ಪ್ರಸಿದ್ಧಿ ಉಂಟು.

**39. ಏಕಾದಶೀ ಉಪವಾಸವನ್ನು ಸಣ್ಣ ಹುಡುಗರು ಕೂಡ ಮಾಡಬೇಕೆ? ಹೇಗೆ? ಏಕಾದಶೀ ದಿನದಂದು ಅಶಕ್ತರಾದವರು ಏನಾದರೂ ಫಲಾಹಾರವನ್ನು ಸ್ವೀಕರಿಸಬಹುದೇ? ಹೇಗೆ?**

ಉ. **(ಕೃ.ಸ್ಮೃ. ಕಾ.ಪ್ರ. ಕನ್ನಡ ಪುಟ ೪೦೧,೪೪೪, ೪೪೫ ೪೪೬)**

**ಅತಿ ಬಾಲಾದಾವಪಿ ಉಪವಾಸಪ್ರಸಕ್ತೌ ವ್ಯವಸ್ಥಾಮಾಹ ಕಾತ್ಯಾಯನಃ**
**ಅಷ್ಟವರ್ಷಾಧಿಕೋ ಮರ್ತ್ಯಃ ಹ್ಯಪೂರ್ಣಾಶೀತಿವತ್ಸರಃ ।**
**ಏಕಾದಶ್ಯಾಂ ಉಪವಸೇತ್ ಪಕ್ಷಯೋರುಭಯೋರಪಿ ।**
**ಅಷ್ಟವರ್ಷಾಧಿಕೋ ಮರ್ತ್ಯಃ ಹ್ಯಪೂರ್ಣಾಽಶೀತಿಹಾಯನಃ ।**
**ಭುಂಕ್ತೇ ಯೋ ಮಾನವೋ ಮೋಹಾತ್ ಏಕಾದಶ್ಯಾಂ ಸ ಪಾಪಕೃತ್ ॥**
**ಯದ್ಯಶಕ್ತೋಽತಿವೇಲಂ ಸ್ಯಾತ್ ಉಪವಾಸಕೃತೌ ನರಃ ।**
**ಗರ್ಭಿಣೀ ಸೂತಿಕಾ ಬಾಲಃ ತೀರ್ಥಯಾತ್ರಾಕೃತಶ್ರಮಃ ॥**
**ಸಪಾದಮಾತ್ರಂ ಕುರ್ವೀತ ತೃಪ್ತ್ಯರ್ಥಂ ಫಲಭಕ್ಷಣಂ ॥**
**ಸರ್ವಥಾ ನಾನ್ನ ಮಶ್ನೀಯಾತ್ ಮ್ರಿಯಮಾಣೋಽಪಿ ವೈಷ್ಣವಃ ॥**
**ಇಕ್ಷುರ್ವಿಕಾರಾಸ್ತಸ್ಯ ಸ್ಯುಃ ಯಾವಂತಃ ಕೇವಲಸ್ಯ ಚ ।**
**ಖರ್ಜೂರಂ ನಾರಿಕೇರಂ ಚ ಪ್ರಿಯಾಲಪನಸಾದಿಕಂ ॥**
**ಆಮ್ರಂ ಚ ಕದಲೀ ದ್ರಾಕ್ಷಾ ಕ್ಷೀರಂ ದಧಿ ಘೃತಂ ತಥಾ ।**
**ಅನಿಷಿದ್ಧಾನಿ ಮೂಲಾನಿ ತಥಾ ಕಂದಾದಿಕಂ ಚ ಯತ್ ।**
**ವಿನೋದಕೇನ ಯತ್ ಪಕ್ವಂ ಧಾನ್ಯಂ ಯಚ್ಚ ಘೃತಾದಿಕಂ ॥**
**ಏತಾನಿ ಫಲಸಂಜ್ಞಾನಿ ಯೋಽತ್ಯಶಕ್ತೋ ದಿನೇ ಮಮ ।**
**ಪಾದಶೋಽಶ್ನಾತಿ ಯಸ್ತೃಪ್ತೇಃ ಸಂಪೂರ್ಣಾ ತತ್ಫಲಂ ಲಭೇತ್ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಎಂಟು ವರ್ಷ ಪೂರ್ತಿಯಾಗಿರುವವನು ಅಂದರೆ ಒಂಭತ್ತನೆಯ (ವರ್ಷ) ವಯಸ್ಸು ನಡೆಯುತ್ತಿರುವವನಿಂದ ಆರಂಭಿಸಿ ಎಂಭತ್ತು ವರ್ಷ ಪೂರ್ತಿ ಆಗದೇ ಇರುವವನು ಅಂದರೆ ಎಂಭತ್ತು ವರ್ಷದ ಒಳಗೆ ಇರುವವನು ಯಾವನೇ ಆಗಲಿ ಆ ಮಾನವನು ಎರಡು ಪಕ್ಷಗಳಲ್ಲೂ ಏಕಾದಶೀ ಉಪವಾಸ ಮಾಡಬೇಕು.

ಏಕಾದಶೀ ಉಪವಾಸ ಮಾಡಲು ಅತ್ಯಂತ ಅಶಕ್ತರಾದ ಗರ್ಭಿಣಿ-ಬಾಣಂತಿ, ಬಾಲಕ (ಮಗು) ತೀರ್ಥಯಾತ್ರೆ ಮಾಡಿ ಬಳಲಿದವನು ಇಂಥವರು ಹಸಿವೆಯ ಬಾಧೆ ನಿವೃತ್ತಿಯಾಗಿ ಸಾಧಾರಣ ತೃಪ್ತಿ

ಹೊಂದಲು ನಿತ್ಯದ ಆಹಾರದಲ್ಲಿ ಕಾಲು ಅಂಶವನ್ನು ಮಾತ್ರ ಹಣ್ಣುಗಳ ರೂಪದಲ್ಲಿ ಸ್ವೀಕರಿಸಬಹುದು. ಆದರೆ ವಿಷ್ಣುಭಕ್ತನಾದವನು ವೈಷ್ಣವ ಕುಲದಲ್ಲಿ ಹುಟ್ಟಿದವನು ಎಲ್ಲಾ ರೀತಿಯಿಂದಲೂ ಪ್ರಾಣ ಹೋಗುತ್ತಿದ್ದರೂ ಕೂಡ ಅನ್ನಭಕ್ಷಣವನ್ನು ಮಾಡಲೇಬಾರದು. ಏಕಾದಶೀ ದಿನ ಅನ್ನಭಕ್ಷಣೆ ಸರ್ವಥಾ ಕೂಡದು.

ಇನ್ನು ಕಬ್ಬು, ಕೇವಲ ಕಬ್ಬಿನ ವಿಕಾರಗಳು ಅಂದರೆ ಬೆಲ್ಲ ಸಕ್ಕರೆ ಕಲ್ಲುಸಕ್ಕರೆ ಇತ್ಯಾದಿಗಳು ಎಷ್ಟಿವೆಯೋ ಅವೆಲ್ಲವೂ ಖರ್ಜೂರ ತೆಂಗಿನಕಾಯಿ ಹಲಸಿನ ಹಣ್ಣು, ಮೊರಟೆ ಹಣ್ಣು, ಮಾವಿನ ಹಣ್ಣು, ಬಾಳೇ ಹಣ್ಣು, ದ್ರಾಕ್ಷಿ, ಹಾಲು, ಮೊಸರು, ತುಪ್ಪ ಹಾಗೆಯೇ ನಿಷಿದ್ಧ ವಲ್ಲದ ಗಡ್ಡೆ ಗೆಣಸುಗಳು, ನೀರು ಸೇರಿಸದೇ ಪಕ್ವವಾದ ಧಾನ್ಯ ಅಂದರೆ ಹುರಿಗಡಲೆ ಹಿಟ್ಟು ಇತ್ಯಾದಿಗಳು, ತುಪ್ಪ ಇವೆಲ್ಲವೂ ಫಲ ಎಂಬ ಹೆಸರನ್ನು ಹೊಂದಿರುತ್ತವೆ. ಯಾವನು ಅತ್ಯಶಕ್ತನೋ ಅವನು ನನ್ನ ದಿನದಲ್ಲಿ ಅಂದರೆ ಏಕಾದಶೀ ದಿನದಲ್ಲಿ ತೃಪ್ತಿಯಾಗುವುದಕ್ಕೆ ಬೇಕಾಗುವುದರಲ್ಲಿ ನಾಲ್ಕನೇ ಒಂದಂಶವನ್ನು ಮಾತ್ರ ಸ್ವೀಕರಿಸುತ್ತಾನೋ ಅವನು ಏಕಾದಶೀವ್ರತದ ಸಂಪೂರ್ಣ ಫಲವನ್ನು ಹೊಂದುತ್ತಾನೆ. ಎಂಟು ವರ್ಷದ ಮೇಲ್ಪಟ್ಟವರು ಎಂಭತ್ತು ವರ್ಷದ ಒಳಗೆ ಇರುವವರು ಏಕಾದಶೀ ದಿನದಂದು ಸರ್ವಥಾ ಫಲಾಹಾರವನ್ನು ಸ್ವೀಕರಿಸಬಾರದು.

**40. ಏಕಾದಶೀ ವ್ರತಾಚರಣೆಯಲ್ಲಿ ಮಾಧ್ವರಲ್ಲಿ ಮಾತ್ರ ವಿಭಿನ್ನತೆ ಇರಲು ಕಾರಣವೇನು? ಅಂದರೆ ಒಂದು ಮಠದವರಿಗೆ ಇಂದು ಏಕಾದಶೀ ಆದರೆ ಇನ್ನೊಂದು ಮಠದವರಿಗೆ ನಾಳೆ ಏಕಾದಶೀ ಮತ್ತು ಒಂದು ಮಠದವರಿಗೆ ಕೆಲವೊಂದು ಸಲ ಒಂದು ಏಕಾದಶೀ ಆದರೆ, ಇನ್ನೊಂದು ಮಠದವರಿಗೆ ಎರಡು ಏಕಾದಶಿಗಳು, ಹೀಗೆ ವಿಭಿನ್ನತೆ ಇರಲು ಕಾರಣವೇನು? ಎಲ್ಲರೂ ಜೊತೆಜೊತೆಯಾಗಿ ಕಲೆತು ಒಂದೇ ರೀತಿಯಾಗಿ ಏಕಾದಶೀ ದಿನವನ್ನು ಆಚರಿಸಲು ಸಾಧ್ಯವಿಲ್ಲವೆ?**

ಉ. (ಕನ್ನಡ ತತ್ತ್ವವಾದ - ಏಪ್ರಿಲ್ 1979 ಪುಟ 36-37)
ಇತರ ಮತೀಯರಲ್ಲಿ ಏಕಾದಶೀವ್ರತಕ್ಕೆ ಏಕಾದಶೀ ತಿಥಿಯಷ್ಟೇ ಮುಖ್ಯ ವಾದರೆ, ಮಾಧ್ವ ಸಂಪ್ರದಾಯದಲ್ಲಿ ಏಕಾದಶೀ ತಿಥಿಯು ದಶಮೀ ತಿಥಿಯ ಸಂಪರ್ಕದಿಂದ ಮುಕ್ತವಾಗಿರಬೇಕು ಎಂಬ ನಿಬಂಧನೆಯು ಇದೆ (ನಿಯಮವು ಇದೆ) ಇದೇ ವಿಷಯವನ್ನೇ ಶ್ರೀಕೃಷ್ಣಾಚಾರ್ಯರು ತಮ್ಮ ಸ್ಮೃತಿಮುಕ್ತಾವಳಿ ಕಾಲನಿರ್ಣಯ ಪ್ರಕರಣದಲ್ಲಿ (ಕೃ.ಸ್ಮೃ.ಕಾ.ಪ್ರ. ಪುಟ ೩೭೧ ಕನ್ನಡ)

**ಅರುಣೋದಯಕಾಲೇ ತು ದಶಮೀ ದೃಶ್ಯತೇ ಯದಿ ।**
**ನ ತತ್ರೈಕಾದಶೀ ಕಾರ್ಯಾ ಧರ್ಮಕಾಮಾರ್ಥನಾಶಿನೀ ॥**

ಅಂದರೆ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ನಾಲ್ಕು ಘಳಿಗೆಗಳ ಕಾಲ ಅಂದರೆ ೧ ಘಂಟೆ ೩೬ ನಿಮಿಷಗಳ ಕಾಲ ಅರುಣೋದಯವೆಂದು ಪ್ರಸಿದ್ಧವಾಗಿದೆ. ಆ ಅರುಣೋದಯ ಸಮಯದಲ್ಲಿ ದಶಮೀ ತಿಥಿ ಇದ್ದರೆ ಅಂದು ಏಕಾದಶೀ ಆದರೂ ಉಪವಾಸ ಮಾಡಬಾರದು. ವಿಷಬಿಂದು ಸಂಯುಕ್ತವಾದ ಗಂಗಾಜಲದಂತೆ ಅದು ಘಾತಕ. ಆದ್ದರಿಂದ ಮರುದಿನ ಉಪವಾಸ ಮಾಡಬೇಕು ಎಂದು ಪ್ರಮಾಣವನ್ನು ಕೊಟ್ಟು ಹೇಳಿದ್ದಾರೆ. ಒಂದೊಂದು ಮಠದಲ್ಲಿ ಒಂದೊಂದು ವಿಧವಾದ ಗಣಿತ ಪದ್ಧತಿ ಇದೆ. ಅಂದರೆ ತಿಥಿಗಳನ್ನು ನಿರ್ದಿಷ್ಟವಾಗಿ ತಿಳಿಸುವ ಕ್ರಮವಿದೆ. ಆ ಗಣಿತವು ನಿರಾಧಾರ ವಾಗಿರುವುದಿಲ್ಲ. ಮೂಲ ಗ್ರಂಥದಲ್ಲಿ ಪಾಠ ಭೇದದಿಂದ ಒಂದೇ ಶಬ್ದಕ್ಕೆ ಬೇರೆ ಬೇರೆ ಅರ್ಥಗಳಿರುವುದರಿಂದ ವಿಭಿನ್ನ ಪದ್ಧತಿಗಳು ಒಂದೇ ಗ್ರಂಥವನ್ನು ಪ್ರಮಾಣವನ್ನಾಗಿ ಆಧರಿಸಿರುತ್ತವೆ. ಹೀಗೆ ಗಣಿತ ಪದ್ಧತಿಯು ಆಯಾಯಾ ಸಂಪ್ರದಾಯ ಪ್ರವರ್ತಕರ ಕಲ್ಪನೆಯಾಗಿರದೆ ಮೂಲ ಆಧಾರದಿಂದಲೇ ಹೊರಟಿದೆ. ಆದ್ದರಿಂದ ಯಾವ ಪದ್ಧತಿಯನ್ನೂ ತಿರಸ್ಕರಿಸುವಂತಿಲ್ಲ. ಹೀಗೆ ಗಣಿತದ ವ್ಯತ್ಯಾಸದಿಂದ ಅರಣೋದಯ ಕಾಲದಲ್ಲಿ ಒಂದು ಘಳಿಗೆ ದಶಮಿ ಬಂದು ಮುಂದೆ ಏಕಾದಶಿ ಇದ್ದರೂ ಆ ದಿನ ಮಠಕ್ಕೆ ಏಕಾದಶಿಯ ಆಚರಣೆಯು ಇಲ್ಲವಾಗುತ್ತದೆ. ಇನ್ನೊಂದು ಗಣಿತದ ರೀತಿಯಿಂದ ಅಂದು ಅರುಣೋದಯದ (ಅರುಣೋದಯ ಕಾಲದ) ಮೊದಲೇ ದಶಮಿಯು ಮುಗಿದಿದ್ದರೆ ಆ ಮಠಕ್ಕೆ ಅಂದು ಏಕಾದಶಿಯು ಆಗುತ್ತದೆ. ಆದ್ದರಿಂದ ಏಕಾದಶೀ ತಿಥಿಗೆ ದಶಮೀ ತಿಥಿಯ ಸಂಪರ್ಕದ ಸೂಕ್ಷ್ಮ ವ್ಯತ್ಯಾಸದಿಂದ ಮಾಧ್ವರಲ್ಲಿ ಏಕಾದಶಿಯ ವ್ಯತ್ಯಾಸ ಅನಿವಾರ್ಯವಾಗಿದೆ.

ಇದರಂತೆ ಇನ್ನೊಂದು ರೀತಿಯಿಂದಲೂ ಮಾಧ್ವರಲ್ಲಿ ಏಕಾದಶೀ ವಿಷಯದಲ್ಲಿ ವ್ಯತ್ಯಾಸವು ಬರುವ ಸಂಭವ ಉಂಟು. ಅದು ಹೇಗೆಂದರೆ (ಕೃ. ಸ್ಮೃ. ಕಾ.ಪ್ರ. ಕನ್ನಡ ಪುಟ ೪೬೪)

**ಕಲಾ ವಾ ಘುಟಿಕಾ ವಾಪಿ ಅಪರೇ ದ್ವಾದಶೀ ಯದಿ।**
**ದ್ವಾದಶ ದ್ವಾದಶೀಃ ಹಂತಿ ಪೂರ್ವೇದ್ಯುಃ ಪಾರಣೇ ಕೃತೇ॥**

ಅಂದರೆ ಏಕಾದಶಿಯ ಮರುದಿನ ಪೂರ್ಣ ದ್ವಾದಶಿಯಿದ್ದು ಅದರ ಮರುದಿನವೂ ಅಂದರೆ ತ್ರಯೋದಶಿಯಂದೂ ಒಂದು ಘಳಿಗೆ ಅಥವಾ ಒಂದು ಕಲೆ ದ್ವಾದಶಿಯಿದ್ದರೆ ಏಕಾದಶಿಯ ಮರುದಿನ ದ್ವಾದಶಿಯಾದರೂ ಅಂದು ಪಾರಣೆ ಮಾಡಿದರೆ ಹಿಂದೆ ಮಾಡಿದ ಹನ್ನೆರಡು ದ್ವಾದಶಿಗಳ ಪುಣ್ಯ ನಾಶವಾಗುತ್ತದೆ. ಆದ್ದರಿಂದ ಆ ದ್ವಾದಶಿಯಂದು ಉಪವಾಸವಿರಬೇಕು. ಹೀಗೆ ಆ ಪಕ್ಷದಲ್ಲಿ ಎರಡು ದಿನ ಉಪವಾಸ. ಹಿಂದೆ ಹೇಳಿದಂತೆ ಗಣಿತದ ವ್ಯತ್ಯಾಸದಿಂದ ತ್ರಯೋದಶಿಯಂದು ಕೆಲವು ಮಠದಂತೆ ದ್ವಾದಶಿ ಇರಬಹುದು. ಮತ್ತೆ ಕೆಲವು ಮಠದಂತೆ ಇಲ್ಲದಿರಬಹುದು. ಒಂದೇ ಕಲೆ (ಸೆಕೆಂಡು) ಯಲ್ಲಿ ಹೆಚ್ಚು ಕಡಿಮೆ ಆದರೆ ಒಂದು ಮಠದವರಿಗೆ ಒಂದು ದಿನ ಉಪವಾಸ, ಮತ್ತೊಂದು ಮಠದವರಿಗೆ ಎರುಡು ದಿನ ಉಪವಾಸವಾಗುತ್ತದೆ.

ಧರ್ಮಾಚರಣೆಯಲ್ಲಿ ಶ್ರುತಿ ಸ್ಮೃತಿಗಳಂತೆ ಆಚಾರಶ್ಚೈವ ಸಾಧೂನಾಂ ಎಂದು ಹೇಳಿದಂತೆ ಶಿಷ್ಟಾಚಾರ-ಸಂಪ್ರದಾಯವೂ ಪ್ರಮಾಣ, ವಿಭಿನ್ನ ಸಂಪ್ರದಾಯಗಳನ್ನು ಶ್ರೀಮದಾಚಾರ್ಯರೇ ತಮ್ಮ ವಿಭಿನ್ನ ಶಿಷ್ಯರಿಗೆ ಉಪದೇಶಿಸಿದ್ದರು ಎಂದು ಶ್ರೀಹೃಷೀಕೇಶತೀರ್ಥರ ಸಂಪ್ರದಾಯ ಪದ್ಧತಿಯು ಹೇಳುತ್ತದೆ. ಆದ್ದರಿಂದ ಸಂಪ್ರದಾಯ ಪ್ರಾಪ್ತಗಣಿತಕ್ಕೂ ಮನ್ನಣೆ ಬೇಕು. ಶ್ರೀಮದಾಚಾರ್ಯರು ತಿಳಿಸಿದ ಏಕಾದಶಿಯಂದು ದಶಮಿಯ ವೇಧ (ಸಂಬಂಧ) ವಿರಬಾರದು ಎಂಬ ಪ್ರಮಾಣವನ್ನೂ ಬಿಡಬಾರದು. ಇವೆರಡನ್ನೂ ಕಡೆಗಣಿಸುವುದು ಅಸಾಧ್ಯವಾದುದರಿಂದ ಮಾಧ್ವರಲ್ಲಿ ಏಕಾದಶಿಯ ವಿಭಿನ್ನತೆ ಅನಿವಾರ್ಯವಾಗಿದೆ. ವಿಭಿನ್ನಮಠದವರು ಒಂದೆಡೆ ಸೇರಿದಾಗಲೂ ತಮ್ಮ ತಮ್ಮ ಗುರುಗಳ ಆಜ್ಞೆಯಂತೆ ಆಚರಿಸುವುದೇ ಶಾಸ್ತ್ರ ಸಮ್ಮತ. ಇಲ್ಲವೇ ಇಂತಹ ಸಂದರ್ಭಗಳಲ್ಲಿ ವಿಭಿನ್ನ ಸಂಪ್ರದಾಯದವರು ಆದಷ್ಟು ಒತ್ತಟ್ಟಿಗೆ ಸೇರುವುದನ್ನೇ ತಪ್ಪಿಸಿಕೊಳ್ಳಬೇಕು.

**41. ಪ್ರತಿ ವರ್ಷ ನಮ್ಮ ಮಠದಲ್ಲಿ ಆಷಾಢ ಶುಕ್ಲ ಏಕಾದಶೀ ಮತ್ತು ಕಾರ್ತಿಕ ಶುಕ್ಲ ಏಕಾದಶೀ ದಿನಗಳಲ್ಲಿ ಸುದರ್ಶನ ಹೋಮವನ್ನು ಮಾಡಿ ಶ್ರೀಗಳು ಶ್ರೀಮಠದ ಶಿಷ್ಯರಿಗೆ ತಪ್ತ ಮುದ್ರಾವನ್ನು ಕೊಡುತ್ತಾರೆ. ಇದಕ್ಕೆ ಪ್ರಮಾಣವೇನು?**

**ಉ. (ಕೃ.ಸ್ಮೃ. ಕಾ.ಪ್ರ. ಕನ್ನಡ ಪು .೪೬೩)**
**ಸುದರ್ಶನಹೋಮಸ್ತು ಶಯನಬೋಧನ್ಯೈಕಾದಶೀ ದಿನೇ ಕರ್ತವ್ಯ ಇತ್ಯಭಿಧಾನಾತ್ ತಸ್ಯ ಚ ವಿಷ್ಣುಮಾತ್ರವಿಷಯತ್ವಾತ್ ಘೃತೇನೈವ ಕಾರ್ಯತ್ವಾಚ್ಚ ತತ್ಕರಣೇ ನ ದೋಷಃ। ತದುಕ್ತಂ ಪಾದ್ಮೇ :-**
**ಕೃತ್ವಾ ಸುದರ್ಶನಂ ಹೋಮಂ ತಸ್ಮಿನ್ನಗ್ನೌ ಹರೇರ್ದಿನೇ।**
**ಅನ್ಯಸ್ಮಿನ್ನಹ್ನಿ ವಾ ಕುರ್ಯಾತ್ ತಪ್ತಚಕ್ರಾಂಕನಂ ಗುರುಃ ॥ ಇತ್ಯಾದಿ.**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪ್ರತಿವರ್ಷ ನಮ್ಮ ಮಠದಲ್ಲಿ ಆಷಾಡ ಶುದ್ಧ ಏಕಾದಶೀ ಅಂದರೆ ಶಯನೀ ಏಕಾದಶೀ ಮತ್ತು ಕಾರ್ತಿಕ ಶುದ್ಧ ಏಕಾದಶೀ ಅಂದರೆ ಬೋಧಿನೀ / ಪ್ರಬೋಧಿನೀ ಏಕಾದಶೀ ದಿನಗಳಲ್ಲಿ ಸುದರ್ಶನ ಹೋಮವನ್ನು ಮಾಡಿ ಶ್ರೀಗಳವರು ಶ್ರೀಮಠದ ಶಿಷ್ಯರಿಗೆ ತಪ್ತಮುದ್ರಾವನ್ನು ಕೊಡುತ್ತಾರೆ. ಇದರಂತೆ ಪ್ರತಿವರ್ಷ ಭಾದ್ರಪದ ಶುಕ್ಲ ಏಕಾದಶೀ ಅಂದರೆ ಪರಿವರ್ತಿನೀ ಏಕಾದಶೀ ದಿನದಂದು ಸುದರ್ಶನ ಹೋಮವನ್ನು ಮಾಡಿ ಶ್ರೀಗಳವರು ಶ್ರೀಮಠದ ಶಿಷ್ಯರಿಗೆ ತಪ್ತ ಮುದ್ರಾವನ್ನು ಕೊಡುತ್ತಾರೆ.

**42. ಏಕಾದಶೀ ಉಪವಾಸಕ್ಕೆ ಅಧಿಕಾರಿಗಳು ಯಾರು?**

ಉ. ಅಥ ಏಕಾದಶೀವ್ರತೇ ಅಧಿಕಾರಿಣಃ ಪಾದ್ಮೇ ದರ್ಶಿತಾಃ

(ಅ) "ವರ್ಣಾಶ್ರಮಾಣಾಂ ಸರ್ವೇಷಾಂ ಸ್ತ್ರೀಣಾಂ ಚ ವರವರ್ಣಿನಿ।
ಏಕಾದಶ್ಯುಪವಾಸಸ್ತು ಕರ್ತವ್ಯೋ ನಾತ್ರ ಸಂಶಯಃ ॥ ಇತಿ

(ಆ) ಕೃಷ್ಣಾಮೃತಮಹಾರ್ಣವೇ ಚ
"ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ಭರ್ತೃಮತೀ ತಥಾ।
ಅಭರ್ತೃಕಾ ತಥಾಽನ್ಯೇ ಚ ಸೂತವೈದೇಹಕಾದಯಃ।
ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥ " ಇತಿ
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ನಾಲ್ಕು ವರ್ಣದವರು ನಾಲ್ಕು ಆಶ್ರಮದವರು - ಸುಮಂಗಲೀ ಸ್ತ್ರೀಯರು - ವಿಧವಾ ಸ್ತ್ರೀಯರು - ಸೂತರು (ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯನಿಗೆ ಹುಟ್ಟಿದವರು ಸೂತರು)

ವೈದೇಹಕರು (ಬ್ರಾಹ್ಮಣ ಸ್ತ್ರೀಯಲ್ಲಿ ವೈಶ್ಯನಿಂದ ಹುಟ್ಟಿದವರು ವೈದೇಹಕರು) ಮತ್ತು ಇತರ ಸಂಕರ ಜಾತಿಯವರು. ಇವರೆಲ್ಲರೂ ಏಕಾದಶೀ ಉಪವಾಸವನ್ನು ಮಾಡಲೇಬೇಕು. ಆದ್ದರಿಂದ ಇವರೆಲ್ಲರೂ ಏಕಾದಶೀ ಉಪವಾಸಕ್ಕೆ ಅಧಿಕಾರಿಗಳು.

**43. ದೇವತೇಗಳಿಗೂ ಏಕಾದಶೀ ಉಪವಾಸದಲ್ಲಿ ಅಧಿಕಾರವಿದೆಯೆ?**

**ಉ. ದೇವಾದೀನಾಮಪ್ಯಧಿಕಾರಃ ಪಾದ್ಮೇ ದರ್ಶಿತಃ**

**(ಅ) "ಮಥ್ಯಮಾನೇ ತು ದುಗ್ಧಾಬ್ಧೌ ದೈವತೈಶ್ಚ ಮಹಾಬಲೈಃ।**
**ಉತ್ಪಾದನಾರ್ಥಂ ಲಕ್ಷ್ಮ್ಯಾಶ್ಚ ತತ ಏತೇ ಮಹರ್ಷಯಃ ॥**
**ಉಪೋಷ್ಯ ನಿಯಮಂ ಕೃತ್ವಾ ಜಪ್ತಂ ಶ್ರೀಸೂಕ್ತಮುತ್ತಮಂ।**
**ಸಹಸ್ರನಾಮಪಠನಂ ಚಕ್ರುರ್ದೇವಾಃ ದ್ವಿಜೋತ್ತಮಾಃ ॥**
**ತದಾ ಪ್ರಭೃತಿ ವೈ ಸರ್ವೇ ದೇವಾ ಬ್ರಹ್ಮಪುರೋಗಮಾಃ।**
**ಋಷಯೋ ಮಾನುಷಾಶ್ಚೈವ ಯೋಗಿನೋ ಮುನಿಸತ್ತಮಾಃ।**
**ವಿಷ್ಣೋರ್ರಾಜ್ಞಾಂ ಪುರಸ್ಕೃತ್ಯ ಭಕ್ತ್ಯಾಪರಮಯಾಽನ್ವಿತಾಃ।**
**ಏಕಾದಶ್ಯಾಂ ತು ಶುದ್ಧಾಯಾಂ ಉಪೋಷ್ಯೈವ ಜನಾರ್ದನಂ ॥**
**ದ್ವಾದಶ್ಯಾಮರ್ಚಯಾಂಚಕ್ರುಃ ವಿಧಿನಾ ವರವರ್ಣಿನಿ" ಇತಿ**

**(ಆ) ವಿಷ್ಣುತೀರ್ಥೀಯೇಽಪಿ:-**
**"ರುದ್ರಸ್ಯ ಸರ್ವದೇವಾನಾಮಾತ್ಮನಃ ಸರ್ವದೇಹಿನಾಂ।**
**ಏಕಾದಶ್ಯುಪವಾಸಸ್ತು ಕರ್ತವ್ಯೋ ನಾತ್ರ ಸಂಶಯಃ" ಇತಿ**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದ ಅಭಿಪ್ರಾಯವು ಈ ಕೆಳಕಂಡಂತೆ ಇದೆ:-

ಹಿಂದೆ ಒಮ್ಮೆ ದೇವತೆಗಳು ದೈತ್ಯರೊಡನೆ ಕೂಡಿ ಲಕ್ಷ್ಮೀದೇವಿಯನ್ನು ಆವಿರ್ಭಾವಗೊಳಿಸುವುದಕ್ಕೂ (ಮತ್ತು ಅಮೃತವನ್ನು ಪಡೆಯುವುದಕ್ಕಾಗಿಯೂ) ಕ್ಷೀರಸಮುದ್ರವನ್ನು ಮಥನಮಾಡಲು (ಕಡೆಯಲು) ಆರಂಭಿಸಿದರು. ಆಗ ಅವರೆಲ್ಲರೂ ಏಕಾದಶೀ ದಿನದಂದು ಉಪವಾಸವನ್ನು ಮಾಡಿ, ಅನೇಕ ನಿಯಮಗಳನ್ನು ಆಚರಿಸಿ, ಶ್ರೀಸೂಕ್ತವನ್ನೂ ಮತ್ತು ವಿಷ್ಣುಸಹಸ್ರನಾಮಸ್ತೋತ್ರವನ್ನೂ ಪಠಿಸಿದರು. ಕ್ಷೀರಸಮುದ್ರ ಮಥನದ ಆ ದಿವಸ ಮೊದಲ್ಗೊಂಡು ಬ್ರಹ್ಮನೇ ಮೊದಲಾದ

ಎಲ್ಲಾ ದೇವತೆಗಳೂ - ಋಷಿಗಳೂ -ಮಾನವರು - ಯೋಗಿಗಳೂ - ಮತ್ತು ಇತರ ಮುನಿಶ್ರೇಷ್ಠರು ಏಕಾದಶೀ ದಿನದಂದು ಉಪವಾಸವನ್ನು ಮಾಡಿ, ದ್ವಾದಶೀದಿನದಂದು ಪರಮಾತ್ಮನನ್ನು ಪೂಜಿಸಲು ಆರಂಭಿಸಿದರು ಎಂಬುದಾಗಿ ಈಶ್ವರನು ಪಾರ್ವತೀದೇವಿಯನ್ನು ಕುರಿತು ಹೇಳಿದನು ಎಂದು ಪದ್ಮಪುರಾಣದಲ್ಲಿ ಉಕ್ತವಾಗಿದೆ. ಇದರಿಂದ ದೇವತೆಗಳೂ ಕೂಡ ಏಕದಶೀ ಉಪವಾಸವನ್ನು ಮಾಡಬೇಕು ಮತ್ತು ಮಾಡುತ್ತಾರೆ ಎಂದು ತಿಳಿದು ಬರುತ್ತದೆ. ಆದ್ದರಿಂದ ದೇವತೆಗಳಿಗೂ ಕೂಡ ಏಕಾದಶೀ ಉಪವಾಸದಲ್ಲಿ ಅಧಿಕಾರವಿದೆ ಎಂದು ತಿಳಿಯಬೇಕು.

**44. ಸ್ತ್ರೀಯರು ಮುಟ್ಟಾದಾಗಲೂ ಏಕಾದಶೀ ಉಪವಾಸವನ್ನು ಮಾಡಬಹುದೇ?**

ಉ. ರಜೋದರ್ಶನೇಽಪಿ ಸ್ತ್ರೀಣಾಮುಪವಾಸ ಏವ:-

''ಏಕಾದಶ್ಯಾಂ ನ ಭುಂಜೀತ ನಾರೀ ದೃಷ್ಟ್ವಾ ರಜಸ್ವಪಿ''

ಇತಿ ವಚನಾತ್ ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಸ್ತ್ರೀಯರು ಮುಟ್ಟಾದಾಗಲೂ ಏಕದಶೀ ದಿನದಂದು ಭೋಜನವನ್ನು ಮಾಡಬಾರದು. ಉಪವಾಸವನ್ನೇ ಮಾಡಬೇಕು.

**45. ಅಶಕ್ತರು ಯಾರು?**

ಉ. **ಯದ್ಯಶಕ್ತೋಽತಿವೇಲಂ ಸ್ಯಾದುಪವಾಸಕೃತೌ ನರಃ।**
**ಗರ್ಭಿಣೀ ಸೂತಿಕಾ ಬಾಲಸ್ತೀರ್ಥಯಾತ್ರಾಕೃತಶ್ರಮಃ॥**
ಸಪಾದಮಾತ್ರಂ ಕುರ್ವೀತ ತೃಪ್ತ್ಯರ್ಥಂ ಫಲಭಕ್ಷಣಂ।
ಸರ್ವಥಾ ನಾನ್ನಮಶ್ನೀಯಾತ್ ಮ್ರಿಯಮಾಣೋಽಪಿ ವೈಷ್ಣವಃ॥

ಎಂಬ ಪ್ರಮಾಣದಲ್ಲಿ ಹೇಳಿದಂತೆ, ಗರ್ಭಿಣಿಯರು -ಬಾಣಂತಿಯರು - ಚಿಕ್ಕ ಮಕ್ಕಳು - ತೀರ್ಥಯಾತ್ರೆ ಮಾಡಿ ಬಳಲಿದವರು ಮುಂತಾದವರು ಅಶಕ್ತರ ಪಟ್ಟಿಯಲ್ಲಿ ಸೇರುತ್ತಾರೆ. ಅವರು ತಾವು ಪ್ರತಿನಿತ್ಯ ತೆಗೆದುಕೊಳ್ಳುವ ಆಹಾರದ ಕಾಲುಭಾಗದಷ್ಟು ಮಾತ್ರ ಈ ಮೇಲೆ ಕಾಣಿಸಿದ ಫಲಸಂಜ್ಞಕವಾದ ಪದಾರ್ಥಗಳನ್ನು ಹಣ್ಣಿನ ರೂಪದಲ್ಲಿ ಏಕಾದಶೀ ದಿನದಂದು ತೆಗೆದುಕೊಳ್ಳಬೇಕು. ಆದರೆ ಪ್ರಾಣ ಹೋಗುತ್ತಿದ್ದರೂ ಕೂಡ ಏಕಾದಶೀ ದಿನದಂದು ಅನ್ನವನ್ನು ಸರ್ವಥಾ ತಿನ್ನಕೂಡದು.

**46. ಶಕ್ತರಾದವರು ಏಕಾದಶೀ ದಿನದಂದು ಫಲಾಹಾರವನ್ನು ಮಾಡಿದರೆ ಅನರ್ಥ ಏನು?**

**ಉ. (ಅ) ಯದಿ ಶಕ್ತೋಽಪಿ ಗೃಹ್ಣೀಯಾತ್ ಏತಾನ್ಯೇಕಾದಶೀದಿನೇ।**
**ಯಥಾ ತೃಪ್ತಿಸ್ತಥಾ ಹಾನಿಃ ವ್ರತಸ್ಯ ಹಿ ಭವೇದ್ಧ್ರುವಮ್।**

**(ಆ) ಯೋ ಹಿ ಶಕ್ತೋಽಪಿ ಕುರ್ವೀತ ವ್ರತಹಾನಿಂ ನರಾಧಮಃ।**
**ಮಮ ದ್ರೋಹೋ ಭವೇತ್ತಸ್ಯ ನರಕಂ ಪ್ರತಿಪದ್ಯತೇ॥**

**(ಇ) ಫಲಾಹಾರಂ ತು ಯಃ ಕುರ್ಯಾತ್ ಶಕ್ತೋಽಪಿ ಹಿ ಹರೇರ್ದಿನೇ।**
**ನಮಸ್ಕಾರಾಯುತಂ ತಸ್ಯ ಪ್ರಾಯಶ್ಚಿತ್ತಂ ಪ್ರಕೀರ್ತಿತಮ್॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದ ಅಭಿಪ್ರಾಯವನ್ನು ಈ ಕೆಳಕಂಡಂತೆ ತಿಳಿದುಕೊಳ್ಳಬೇಕು.

(ಅ) ಏಕಾದಶೀ ದಿನದಂದು ಶುದ್ಧವಾದ ಉಪವಾಸವನ್ನು ಮಾಡಲು ಶಕ್ತನಾದವನು, ಈ ಮೇಲೆ ಹೇಳಿದ ಫಲಸಂಜ್ಞಕವಾದ ಪದಾರ್ಥಗಳನ್ನು ಏಕಾದಶೀ ದಿನದಂದು ತೆಗೆದುಕೊಂಡರೆ ನಿಶ್ಚಯವಾಗಿಯೂ ಏಕಾದಶೀವ್ರತದ ಹಾನಿಯು ಆಗುತ್ತದೆ.

(ಆ) ಯಾವ ಮನುಷ್ಯನು ಏಕಾದಶೀ ದಿನದಂದು ಶುದ್ಧವಾದ ಉಪವಾಸವನ್ನು ಮಾಡಲು ಶಕ್ತನಾಗಿದ್ದರೂ ಅಂದು ಫಲಾಹಾರ ಮಾಡುವುದರ ಮೂಲಕ ಏಕಾದಶೀ ವ್ರತದ ಹಾನಿಯನ್ನು ಮಾಡಿಕೊಳ್ಳುತ್ತಾನೋ ಅವನು ನನ್ನ ದ್ರೋಹಿ ಎಂದು ಸ್ವತಃ ಪರಮಾತ್ಮನೇ ಹೇಳಿರುತ್ತಾನೆ. ಅಷ್ಟೇ ಅಲ್ಲದೆ ಅಂತಹವನು ನರಕವನ್ನೇ ಹೊಂದುತ್ತಾನೆ.

(ಇ) ಯಾವ ಮನುಷ್ಯನು ಏಕಾದಶೀ ದಿನದಂದು ಶುದ್ಧವಾದ ಉಪವಾಸವನ್ನು ಮಾಡಲು ಶಕ್ತನಾಗಿದ್ದರೂ ಅಂದು ಫಲಾಹಾರವನ್ನು ಮಾಡುತ್ತಾನೋ, ಅವನಿಗೆ ಹತ್ತು ಸಾವಿರ ನಮಸ್ಕಾರಗಳೇ ಪ್ರಾಯಶ್ಚಿತ್ತವೆಂದು ಶಾಸ್ತ್ರಗಳಲ್ಲಿ ಹೇಳಿದೆ. ಅಂದರೆ ಅವನು ಏಕಾದಶೀ ದಿನದಂದು ಉಪವಾಸವನ್ನು ಮಾಡಲು ಶಕ್ತನಾಗಿದ್ದರೂ, ಅಂದು ಫಾಲಹಾರವನ್ನು ಮಾಡುವುದರ ಮೂಲಕ ಮಹಾಪರಾಧವನ್ನು ಮಾಡಿದ್ದರ ಪ್ರಯುಕ್ತ ಅದರ ಪ್ರಾಯಶ್ಚಿತ್ತ ರೂಪದಲ್ಲಿ ಭಗವಂತನಿಗೆ ಹತ್ತು ಸಾವಿರ

ನಮಸ್ಕಾರಗಳನ್ನು ಹಾಕಬೇಕೆಂದು ಶಾಸ್ತ್ರದಲ್ಲಿ ಹೇಳಿದೆ.

**47. ಏಕಾದಶೀ ದಿನದಂದು ಹೋಮಾದಿಗಳನ್ನು ಮಾಡಬಾರದೆ?**

**ಉ. ನ ಶ್ರಾದ್ಧಂ ತತ್ರ ಕುರ್ವೀತ ನ ಹೋಮಂ ನ ಚ ತರ್ಪಣಂ।**
**ಯದಿ ಮೋಹಾತ್ ಪ್ರಕುರ್ವೀತ ವ್ರತಹಾನಿರ್ಭವೇದ್ಧ್ರುವಮ್।**

**2. " ದೇವಾನಾಂ ಚ ಋಷೀಣಾಂ ಚ ಪಿತೃಣಾಂ ಚ ವಿಶೇಷತಃ।**
**ಅನ್ನಂ ನ ದದ್ಯಾತ್ ಕೃಷ್ಣಾಹ್ನೇ ಭಗವಂತಂ ಹರಿಂ ವಿನಾ॥**

**3. ಔಪಾಸನಂ ತಥಾ ಶ್ರಾದ್ಧಂ ಬ್ರಹ್ಮಯಜ್ಞಾದಿಪಂಚಕಮ್।**
**ನ ತತ್ರ ವಿಧಿಲೋಪಃ ಸ್ಯಾಜ್ಜಯಂತ್ಯಾಂ ಹರಿವಾಸರೇ"॥**

ಎಂಬೀ ಮುಂತಾದ ಪ್ರಮಾಣದಲ್ಲಿ ಹೇಳಿದಂತೆ ಏಕಾದಶೀದಿನದಂದು ಹೋಮ - ದೇವತಾತರ್ಪಣ-ಋಷಿತರ್ಪಣ-ಪಿತೃತರ್ಪಣ-ಔಪಾಸನ.

ಬ್ರಹ್ಮಯಜ್ಞ-ದೇವಯಜ್ಞ-ಪಿತೃಯಜ್ಞ-ಮನುಷ್ಯಯಜ್ಞ- ಭೂತಯಜ್ಞ ಎಂಬ ಪಂಚಯಜ್ಞಗಳು. ಇವುಗಳನ್ನು ಮಾಡಬಾರದು. ಮಾಡದೇ ಇದ್ದ ಪ್ರಯುಕ್ತ ಕರ್ಮಲೋಪವಾಗುವುದಿಲ್ಲ. ಆದರೆ ಹೋಮಾದಿಗಳನ್ನು ದ್ವಾದಶೀ ದಿನದಂದೇ ಮಾಡಬೇಕು. ದ್ವಾದಶೀ ದಿನದಂದು ಹರಿವಾಸರವಿದ್ದಲ್ಲಿ ಅದು ಕಳೆದ ಮೇಲೆಯೇ ಹೋಮಾದಿಗಳನ್ನು ಮಾಡಬೇಕು. ಒಟ್ಟಿನಲ್ಲಿ ಏಕಾದಶೀ ದಿನದಂದು ಹೋಮಾದಿಗಳು ನಿಷಿದ್ಧವಾಗಿರುವುದರಿಂದ, ಅಂದು ಮಾಡಬಾರದು.

**48. ಏಕಾದಶೀದಿನದಂದು ದೇವರಿಗೆ ಅನ್ನ ನೈವೇದ್ಯವನ್ನು ಮಾಡಬಹುದೇ?**

ಉ. ಶ್ರೀಕೃಷ್ಣಾಚಾರ್ಯರು ತಮ್ಮ ಸ್ಮೃತಿಮುಕ್ತಾವಳೀ ಗ್ರಂಥದ ಕಾಲನಿರ್ಣಯ ಪ್ರಕರಣದಲ್ಲಿ ಏಕಾದಶೀ ದಿನದಂದು ದೇವರಿಗೆ ಅನ್ನ ನೈವೇದ್ಯವನ್ನು ಮಾಡಬಾರದು. ಆದರೆ ಹಣ್ಣು ಮುಂತಾದವುಗಳನ್ನೇ ನೈವೇದ್ಯ ಮಾಡಬೇಕೆಂದು ಮೊದಲನೇ ಪಕ್ಷವನ್ನು ಹೇಳಿ 'ಅಥವಾ' ಉಭಯ ವಾಕ್ಯಾನುಸಾರಾತ್ ಸ್ವಯಂವ್ಯಕ್ತಾದಿಸ್ಥಲೇ ಅನ್ನನೈವೇದ್ಯಂ ಕಾರ್ಯಮ್। ಗೃಹಾರ್ಚಾದೌ ತು ಫಲಾದಿಕಮೇವ ನೈವೇದ್ಯಂ ಇತ್ಯವಿರೋಧೋ ಜ್ಞೇಯಃ'' ಎಂಬ ವಾಕ್ಯಗಳಿಂದ ಪಕ್ಷಾಂತರವನ್ನು (ಎರಡನೇ ಪಕ್ಷವನ್ನು) ಹೇಳಿರುತ್ತಾರೆ. ಇದರ ಪ್ರಕಾರ ಏಕಾದಶೀದಿನದಂದು ಸ್ವಯಂವ್ಯಕ್ತ ಪ್ರತಿಮಾವುಳ್ಳ ಸ್ಥಳ ಮತ್ತು

ಇನ್ನಿತರ ಸ್ಥಳಗಳಲ್ಲಿ ದೇವರಿಗೆ ಅನ್ನನೈವೇದ್ಯವನ್ನು ಮಾಡಬಹುದು. ಆದರೆ ನಮ್ಮನಮ್ಮಮನೆಗಳಲ್ಲಿರುವ ದೇವರ ಪ್ರತಿಮೆ ಮುಂತಾದವುಗಳಿಗೆ ಹಣ್ಣು ಮುಂತಾದವುಗಳನ್ನೇ ನೈವೇದ್ಯ ಮಾಡಬೇಕು. ಅನ್ನ ನೈವೇದ್ಯವನ್ನು ಮಾಡಬಾರದು.

**49. ಯಾರಾದರು ಏಕಾದಶೀದಿನದಂದು ಮೃತರಾದರೆ ಏನು ಮಾಡಬೇಕು?**

**ಉ. ಏಕಾದಶೀಮರಣೇ ವಿಶೇಷ: ಏಕಾದಶ್ಯಾಂ ಮರಣೇಽಪಿ ಪ್ರೇತಾಹುತಿಃ ನ ಹೋತವ್ಯಾ " ಇತ್ಯುಕ್ತಂ ತತ್ರೈವ ದತ್ತಾತ್ರೇಯಸಂಹಿತಾಯಾಮ್:-**

**"ಏಕಾದಶ್ಯಾಂ ಯದಾ ಬ್ರಹ್ಮನ್ ಬ್ರಾಹ್ಮಣೋ ಮ್ರಿಯತೇ ಯದಿ।**
**ಮಂತ್ರತಃ ಸಕಲಂ ಕಾರ್ಯಂ ಪುತ್ರೈಸ್ತಸ್ಯೌರ್ಧ್ವದೇಹಿಕಮ್ ।**
**ಪ್ರೇತಾಹುತಿಃ ನ ಹೋತವ್ಯಾ ನ ಪಿಂಡಂ ನ ತಿಲಾಂಜಲಿಮ್ ।**
**ಕುರ್ಯಾತ್ಸರ್ವಂ ಪರದಿನೇ ವಿಧಿರೇಷಃ ಪರೇಽಹನಿ ।**
**ನೈವ ಚ ಕರ್ಮಲೋಪಃ ಸ್ಯಾದ್ವಿಧಿರೇಷಃ ಸನಾತನಃ ।**
**ತಿಲೋದಕಂ ಪಿಂಡದಾನಂ ಹೋಮಂ ಶ್ರಾದ್ಧಂ ಚ ತರ್ಪಣಮ್ ।**
**ತಿಲದಾನಂ ತಥಾಮಂ ಚ ನ ಕುರ್ಯಾದ್ಧರಿವಾಸರೇ" ಇತಿ ಚ ॥**

ಎಂಬೀ ಮುಂತಾದ ಪ್ರಮಾಣಗಳಿಂದ ಹೇಳಿದ ಅಭಿಪ್ರಾಯವನ್ನು ಈ ಕೆಳಗೆ ಕಾಣಿಸಿರುವಂತೆ ತಿಳಿದುಕೊಂಡು, ಅದರಂತೆ ಅನುಷ್ಠಾನ ಮಾಡಬೇಕು.

1. ಏಕಾದಶೀದಿನದಂದು ಬ್ರಾಹ್ಮಣನು ಸತ್ತರೆ ಮಕ್ಕಳು ಮಂತ್ರಪುರಸ್ಸರವಾಗಿ ಎಲ್ಲಾ ಔರ್ಧ್ವದೇಹಿಕ ಕರ್ಮವನ್ನು ಮಾಡಬೇಕು.
2. ಆದರೆ ಅಂದು ಪ್ರೇತಾಹುತಿಯನ್ನು ಕೊಡಬಾರದು.
3. ಪಿಂಡಪ್ರದಾನವನ್ನು ಮಾಡಬಾರದು.
4. ತಿಲತರ್ಪಣವನ್ನು ಕೊಡಬಾರದು.
5. ಎಲ್ಲವನ್ನೂ ಮರುದಿನವೇ ಅಂದರೆ ದ್ವಾದಶೀದಿನದಂದೇ ಮಾಡಬೇಕು.
6. ಹೀಗೆ ಮಾಡುವುದರಿಂದ ಕರ್ಮಲೋಪವಾಗುವುದಿಲ್ಲ.
7. ಒಟ್ಟಿನಲ್ಲಿ ತಿಲೋದಕ-ಪಿಂಡದಾನ-ಹೋಮ-ತರ್ಪಣ-ತಿಲದಾನ-ಆಮಶ್ರಾದ್ಧ ಇವೆಲ್ಲವನ್ನೂ ಏಕಾದಶೀದಿನದಂದು ಮಾಡಬಾರದು.

ಎಂಬುದಾಗಿ ದತ್ತಾತ್ರೇಯ ಸಂಹಿತೆಯ ಅಭಿಪ್ರಾಯವಾಗಿದೆ.

**50. ವಿದ್ಧೈಕಾದಶೀದಿನದಂದು ಉಪವಾಸವನ್ನು ಮಾಡಬಾರದೆ?**

**ಉ. ಪೂರ್ವವಿದ್ಧಾಂ ಪ್ರಕುರ್ವಾಣಃ ನರೋ ಧರ್ಮಾನ್ನಿಕೃಂತತಿ ।**
**ಸಂತತೇಸ್ತು ವಿನಾಶಾಯ ಸಂಪದೋ ಹರಣಾಯ ಚ ॥**

**2. ದಶಮೀಶೇಷಸಂಯುಕ್ತಾ ಗಾಂಧಾರ್ಯಾ ಸಮುಪೋಷಿತಾ ।**
**ತಸ್ಯಾಃ ಪುತ್ರಶತಂ ನಷ್ಟಂ ತಸ್ಮಾತ್ತಾಂ ಪರಿವರ್ಜಯೇತ್ ।**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ವಿದ್ಧೈಕಾದಶೀದಿನದಂದು ಅಂದರೆ ದಶಮಿಯಿಂದ ಕೂಡಿದ ಏಕಾದಶೀದಿನದಂದು ಅಂದರೆ ಅರುಣೋದಯಕಾಲದಲ್ಲಿ ದಶಮೀತಿಥಿಯು ಇದ್ದು, ಅನಂತರದಲ್ಲಿ ಏಕಾದಶೀತಿಥಿಯು ಬಂದಿದ್ದರೆ, ಅಂತಹ ಏಕಾದಶಿಯು, ದಶಮಿಯಿಂದ ಕೂಡಿದ ಏಕಾದಶಿಯಾಗುತ್ತದೆ ಆದಕಾರಣ, ಅಂದು ಏಕಾದಶೀ ಪ್ರಯುಕ್ತ ಉಪವಾಸವನ್ನು ಮಾಡಬಾರದು. ಉದಾಹರಣೆಗೆ ಭಾನುವಾರದ ಸೂರ್ಯೋದಯಕ್ಕಿಂತ ಪೂರ್ವದಲ್ಲಿ ಅರುಣೋದಯಕಾಲದಲ್ಲಿ ದಶಮೀ ತಿಥಿಯು ಇದ್ದು ತರುವಾಯದಲ್ಲಿ ಏಕಾದಶೀತಿಥಿಯು ಬಂದಿದ್ದರೆ ಅಂತಹ ಏಕಾದಶೀತಿಥಿಯು ದಶಮೀತಿಥಿಯಿಂದ ಕೂಡಿದ ಏಕಾದಶೀ ತಿಥಿಯಾಗುತ್ತದೆ. ಅಂತಹ ಏಕಾದಶಿಯನ್ನು ವಿದ್ಧೈಕಾದಶೀದಿನವೆಂದು ಕರೆಯಲಾಗುತ್ತದೆ. ಅಂತಹ ವಿದ್ಧೈಕಾದಶೀದಿನದಂದು ಉಪವಾಸವನ್ನು ಮಾಡಬಾರದೆಂದು ವಿಹಿತವಾಗಿರುವುದರಿಂದ, ಪ್ರಕೃತದಲ್ಲಿ ವಿದ್ಧೈಕಾದಶೀದಿನವಾದ ಭಾನುವಾರದಂದು ಏಕಾದಶೀಪ್ರಯುಕ್ತ ಉಪವಾಸವನ್ನು ಮಾಡಬಾರದು. ಆದರೆ ಸೋಮವಾರದಂದೇ ಏಕಾದಶೀ ಪ್ರಯುಕ್ತ ಉಪವಾಸವನ್ನು ಮಾಡಬೇಕು.

**51. ಹರಿವಾಸರವೆಂದರೇನು? ಹರಿವಾಸರ ಕಾಲದಲ್ಲಿ ಹೋಮಾದಿಗಳು ವರ್ಜ್ಯವೆ?**

**ಉ. 1. ಏಕಾದಶ್ಯಾಃ ಪ್ರಾಂತಭಾಗಃ ದ್ವಾದಶ್ಯಾಃ ಪೂರ್ವ ಏವ ತು ।**
**ಹರಿವಾಸರನಾಮಾಸೌ ಸರ್ವಕಾಲೋತ್ತಮೋ ಮತಃ ॥**
**2. ದ್ವಾದಶ್ಯಾಂ ವಾ ದಶಮ್ಯಾಂ ವಾ ಯದಿ ದೈವಾತ್ ಸ ಆಪತೇತ್ ।**
**ನ ತದಾಽನ್ನಂ ಸಮಶ್ನೀಯಾತ್ ಏಕಾದಶ್ಯಾಃ ಸಮೋ ಹಿ ಸಃ ॥**

3. ಹರಿವಾಸರತಃ ಪೂರ್ವಂ ದಶಮ್ಯಾಂ ಭೋಜನಂ ಸ್ಮೃತಮ್ ।
ತಸ್ಮಿನ್ನತೀತೇ ಕರ್ತವ್ಯಂ ದ್ವಾದಶ್ಯಾಂ ಪಾರಣಂ ಬುಧೈಃ ॥
4. ದ್ವಾದಶ್ಯಾಮಾದ್ಯಪಾದಸ್ತು ಸಂಗವಾತ್ಪರತೋ ಯದಿ ।
ಉಪವಾಸದ್ವಯಂ ಕಾರ್ಯಮನ್ಯಥಾ ನರಕಂ ವ್ರಜೇತ್ ॥
5. ಪ್ರಾತಃಕಾಲೇ ತು ದ್ವಾದಶ್ಯಾಂ ಯದಾ ಸ್ಯಾದ್ಧರಿವಾಸರಃ ।
ತದಾ ಕುರ್ವೀತ ಹೋಮಾದಿ ವ್ಯತೀತೇ ಹರಿವಾಸರೇ ॥
6. ತರ್ಪಣಂ ಶ್ರಾದ್ಧಹೋಮಾದಿ ನಿತ್ಯಂ ನೈಮಿತ್ತಿಕಂ ತಥಾ ।
ಕುರ್ವೀತ ಜಲಪಾನಾದಿ ವ್ಯತಿತೇ ಹರಿವಾಸರೇ ॥
7. ತಿಲೋದಕಂ ಪಿಂಡದಾನಂ, ಹೋಮಂ ಶ್ರಾದ್ಧಂ ಚ ತರ್ಪಣಮ್ ।
ತಿಲದಾನಂ ತಥಾಮಂ ಚ ನ ಕುರ್ಯಾದ್ಧರಿವಾಸರೇ ॥

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ. ಏಕಾದಶಿಯ ಕೊನೆಯಭಾಗಕ್ಕೂ, ಮತ್ತು ದ್ವಾದಶಿಯ ಮೊದಲನೆಯ ಭಾಗಕ್ಕೂ ಹರಿವಾಸರವೆಂದು ಹೆಸರು. ಈ ಹರಿವಾಸರವು ಏಕಾದಶಿಗೆ ಸಮಾನವಾದದ್ದು. ದ್ವಾದಶೀದಿನದಂದೇ ಆಗಲಿ ಅಥವಾ ದಶಮೀದಿನದಂದೇ ಆಗಲಿ ಹರಿವಾಸರವು ಬಂದರೆ, ಆ ಸಮಯದಲ್ಲಿ ಭೋಜನಾದಿಗಳನ್ನು ಮಾಡಬಾರದು. ದಶಮೀದಿನ ಹರಿವಾಸರ ಬಂದರೆ, ಹರಿವಾಸರಕ್ಕಿಂತ ಪೂರ್ವದಲ್ಲೇ ಭೋಜನಾದಿಗಳನ್ನು ಮಾಡಬೇಕು. ದ್ವಾದಶಿಯ ದಿನ ಹರಿವಾಸರವು ಬಂದರೆ ಹರಿವಾಸರವು ಕಳೆದ ಮೇಲೆಯೇ ಪಾರಣಾದಿಗಳನ್ನು ಮಾಡಬೇಕು. ದ್ವಾದಶಿಯ ಮೊದಲನೇ ಪಾದವು ಸಂಗವ ಕಾಲವನ್ನು ಮೀರಿ ಇದ್ದರೆ ಅಂದರೆ ಸಂಗವಕಾಲದ ಅನಂತರದಲ್ಲೂ ಕಂಡುಬಂದರೆ ಎರಡು ಉಪವಾಸಗಳನ್ನು ಮಾಡಬೇಕು. ದ್ವಾದಶೀದಿನ ದಂದು ಹರಿವಾಸರವು ಬಂದರೆ, ಆ ಸಮಯದಲ್ಲಿ ಹೋಮ-ತರ್ಪಣ-ಶ್ರಾದ್ಧ-ಪಿಂಡದಾನ-ಪಾರಣೆ ಮುಂತಾದವುಗಳನ್ನು ಮಾಡಬಾರದು. ಹರಿವಾಸರ ಕಳೆದ ಮೇಲೆಯೇ ಮಾಡಬೇಕು.

52. ಏಕಾದಶೀಜಾಗರ ಮಹಿಮೆಯನ್ನು ತಿಳಿಸುವಿರಾ?

ಉ. 1. ಶೃಣು ಪುತ್ರಃ ನೃಣಾಂ ಪಾಪಂ ಕೋಟಿಜನ್ಮಾರ್ಜಿತಂ ಕಲೌ ।
ವ್ಯಪೋಹತಿ ನ ಸಂದೇಹಃ ಏಕಾದಶ್ಯಾಂ ತು ಜಾಗರಾತ್ ॥

**2. ವಾಸರೇ ವಾಸುದೇವಸ್ಯ ಯೇನ ಕುರ್ವಂತಿ ಜಾಗರಮ್ ।**

**ಶೋಷಯಂತ್ಯುಪವಾಸೇನ ಕಥಂ ದೇಹಮಾತ್ಮನಃ ॥**

**3. ಸಂಪ್ರಾಪ್ತೇ ವಾಸರೇ ವಿಷ್ಣೋಃ ಯೇ ನ ಕುರ್ವಂತಿ ಜಾಗರಂ ।**

**ನಶ್ಯತೇ ಸುಕೃತಂ ತೇಷಾಂ ವೈಷ್ಣವಾನಾಂ ಚ ನಿಂದಯಾ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದ ಅಭಿಪ್ರಾಯವು ಈ ಕೆಳಕಂಡಂತೆ ಇದೆ:

1. ಏಕಾದಶೀದಿನ ರಾತ್ರಿ ಜಾಗರಣೆಯನ್ನು ಮಾಡಿದರೆ ಕಲಿಯುಗದಲ್ಲಿ ಮನುಷ್ಯನು ಒಂದು ಕೋಟಿಜನ್ಮಗಳಲ್ಲಿ ಗಳಿಸಿದ ಪಾಪಗಳು ನಾಶವಾಗುತ್ತವೆ.

2. ಏಕಾದಶೀದಿನದಂದು ಜಾಗರಣೆಯನ್ನು ಮಾಡದಲೆ ಕೇವಲ ಉಪವಾಸದಿಂದ ದೇಹಶೋಷಣೆ ಮಾಡುವುದು ವ್ಯರ್ಥ.

3. ಏಕಾದಶೀದಿನದಂದು ಯಾರು ಜಾಗರಣೆಯನ್ನು ಮಾಡುವುದಿಲ್ಲವೋ ಅವರ ಪುಣ್ಯವೆಲ್ಲಾ ನಾಶವಾಗಿ ಹೋಗುತ್ತದೆ. ಹೀಗೆ ಹೇಳುವುದರಿಂದ ಜಾಗರಣೆಗೆ ಮಹತ್ವಉಂಟೆಂದೂ ಏಕಾದಶೀದಿನ ಜಾಗರಣೆಯನ್ನು ಮಾಡಲೇಬೇಕೆಂದು ತಿಳಿದುಬರುತ್ತದೆ. ಆದ್ದರಿಂದ ಪ್ರತಿ ಏಕಾದಶೀರಾತ್ರಿ ಜಾಗರಣೆಯನ್ನು ಅವಶ್ಯವಾಗಿ ಮಾಡಲೇಬೇಕು.

# ಸ್ತ್ರೀ

**53. ಹೆಂಡತಿಯು ಗಂಡನಿಗೆ ಪ್ರತಿನಿತ್ಯ ನಮಸ್ಕಾರವನ್ನು ಮಾಡಿದರೆ ಬರುವ ಫಲವೇನು?**

ಉ. **"ಭೂಪ್ರದಕ್ಷಿಣಷಟ್ಕಂ ಯತ್ ಕಾಶೀಯಾತ್ರಾಂ ಅಯುತಂ ಚ ಯತ್ ।**
**ಸೇತುಸ್ನಾನಂ ಶತಂ ಯಚ್ಚ ತತ್ಫಲಂ ಪತಿವಂದನಾತ್ ॥**
ಶ್ರೀಮನ್ಮಹಾಭಾರತದಲ್ಲಿ ಹೇಳಿರುವಂತೆ, ಆರು ಬಾರಿ ಭೂಪ್ರದಕ್ಷಿಣೆಯ ಫಲವು-ಹತ್ತು ಸಹಸ್ರ ಬಾರಿ ಕಾಶೀಯಾತ್ರೆಯ ಫಲವು ಹಾಗೂ ನೂರು ಬಾರಿ ಸೇತುಸ್ನಾನದ ಫಲವು, ಪ್ರತಿನಿತ್ಯ ಪತಿಗೆ ನಮಸ್ಕರಿಸುವ ಪತಿವ್ರತಾ ಸ್ತ್ರೀಯರಿಗೆ ಬರುತ್ತದೆ.

**54. ಕೆಲವೊಂದು ಸ್ತ್ರೀ ಧರ್ಮಗಳನ್ನು ಸವಿಸ್ತಾರವಾಗಿ ತಿಳಿಸುವಿರಾ?**

ಉ. **ಸ್ತ್ರೀಯರಿಗೆ ಶಾಸ್ತ್ರದಲ್ಲಿ ಅನೇಕ ಧರ್ಮಗಳನ್ನು ವಿಧಾನ ಮಾಡಲಾಗಿದೆ. ಅವುಗಳ ಪೈಕಿ ಈಗ ಕೆಲವೊಂದು ಧರ್ಮಗಳನ್ನು ಮಾತ್ರ ತಿಳಿಸಲಾಗುತ್ತದೆ.**

**ಪಾದಾಭ್ಯಂಗಂ ತಿಲೋಭ್ಯಂಗ ದ್ವಿಜಸ್ಯೋಚ್ಛಿಷ್ಟಮಾರ್ಜನಮ್।**
**ಏಕೈಕಂ ಪಾಂಡವಶ್ರೇಷ್ಠ (ಸ್ತ್ರೀಣಾಂ) ರಾಜಸೂಯಾದ್ವಿಶಿಷ್ಯತೇ॥**

ಎಂದು ಭಾರತದಲ್ಲಿ ಹೇಳಿದಂತೆ ಪತಿಯ ಕಾಲಿಗೆ ಎಣ್ಣೆಯನ್ನು ಉಜ್ಜುವುದು, ತಲೆಗೆ ಎಣ್ಣೆಯನ್ನು ತಿಕ್ಕಿ ಅಭ್ಯಂಜನ ಮಾಡಿಸುವುದು ಹಾಗೂ ಬ್ರಾಹ್ಮಣರ ಎಂಜಲನ್ನೆತ್ತಿ ಸಾರಿಸುವುದು. ಈ ಮೂರರ ಪೈಕಿ ಒಂದೊಂದೂ ರಾಜಸೂಯಯಾಗಿಕ್ಕಿಂತಲೂ ಶ್ರೇಷ್ಠವಾದದ್ದು. ಅಂತೆಯೇ ರುಕ್ಮಿಣೀ ಸಹಿತವಾದ ಶ್ರೀಕೃಷ್ಣನು ರಾಜಸೂಯಯಾಗದಲ್ಲಿ ಬ್ರಾಹ್ಮಣರ ಉಚ್ಛಿಷ್ಟವನ್ನು ಬಳೆದು ಅದರ ಮಹಿಮೆಯನ್ನು ಸ್ತ್ರೀಕುಲಕ್ಕೂ ತೋರಿಸಿರುವುದನ್ನು ಇಲ್ಲಿ ಸ್ಮರಿಸಬಹುದು.

**ಭೂಪ್ರದಕ್ಷಿಣಷಟ್ಕಂ ಯತ್ ಕಾಶೀಯಾತ್ರಾಂ ಅಯುತಂ ಚ ಯತ್।**
**ಸೇತುಸ್ನಾನಂ ಶತಂ ಯಚ್ಚ ತತ್ಫಲಂ ಪತಿವಂದನಾತ್ ॥**

ಎಂದು ಭಾರತದಲ್ಲಿ ಹೇಳಿದಂತೆ ಆರು ಸಾರಿ ಭೂಪ್ರದಕ್ಷಿಣೆಯ ಫಲವು, 10 ಸಹಸ್ರ ಬಾರಿ ಕಾಶೀಯಾತ್ರೆಯ ಫಲವು, ಹಾಗೂ ನೂರು ಸಾರಿ ಸೇತು ಸ್ನಾನದ ಫಲವು, ಪತಿಯ ಪಾದಗಳಲ್ಲಿ ಪ್ರತಿನಿತ್ಯ ನಮಸ್ಕರಿಸುವ ಪತಿವ್ರತಾ ಸ್ತ್ರೀಯರಿಗೆ ಬರುತ್ತದೆ ಇದರಂತೆ.

**ಜ್ಞಾನಂ ವಿಜ್ಞಾನಮಾರೋಗ್ಯಂ ರೂಪಂ ಸಂಪತ್ತಥೈವ ಚ ।**
**ಸೌಭಾಗ್ಯಂ ಚೈವ ಸ್ತ್ರೀಣಾಂ ಹಿ ಪ್ರಾಪ್ಯತೇ ಪತಿಸೇವಯಾ ॥**

ಎಂದು ಭಾರತದಲ್ಲಿ ಹೇಳಿದಂತೆ ಜ್ಞಾನ-ವಿಜ್ಞಾನ-ಆರೋಗ್ಯ-ರೂಪ ಸಂಪತ್ತು ಹಾಗೂ ದೀರ್ಘಸೌಮಂಗಲ್ಯ ಇವುಗಳು ಸ್ತ್ರೀಯರಿಗೆ ಪತಿಸೇವೆಯಿಂದ ದೊರೆಯುತ್ತವೆ.

**ಗೋಪೀಚಂದನಪುಂಡ್ರಂ ತು ಸ್ತ್ರೀಣಾಂ ವೈ ಧರ್ಮಸಾಧನಮ್ ।**
**ಪುಂಡ್ರಹೀನಾ ತು ಯಾ ನಾರೀ ಭರ್ತುರಾಯುಃಕ್ಷಯಾ ತು ಸಾ ॥**

ಎಂದು ಹೇಳಿದಂತೆ ಸ್ತ್ರೀಯರು ಪ್ರತಿನಿತ್ಯವೂ ಹಣೆಯಲ್ಲಿ ದಂಡಾಕಾರವಾಗಿ ಗೋಪಿಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸಿ ಅದನ್ನು ಸೀಳಿ ರಂಧ್ರವನ್ನು ಏರ್ಪಡಿಸಬೇಕು. ಈ ರಂಧ್ರವೇ ರಮಾನಿಲಯವೆನಿಸುವುದು. ಈ ರಂಧ್ರದಲ್ಲಿ

ತಿಲಕಾಕೃತಿಯ ಸುಂದರವಾದ ಸೌಮ್ಯವಾದ ಕುಂಕುಮವನ್ನು ಧರಿಸಬೇಕು. ಊರ್ಧ್ವಪುಂಡ್ರ ಧರಿಸದೇ ಕುಂಕುಮ ಧರಿಸಲು ಅಧಿಕಾರವೇ ಇಲ್ಲ. ಇದರಿಂದ ಪತಿಯ ಆಯುಸ್ಸು ಅಭಿವೃದ್ಧಿಯಾಗುತ್ತದೆ. ಹೀಗೆ ಶಾಸ್ತ್ರದಲ್ಲಿ ವಿಹಿತವಾದ ಅನೇಕ ಧರ್ಮಗಳನ್ನು ಸ್ತ್ರೀಯರು ಆಚರಿಸುವುದರಿಂದಲೇ ಇಹ ಪರಗಳಲ್ಲಿ ಸೌಖ್ಯವುಂಟೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

**55. ಸ್ತ್ರೀಯರು ಕೂಡ ಪ್ರತಿನಿತ್ಯ ಗೋಪಿಚಂದನವನ್ನು ಧಾರಣ ಮಾಡಬೇಕೇ?**

**ಸ್ಮೃತರ್ಥಸಾಗರೇ:-**

**ಉ. ಸುವಾಸಿನ್ಯೋಽಪಿ ಬಿಭೃಯುಃ ತಿಲಕೋಪರಿ ಕುಂಕುಮಮ್ ।**
**ಅನ್ಯಥಾ ಪಾತಕಂ ಪ್ರೋಕ್ತಂ ತತ್ಪಾಕಂ ನಿಷ್ಫಲಂ ಭವೇತ್ ॥**

ಎಂಬೀ ಮುಂತಾದ ಪ್ರಮಾಣದಲ್ಲಿ ಹೇಳಿದಂತೆ ಪ್ರತಿನಿತ್ಯ ಮುತ್ತೈದೆಯರೂ ಕೂಡ ಗೋಪಿಚಂದನದಿಂದ ಹಣೆಯಲ್ಲಿ ತಿಲಕವನ್ನುಧರಿಸಿ ಅದರ ಮೇಲೆ ಕುಂಕುಮವನ್ನು ಧರಿಸಬೇಕು. ಇಲ್ಲದಿದ್ದರೆ ಪಾಪ. ಅಂತಹವರ ಅಡುಗೆ/ಅಡಿಗೆ ನಿಷ್ಫಲವೆನಿಸುವುದು.

**56. ಎಂತಹ ಸ್ತ್ರೀ ಸಾಧ್ವೀಎನಿಸುತ್ತಾಳೆ?**

**ಉ. ನೈವ ಸಾಧ್ವೀ ವಿನಿರ್ದಿಷ್ಟಾ ಕೇವಲೋಪಸ್ಥರಕ್ಷಣಾತ್ ।**
**ವಿಪ್ರಿಯಂ ನಾಚರೇತ್ ಕಿಂಚಿತ್ ಪತ್ಯುಃ ಸಾಧ್ವೀತಿ ಸಾ ಸ್ಮೃತಾ ॥**
**ಕರ್ಮಣಾ ಮನಸಾ ವಾಚಾ ಭರ್ತುಃ ಪ್ರಿಯಹಿತೈಷಿಣೀ ।**
**ಯಾ ನಾರೀ ಸಾ ಸ್ಮೃತಾ ಸಾಧ್ವೀ ಪರಿಪೂಜನತತ್ಪರಾ ॥**

ಎಂದು ವಿಷ್ಣುಧರ್ಮೋತ್ತರದಲ್ಲಿ ಹೇಳಿದಂತೆ, ಸ್ತ್ರೀಯು ದೈಹಿಕವಾಗಿ ಪರಪುರುಷನ ಸಂಪರ್ಕ ಮಾಡದ ಮಾತ್ರಕ್ಕೆ ಸಾಧ್ವೀ ಎನಿಸುವುದಿಲ್ಲ. ಯಾರು ತನ್ನ ಪತಿಗೆ ಯಾವುದೇ ರೀತಿಯ ಅಪ್ರಿಯವನ್ನು ನಡೆಸುವುದಿಲ್ಲವೋ ಆಕೆ ಸಾಧ್ವೀ ಎನಿಸುವಳು. ಮತ್ತು ಕರ್ಮದಿಂದ ಮಾತಿನಿಂದ ಹಾಗು ಮನಸ್ಸಿನಿಂದ ಪತಿಯ ಪ್ರಿಯವನ್ನು ಹಾಗು ಹಿತವನ್ನು ಬಯಸುವ. ಪತಿಯನ್ನು ಗೌರವಿಸುವುದರಲ್ಲಿ ತತ್ಪರಳಾಗಿರುವ ಸ್ತ್ರೀ ಸಾಧ್ವೀ ಎನಿಸುವಳು.

**57. ಪತಿಯು ಯಾವ ಪದಾರ್ಥವನ್ನು ತಿನ್ನುವುದಿಲ್ಲವೋ ಅದನ್ನು ಪತ್ನಿಯಾದವಳು ತಿನ್ನಬಹುದೆ?**

ಉ. **ಯಚ್ಚ ಭರ್ತಾ ಪಿಬತಿ ಯಚ್ಚ ಭರ್ತಾ ನ ಸೇವತೇ।**
**ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ವರ್ಜಯಾಮ್ಯಹಮ್॥**
**(ಮ.ಭಾರ-ವನ-233-33)**

ಎಂದು ಹೇಳಿದಂತೆ ಪತಿಯು ಯಾವುದನ್ನು ಕುಡಿಯುವುದಿಲ್ಲವೋ ಯಾವುದನ್ನು ಸೇವಿಸುವುದಿಲ್ಲವೋ, ಯಾವುದನ್ನು ತಿನ್ನುವುದಿಲ್ಲವೋ ಅವೆಲ್ಲವನ್ನು ಪತ್ನಿಯಾದವಳು ದೂರೀಕರಿಸಬೇಕು.

**58. ಪುರುಷರಗಿಂತಲೂ ಸ್ತ್ರೀಯರಿಗೆ ಕಾಮವು ಹೆಚ್ಚೆಂದು ಹೇಳುತ್ತಾರೆ. ಇದು ನಿಜವೆ?**

ಉ. **"ಸ್ತ್ರೀಣಾಂ ದ್ವಿಗುಣಮಾಹಾರೋ ಲಜ್ಜಾ ಚಾಪಿ ಚತುರ್ಗುಣಾ।**
**ಸಾಹಸಂ ಷಡ್ಗುಣಂ ಚೈವ ಕಾಮಶ್ಚಾಷ್ಟಗುಣಾ ಸ್ಮೃತಾಃ॥**
**(ಚಾಣಕ್ಯ ನೀತಿ ಅಧ್ಯಾಯ - ೧. ಶ್ಲೋ ೧೬)**

ಎಂದು ಹೇಳಿದಂತೆ ಸ್ತ್ರೀಯರಿಗೆ ಪುರುಷರಗಿಂತಲೂ ಕಾಮವು ಎಂಟು ಪಟ್ಟು ಹೆಚ್ಚಾಗಿರುತ್ತದೆ. ಆದ್ದರಿಂದ ಪುರುಷರಗಿಂತಲೂ ಸ್ತ್ರೀಯರಿಗೆ ಕಾಮ ಹೆಚ್ಚಾಗಿರುತ್ತದೆಂಬುದು ನಿಜ.

**59. ಸ್ತ್ರೀಯರು ಸಾಷ್ಟಾಂಗ ನಮಸ್ಕಾರವನ್ನು ಮಾಡಬಹುದೆ?**

ಉ. (ಸ್ಕಾಂದಪುರಾಣ)

**ತ್ರ್ಯಂಗಃ ಸ್ತ್ರೀಣಾಂ ನಮಸ್ಕಾರಃ ಪುಂಸಾಮಷ್ಟಾಂಗ ಈರಿತಃ ।**
**ಜಾನುಯುಗ್ಮಸ್ಯ ಶಿರಸೋ ಭೂಸಂಗಾತ್ ತ್ರ್ಯಂಗ ಇಷ್ಯತೇ॥**

ಸ್ತ್ರೀಯರು ಸಾಷ್ಟಾಂಗ ನಮಸ್ಕಾರವನ್ನು ಮಾಡಬಾರದು. ಅದು ಶಾಸ್ತ್ರನಿಷಿದ್ಧ. ಸಾಷ್ಟಾಂಗ ನಮಸ್ಕಾರವು ಪುರುಷರಿಗೆ ಮಾತ್ರ ವಿಹಿತವಾದದ್ದು. ಸ್ತ್ರೀಯರಿಗೆ ಶಾಸ್ತ್ರದಲ್ಲಿ ತ್ರ್ಯಂಗ ನಮಸ್ಕಾರವು ಹೇಳಲಟ್ಟಿದೆ. ತ್ರ್ಯಂಗ ನಮಸ್ಕಾರ ವೆಂದರೆ ಎರಡು ಮಂಡಿಗಳು ಮತ್ತು ತಲೆ ಈ ಮೂರು ಅಂಗಗಳಿಂದ ಮಾಡುವ ನಮಸ್ಕಾರ. ಅಂದರೆ ಸ್ತ್ರೀಯರು ಎರಡು ಮಂಡಿಗಳನ್ನು ನೆಲಕ್ಕೆ ಊರಿ, ತಲೆಯನ್ನು ಭೂಮಿಗೆ ತಾಕಿಸಿ, ಹೀಗೆ ಮೂರು ಅಂಗಗಳಿಂದ ಭೂಮಿಯನ್ನು ತಾಕುತ್ತಾ ನಮಸ್ಕಾರವನ್ನು ಮಾಡಬೇಕು. ಇದೇ ತ್ರ್ಯಂಗ ನಮಸ್ಕಾರ.

**60. ಸ್ತ್ರೀಯರು ಸೀರೆಯನ್ನು ಹೇಗೆ ಉಡಬೇಕು?**

ಉ. **ಶಂಖಃ :-**

**ನ ಪರಪುರುಷಂ ಭಾಷಯೇತ, ಅನ್ಯತ್ರ ವಣಿಕ್ ವೃದ್ಧವೈದ್ಯೇಭ್ಯಃ ನ ನಾಭಿಂ ದರ್ಶಯೇತ್, ಆಗುಲ್ಫಾತ್ ವಾಸಃ ಪರಿದಧ್ಯಾತ್, ನ ಸ್ತನೌ ವಿವೃತೌ ಕುರ್ಯಾತ್, ನ ಹಸೇತ್ ನ ಭರ್ತಾರಂ ತದ್ಬಂಧೂನ್ ವಾ ದ್ವಿಷ್ಯಾತ್** - ಅಂದರೆ ಸ್ತ್ರೀಯರು ಪರ ಪುರುಷರ ಜೊತೆಯಲ್ಲಿ ಮಾತನಾಡಬಾರದು. ಆದರೆ ವ್ಯಾಪಾರಿಗಳು, ವೃದ್ಧರು, ವೈದ್ಯರು ಇವರುಗಳ ಜೊತೆಯಲ್ಲಿ ಮಾತನಾಡುವುದು ಅನಿವಾರ್ಯವಾದ್ದರಿಂದ ಮಾತನಾಡಿದರೆ ದೋಷವಿಲ್ಲ. ಹೊಕ್ಕಳು ಕಾಣುವ ಹಾಗೆ ಎಂದಿಗೂ ಇರಬಾರದು. ಪಾದಗಳ ಗಂಟಿನವರೆಗೆ ಸೀರೆಯನ್ನು ಧರಿಸಬೇಕು. ಎದೆ ತುಂಬುವ ಹಾಗೆ ಸೆರಗನ್ನು ಹೊದ್ದು ಕೊಂಡಿರಬೇಕು. ಹಾಸ್ಯವನ್ನು ಮಾಡಬಾರದು. ಗಂಡನನ್ನು ಮತ್ತು ಗಂಡನ ಸಂಬಂಧಿಕರನ್ನು ಯಾವ ಕಾರಣಕ್ಕೂ ಎಂದಿಗೂ ದ್ವೇಷಿಸಬಾರದು ಎಂದು ಶಂಖ ಸ್ಮೃತಿಕಾರರ ಅಭಿಪ್ರಾಯ. ಇವರ ಅಭಿಪ್ರಾಯದ ಪ್ರಕಾರ ಸ್ತ್ರೀಯರು ಸೀರೆಯನ್ನು ತಮ್ಮ ಪಾದದ ಗಂಟಿನವರೆಗೆ ಉಡಬೇಕು.

**61. ಗಂಡನ ಪುಣ್ಯದಲ್ಲಿ ಹೆಂಡತಿಗೆ ಎಷ್ಟು ಭಾಗ ಸೇರುತ್ತದೆ?**

ಉ. (ಶಾತಾತಪ ಸ್ಮೃತಿ)

**ಪತಿಪುಣ್ಯಾರ್ಧಭಾಕ್‌ನಾರೀ ನ ಹಿ ಪತ್ಯಘಭಾಗಭಾಕ್ ।**
**ನ ಪತ್ನೀಪುಣ್ಯಭಾಗ್ಭರ್ತಾ ಭವೇತ್ಪಾಪಾರ್ಧಭಾಗ್ಭವೇತ್ ॥**
**ಭರ್ತೃಭ್ಯಃ ಸಕಲಂ ಧರ್ಮಂ ಶೃಣ್ವಂತಿ ಹಿ ಪತಿವ್ರತಾಃ ॥**

ಎಂದು ಶಾತಾತಪ ಋಷಿಗಳು ತಮ್ಮ ಸ್ಮೃತಿಯಲ್ಲಿ :- ಪತಿಯ ಪುಣ್ಯದಲ್ಲಿ ಅರ್ಧಭಾಗ ಸತಿಯರಿಗೆ ಬರುತ್ತದೆ. ಆದರೆ ಪತಿಯ ಪಾಪದಲ್ಲಿ ಪತ್ನಿಗೆ ಪಾಲು ಇಲ್ಲ. ಪತ್ನಿಯು ಆಚರಿಸಿದ ಪುಣ್ಯಕರ್ಮದಿಂದ ಲಬ್ದವಾದ ಪುಣ್ಯದಲ್ಲಿ ಪತಿಗೆ ಪಾಲು ಇಲ್ಲ. ಪತ್ನಿಯು ಆಚರಿಸಿದ ಪಾಪಕರ್ಮದಿಂದ ಲಬ್ಧವಾದ ಪಾಪದಲ್ಲಿ ಅರ್ಧಭಾಗ ಪತಿಗೆ ಸೇರುತ್ತದೆ, ಎಂದು ಹೇಳಿದ್ದಾರೆ.

ಈ ಅಭಿಪ್ರಾಯವನ್ನೇ ನಾರದಾಂಶಸಂಭೂತರಾದ ಶ್ರೀಪುರಂದರದಾಸರು ಒಂದು ಪದ್ಯದಲ್ಲಿ ಹೀಗೆ ಹೇಳಿದ್ದಾರೆ.:-

**ಗಂಡ ಮಾಡಿದ ಪುಣ್ಯಹೆಂಡತಿಗಿಲ್ಲ**
**ಹೆಂಡತಿ ಮಾಡಿದ ಪಾಪ ಗಂಡಗುಂಟು**
**ಹೆಂಡತಿ ಮಾಡಿದ ಪುಣ್ಯ ಗಂಡಗಿಲ್ಲ**
**ಗಂಡ ಮಾಡಿದ ಪುಣ್ಯ ಹೆಂಡತಿಗುಂಟು**
**ಜೀವ ಜೀವರ ಭೇದ ನೀನೇ ಉದ್ಧರಿಸಯ್ಯ ಪುರಂದರವಿಠಲ.**

# ಅಶ್ವತ್ಥ

**62. ಅಶ್ವತ್ಥಸೇವನೆ ಎಂದೆಂದು? ಯಾವಾಗ ಯಾವಾಗ ನಿಷಿದ್ಧ?**

**ಉ. ಭಾನೌ ಭೌಮೇ ಭೃಗೌ ಕ್ರಾಂತೇ ರಿಕ್ತಾ ಪಾತೇ ಚ ಪರ್ವಸು ।**
**ದುರ್ದಿನೇ ವೈಧೃತೌ ರಾತ್ರೌ ಅಪರಾಹ್ಣೇ ಚ ಸಂಧ್ಯಯೋಃ ।**
**ನಂದಾದೀನಾಂ ತ್ರಯೇ ಚೈವ ಕುರ್ಯಾನ್ನಾಶ್ವತ್ಥಸೇವನಮ್ ।**

ಉ. ಅಂದರೆ ಭಾನುವಾರದಂದು - ಮಂಗಳವಾರದಂದು ಉಳಿದ ಗ್ರಹಗಳೊಡನ ಚಂದ್ರನಯೋಗವಿರುವ ದಿನ ಮತ್ತು ವ್ಯತೀಪಾತವಿರುವ ದಿನದಂದು-ಅಷ್ಟಮೀ-ಚತುರ್ದಶೀ-ಹುಣ್ಣಿಮೆ- ಅಮಾವಾಸ್ಯೆ-ಸಂಕ್ರಮಣ ವೆಂಬ ಪಂಚಪರ್ವ-ದಿನಗಳಂದು-ವೋಡಕವಿದ ದಿನದಂದು-ವೈಧೃತಿಯೋಗ ವಿರುವದಿನದಂದು-ರಾತ್ರಿಕಾಲದಲ್ಲಿ-ಅಪರಾಹ್ಣಕಾಲದಲ್ಲಿ-ಸಂಧ್ಯಾಕಾಲಗಳಲ್ಲಿ-ನಂದಾ-ಭದ್ರಾ-ಜಯ ಎಂಬ ಮೂರು ತಿಥಿಗಳಲ್ಲಿ ಅಂದರೆ ಪಾಡ್ಯ-ಬಿದಿಗೆ-ತದಿಗೆ-ಷಷ್ಠೀ-ಸಪ್ತಮೀ-ಅಷ್ಟಮೀ-ಏಕಾದಶೀ-ದ್ವಾದಶೀ-ತ್ರಯೋದಶೀ ಈ ತಿಥಿಗಳಲ್ಲಿ ಅಶ್ವತ್ಥವೃಕ್ಷದ ಸೇವನೆಯನ್ನು ಮಾಡಬಾರದು.

**63. ಅಶ್ವತ್ಥನಾರಾಯಣ ಸ್ತೋತ್ರದ ಪಠನಾದಿಗಳಿಂದ ಬರುವ ಫಲ ಯಾವುದು?**
**ಯಃ ಪಠೇತ್ ಶ್ರುಣುಯಾನ್ನಿತ್ಯಂ ಅಶ್ವತ್ಥಸ್ಯ ಸಮೀಪಗಃ ।**
**ಸರ್ವಾನ್ಕಾಮಾನವಾಪ್ನೋತಿ ವಿಷ್ಣುಸಾಯುಜ್ಯಮಾಪ್ನುಯಾತ್ ॥**

ಉ. ಅಂದರೆ ಯಾರು ಅಶ್ವತ್ಥನಾರಾಯಣ ಸ್ತೋತ್ರವನ್ನು ಅಶ್ವತ್ಥವೃಕ್ಷದ ಸಮೀಪದಲ್ಲಿದ್ದು ನಿತ್ಯದಲ್ಲೂ ಪಠಿಸುತ್ತಾನೋ ಅಥವಾ ಶ್ರವಣ ಮಾಡುತ್ತಾನೋ ಅವನು ಸಕಲ ಇಷ್ಟಾರ್ಥಗಳನ್ನೂ ಹೊಂದುತ್ತಾನೆ ಮತ್ತು ವಿಷ್ಣುಸಾಯುಜ್ಯರೂಪವಾದ ಮೋಕ್ಷವನ್ನೂ ಹೊಂದುತ್ತಾನೆ.

**64. ಅಶ್ವತ್ಥವೃಕ್ಷದ ಸನ್ನಿಧಿಯಲ್ಲಿ ನಾವು ಮಾಡಬೇಕಾದ ಪ್ರಾರ್ಥನೆ ಏನು?**

**ಉ. ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ।**
**ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥**

ಹೇ ಅಶ್ವತ್ಥ! ನೀನು ನಮಗೆ ಆಯುಸ್ಸು-ಬಲ-ಕೀರ್ತಿ-ವರ್ಚಸ್ಸು-ಪ್ರಜೆಗಳು-ಪಶುಗಳು-ಐಶ್ವರ್ಯಗಳು-ಬ್ರಹ್ಮಜ್ಞಾನ ಮತ್ತು ಬುದ್ಧಿ ಇವುಗಳನ್ನು ಕೊಡು.

**ಅಕ್ಷಿಸ್ಪಂದಂ ಭುಜಸ್ಪಂದಂ ದುಃಸ್ವಪ್ನಂ ದುರ್ವಿಚಿಂತನಮ್ ।**
**ಶತ್ರೂಣಾಂ ಚ ಸಮುತ್ಥಾನಂ ಅಶ್ವತ್ಥ ಶಮಯಸ್ವ ಮೇ ॥**

ಹೇ ಅಶ್ವತ್ಥ! ನನ್ನ ಕಣ್ಣು ಹಾರುವಿಕೆ-ಭುಜ ಹಾರುವಿಕೆ ಕೆಟ್ಟ. ಕನಸ್ಸು-ದುಷ್ಟ ಚಿಂತನೆ ಮತ್ತು ಶತ್ರುಗಳು ಮೇಲೆ ಏಳುವಿಕೆ ಇವುಗಳನ್ನು ಶಮನ ಗೊಳಿಸು.

65. **ಅಶ್ವತ್ಥ ಸುಮಹಾಭಾಗ ಸುಭಗ ಪ್ರಿಯದರ್ಶನ ।**
**ಇಷ್ಟಾನ್ನಭೋಜನಂ ದೇಹಿ ಶತ್ರೂಣಾಂ ಚ ಪರಾಜಯಮ್ ॥**

ಒಳ್ಳೇ ಭಾಗ್ಯಶಾಲಿಯಾದ - ಒಳ್ಳೆ ಸುಂದರವಾದ ಪ್ರಿಯವಾದದ್ದನ್ನು ತೋರಿಸುವ ಹೇ ಅಶ್ವತ್ಥ! ನೀನುನನಗೆ ಇಷ್ಟಾನ್ನಭೋಜನವನ್ನೂ ಮತ್ತು ಶತ್ರುಗಳ ಪರಾಜಯವನ್ನು ಕೊಡು ಹೀಗೆಂದು ಅಶ್ವತ್ಥವೃಕ್ಷದ ಸನ್ನಿಧಿಯಲ್ಲಿ ನಾವು ಪ್ರಾರ್ಥನೆಯನ್ನು ಮಾಡಬೇಕು.

66. **ಸಾಯಂಕಾಲದಲ್ಲಿ ಅಶ್ವತ್ಥ ವೃಕ್ಷಕ್ಕೆ (ಅರಳೀಗಿಡಕ್ಕೆ) ನಮಸ್ಕಾರಾದಿಗಳನ್ನು ಮಾಡಿ ಸೇವಿಸಬಾರದೆಂದು ಹಿರಿಯರು ಹೇಳುತ್ತಾರೆ. ಹೀಗೆ ಹೇಳಲು ಕಾರಣವೇನು? ಮತ್ತು ಪ್ರಮಾಣವೇನು?**
**ಸ್ಮೃತಿರತ್ನೇ:-**

ಉ. **"ಭೌಮೇ ಶುಕ್ರೇ ತಥಾ ಭಾನೌ ಮಧ್ಯಾಹ್ನೇ ನಿಶಿಸಂಧ್ಯಯೋಃ ।**
**ನಾಶ್ವತ್ಥಸೇವನಂ ಕುರ್ಯಾತ್ ಕುಲಕ್ಷಯಕರಂ ಹಿ ತತ್ ॥"**
ಎಂದು ಹೇಳಿದಂತೆ ಮಂಗಳವಾರ-ಶುಕ್ರವಾರ-ಭಾನುವಾರಗಳಲ್ಲೂ ಮಧ್ಯಾಹ್ನದಲ್ಲೂ - ರಾತ್ರಿಯಲ್ಲೂ ಸಂಧ್ಯಾಕಾಲಗಳಲ್ಲೂ ಅಶ್ವತ್ಥ ಸೇವನೆ ಯನ್ನು ಮಾಡಬಾರದು. ಹಾಗೆ ಮಾಡಿದಲ್ಲಿಕುಲಕ್ಷಯವಾಗುತ್ತದೆ.

67. **ಅಶ್ವತ್ಥ ವೃಕ್ಷವನ್ನು ಯಾವ ವಾರದಲ್ಲಿ ಮುಟ್ಟಬಹುದು?**
**ಭಾರತೇ:-**

ಉ. **"ಅಶ್ವತ್ಥಂ ಸಾಗರಶ್ಚೈವ ನ ಸ್ಪೃಷ್ಟವ್ಯೋ ಕದಾಚನ ।**
**ಅಶ್ವತ್ಥಂ ಮಂದವಾರೇ ತು ಸಾಗರಂ ಪರ್ವಣಿ ಸ್ಪೃಶೇತ್ ॥**
ಎಂದು ಹೇಳಿದಂತೆ ಅಶ್ವತ್ಥವೃಕ್ಷವನ್ನೂ (ಅರಳೀಗಿಡ) ಮತ್ತು ಸಮುದ್ರವನ್ನೂ ಯಾವಾಗಲೂ ಮುಟ್ಟಬಾರದು. ಆದರೆ ಶನಿವಾರದಂದು ಅಶ್ವತ್ಥವೃಕ್ಷವನ್ನೂ, ಪರ್ವದಿನದಂದು ಸಮುದ್ರವನ್ನೂ ಮುಟ್ಟಬೇಕು(ಮುಟ್ಟಬಹುದು).

# ಧನುರ್ಮಾಸ

**68. ಪ್ರತಿವರ್ಷ ಧನುರ್ಮಾಸದಲ್ಲಿ ಬೆಳಗಿನ ಜಾವ ದೇವರ ಪೂಜೆಯನ್ನು ಮಾಡುವಾಗ ನಮ್ಮ ನಿತ್ಯಕರ್ಮಗಳ ಸಂಕೋಚವಾದರೆ ಪಾಪವುಂಟೆ?**

**(ಕೃ.ಸ್ಮೃ. ಕಾ. ಪ್ರ. ಪು. ೨೦೨)**

**ಯಃ ಕರ್ಮಹಾನಿಮಾಶಂಕ್ಯ ನಾರ್ಚಯೇದುಷಸೀಶ್ವರಮ್।**
**ಚಾಪರ್ಕೇ ನಿರ್ಧನೋ ರೋಗೀ ವಿಷ್ಣುದ್ರೋಹೀ ಪತೇದಧಃ ॥**
**ಯಥಾ ಸಂಕೋಚ್ಯ ಸತ್ಕರ್ಮ ಭುಂಕ್ತೇऽಲ್ಪದ್ವಾದಶೀದಿನೇ।**
**ತಥಾ ಪ್ರಾತರ್ಧನುರ್ಮಾಸೇ ತ್ಯಕ್ತ್ವಾ ಕರ್ಮಾರ್ಚಯೇಚ್ಚ ಮಾಮ್ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಧನುರ್ಮಾಸದಲ್ಲಿ ನಮ್ಮ ನಿತ್ಯಕರ್ಮಗಳ ಅನುಷ್ಠಾನಕ್ಕೆ ಹಾನಿ ಬರುತ್ತದೆಂಬ ಶಂಕೆಯಿಂದ ಬೆಳಗಿನಜಾವ ದೇವರಪೂಜೆಯನ್ನು ಮಾಡದವನು ನಿರ್ಧನನೂ-ರೋಗಿಯೂ-ವಿಷ್ಣುದ್ರೋಹಿಯೂ ಆಗುವುದಲ್ಲದೇ ನರಕಾದ್ಯನರ್ಥವನ್ನು ಹೊಂದುತ್ತಾನೆ. ಸ್ವಲ್ಪವೇ ದ್ವಾದಶೀತಿಥಿ ಇರುವಾಗ ಅಲ್ಪದ್ವಾದಶೀದಿನ/ಸಾಧನದ್ವಾದಶೀ ದಿನಗಳಲ್ಲಿ ದ್ವಾದಶಿಯನ್ನುಲ್ಲಂಘನ ಮಾಡಬಾರದೆಂದು ಸತ್ಕರ್ಮಗಳನ್ನೂ - ನಿತ್ಯಾನುಷ್ಠಾನಗಳನ್ನೂ ಸಂಕೋಚಗೊಳಿಸಿ ಬೇಗನೆ ದೇವರ (ಹರಿ) ಪೂಜೆಯನ್ನು ಮಾಡಿ, ಕ್ಲೃಪ್ತಸಮಯದಲ್ಲಿ ಪಾರಣೆಯನ್ನು ಮಾಡುತ್ತಾರೆ. ಅದರಿಂದ ಕರ್ಮಹಾನಿ ಪಾಪ ಬರುವುದಿಲ್ಲವೆಂದು ಸಿದ್ಧವಾಗಿದೆ. ಅದರಂತೆ ಪ್ರತಿವರ್ಷ ಧನುರ್ಮಾಸದಲ್ಲಿ ಕರ್ಮಸಂಕೋಚ ಮಾಡಿ ಮುದ್ಗಾನ್ನ (ಹುಗ್ಗಿ) ನೈವೇದ್ಯಸಹಿತವಾಗಿ ದೇವರಪೂಜೆಯನ್ನು ಮಾಡಬೇಕು. ಆದ್ದರಿಂದ ಪ್ರತಿವರ್ಷ ಧನುರ್ಮಾಸದಲ್ಲಿ ಬೆಳಗಿನಜಾವ ದೇವರಪೂಜೆಯನ್ನು ಮಾಡುವಾಗ ನಮ್ಮ ನಿತ್ಯಕರ್ಮಗಳ ಸಂಕೋಚವಾದರೂ ಅದರಿಂದ ಪಾಪವಿಲ್ಲ.

**69. ಪ್ರತಿವರ್ಷ ಧನುರ್ಮಾಸದ ಪ್ರಾತಃಕಾಲದಲ್ಲಿ ಬ್ರಾಹ್ಮಣಭೋಜನ ಮಾಡಿಸಿ ತಾನೂ ಭೋಜನ ಮಾಡಬೇಕೆ? ಅಥವಾ ತಾನು ಯಾವಾಗ ಬೇಕಾದರೂ ಭೋಜನ ಮಾಡಬಹುದೆ?**

**(ಕೃ.ಸ್ಮೃ. ಕಾ.ಪ್ರ. ಪು. ೧೯೪, ೨೦೪ ಮತ್ತು ಪಂಚರಾತ್ರಾಗಮೋಕ್ತ - ಧನುರ್ಮಾಸಮಾಹಾತ್ಮ್ಯೇ - ಅಧ್ಯಾಯ೧ - ಶ್ಲೋಕ ೧೬,೧೭ ೨೦)**

ಭೋಜಯೇತ್ ದ್ವಿಜವರ್ಯಾಂಶ್ಚ ಪ್ರಾತಃಕಾಲೇ ಯಥಾಬಲಂ।
ಬ್ರಾಹ್ಮಣಾನ್ಭೋಜಯೇತ್ತತ್ರ ಪ್ರಾತಃಕಾಲೇ ವಿಶೇಷತಃ॥
ರವೇರುದಯವೇಲಾಯಾಂ ಹರೇಃ ಪೂಜಾಂ ಸಮಾಪಯೇತ್।
ಬ್ರಾಹ್ಮಣಾನಾಂ ತತೋ ಪೂಜಾಂ ಯಥಾಶಕ್ತ್ಯಾ ಪ್ರಕಲ್ಪಯೇತ್॥
ಬ್ರಾಹ್ಮಣೈಸ್ಸಹ ಭೋಕ್ತವ್ಯಂ ತದನ್ನಂ ಯನ್ನಿವೇದಿತಮ್।
ಭಕ್ಷಭೋಜ್ಯಯುತಂ ಚೈವ ಸಘೃತಂ ನವನೀತಕಮ್॥
ಬ್ರಾಹ್ಮಣಾನ್ ಭೋಜಯಿತ್ವಾಥ ಸ್ವಯಂ ಭುಕ್ತ್ವಾ ತತಃ ಪರಮ್॥

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪ್ರತಿವರ್ಷ ಧನುರ್ಮಾಸದಲ್ಲಿ ಸೂರ್ಯೋದಯಕ್ಕೆ ದೇವರ ಪೂಜೆಯನ್ನು ಮುಗಿಸಿ ಪ್ರಾತಃಕಾಲದಲ್ಲೇ ಬ್ರಾಹ್ಮಣರಿಗೆ ಭೋಜನ ಮಾಡಿಸಿ ತಾನೂ ಕೂಡ ಪ್ರಾತಃಕಾಲದಲ್ಲೇ ಭೋಜನ ಮಾಡಬೇಕು.

# ಪುರಾಣಗಳು - ವೇದವ್ಯಾಸರು

**70. ಭಾಗವತಪುರಾಣದಲ್ಲಿ ಎಷ್ಟು ಸ್ಕಂಧಗಳಿವೆ?**

ಉ. 12 ಸ್ಕಂಧಗಳು

**71. ಭಗದ್ಗೀತೆಯಲ್ಲಿ ಎಷ್ಟು ಅಧ್ಯಾಯಗಳಿವೆ?**

ಉ. 18 ಅಧ್ಯಾಯಗಳು

**72. ಮಹಾಭಾರತದಲ್ಲಿ ಎಷ್ಟು ಪರ್ವಗಳಿವೆ?**

ಉ. 18 ಪರ್ವಗಳು

**73. ಅಷ್ಟಾದಶ (೧೮) ಪುರಾಣಗಳು ಯಾವುವು? ಅವುಗಳ ಕರ್ತೃಯಾರು?**

ಉ. ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ।
ತಥಾನ್ಯನಾರದೀಯಂ ಚ ಮಾರ್ಕಂಡೇಯಂ ತು ಸಪ್ತಮಮ್
ಆಗ್ನೇಯಂ ಅಷ್ಟಮಂ ಪ್ರೋಕ್ತಂ ಭವಿಷ್ಯಂ ನವಮಂ ಸ್ಮೃತಮ್।
ದಶಮಂ ಬ್ರಹ್ಮವೈವರ್ತಂ ಲೈಂಗಂ ಏಕಾದಶಂ ಸ್ಮೃತಮ್।
ದ್ವಾದಶಂ ವಾಮನಂ ಪ್ರೋಕ್ತಂ ವಾರಾಹಂ ತು ತ್ರಯೋದಶಮ್
ಮಾತ್ಸ್ಯಂ ಚತುರ್ದಶಂ ಪ್ರೋಕ್ತಂ ಕೂರ್ಮಂ ಪಂಚದಶಂ ಸ್ಮೃತಮ್
ಷೋಡಶಂ ಗಾರುಡಂ ಪ್ರೋಕ್ತಂ ಸ್ಕಾಂದಂ ಸಪ್ತದಶಂ ಸ್ಮೃತಮ್।

**ಅಷ್ಟಾದಶಂ ತು ಬ್ರಹ್ಮಾಂಡಂ ಪುರಾಣಾನಿ ಯಥಾಕ್ರಮಮ್ ॥**

ಎಂದು ಪದ್ಮಪುರಾಣದಲ್ಲಿ ಹೇಳಿರುವಂತೆ 1. ಬ್ರಹ್ಮಪುರಾಣ, 2. ಪದ್ಮಪುರಾಣ, 3. ವಿಷ್ಣುಪುರಾಣ, 4. ಶಿವಪುರಾಣ, 5. ಭಾಗವತ, 6. ನಾರದೀಯ ಪುರಾಣ, 7. ಮಾರ್ಕಂಡೇಯಪುರಾಣ, 8. ಅಗ್ನಿಪುರಾಣ, 9. ಭವಿಷ್ಯ (ಭವಿಷ್ಯೋತ್ತರ) ಪುರಾಣ 10. ಬ್ರಹ್ಮವೈವರ್ತಪುರಾಣ, 11. ಲಿಂಗಪುರಾಣ, 12.ವಾಮನ ಪುರಾಣ 13. ವರಾಹಪುರಾಣ 14. ಮತ್ಸ್ಯಪುರಾಣ, 15. ಕೂರ್ಮಪುರಾಣ, 16. ಗರುಡಪುರಾಣ, 17. ಸ್ಕಂದಪುರಾಣ, ಹಾಗೂ 18. ಬ್ರಹ್ಮಾಂಡಪುರಾಣ. ಈ ಪುರಾಣಗಳು ಅಷ್ಟಾದಶ ಪುರಾಣಗಳು ಇವುಗಳ ಕರ್ತೃಗಳು ಭಗವಂತನ ಅವತಾರ ಭೂತರಾದ ಶ್ರೀವೇದವ್ಯಾಸದೇವರು.

**74. ೧೮ ಪುರಾಣಗಳ ವಿಭಾಗಗಳನ್ನು ವಿಸ್ತಾರವಾಗಿ ತಿಳಿಸುವಿರಾ?**

ಉ. **ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಮ್ ।**
**ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ ॥**
**ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ತತಃ ಪರಂ ।**
ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ ।
**ಭವಿಷ್ಯದ್ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ॥**
**ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ।**
**ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ॥**

ಎಂದು ಪದ್ಮ ಪುರಾಣದಲ್ಲಿ ಹೇಳಿದಂತೆ

| **ಸಾತ್ವಿಕ** | **ರಾಜಸ** | **ತಾಮಸ** |
|---|---|---|
| 1. ವಿಷ್ಣು | 1. ಬ್ರಹ್ಮಾಂಡ | 1. ಮತ್ಸ್ಯ |
| 2. ನಾರದೀಯ | 2. ಬ್ರಹ್ಮವೈವರ್ತ | 2. ಕೂರ್ಮ |
| 3. ಭಾಗವತ | 3. ಮಾರ್ಕಂಡೇಯ | 3. ಲಿಂಗ |
| 4. ಗರುಡ | 4. ಭವಿಷ್ಯತ್ | 4. ಶಿವ |
| 5. ಪದ್ಮ | 5. ವಾಮನ | 5. ಸ್ಕಾಂದ |
| 6. ವರಾಹ | 6. ಬ್ರಾಹ್ಮ | 6. ಅಗ್ನಿ |
| ಈ ಆರು ಸಾತ್ವಿಕ ಪುರಾಣಗಳು | ಈ ಆರು ರಾಜಸ ಪುರಾಣಗಳು | ಈ ಆರು ತಾಮಸ ಪುರಾಣಗಳು |

ಇದಲ್ಲದೇ ಒಂದೊಂದು ಪುರಾಣದಲ್ಲೂ ಸಾತ್ವಿಕಾದಿ ಭೇದದಿಂದ

ಉಪವಿಭಾಗವು ಪ್ರಸಿದ್ಧವಾಗಿದೆ.

1. ಸಾತ್ವಿಕ-ಸಾತ್ವಿಕ, 4. ರಾಜಸ-ಸಾತ್ವಿಕ, 7. ತಾಮಸ-ಸಾತ್ವಿಕ
2. ಸಾತ್ವಿಕ-ರಾಜಸ, 5. ರಾಜಸ-ರಾಜಸ, 8. ತಾಮಸ-ರಾಜಸ
3. ಸಾತ್ವಿಕ-ತಾಮಸ, 6. ರಾಜಸ-ತಾಮಸ, 9. ತಾಮಸ-ತಾಮಸ

ಎಂದು ವೇದವ್ಯಾಸದೇವರಿಂದ ಪುರಾಣಗಳು ವಿಭಾಗಿಸಲ್ಪಟ್ಟಿವೆ.

**75. ೧೮ ಉಪ ಪುರಾಣಗಳು ಯಾವುವು?**

**ಉ. ವಾಯವ್ಯಂ ಭಾರ್ಗವಂ ಸೋಮಂ ಬ್ರಹ್ಮಾಂಡಂ ಕೌಶಿಕಂ ತಥಾ ।**
**ಪರಾಶರಂ ನಾರದೀಯಂ ನಾರಸಿಂಹಂ ತು ಕಾಪಿಲಮ್ ॥**
**ವಾಸಿಷ್ಠಂ ಶಿವಧರ್ಮಂ ಚ ಮಾರೀಚಂ ಮಾನವಂ ತಥಾ ।**
**ಸ್ಕಾಂದಂ ದುರ್ವಾಸಮಾದಿತ್ಯಂ ವಾರುಣಂ ಶಾಂಬರಂ ತಥಾ ॥**
**ಏತಾನ್ಯುಪಪುರಾಣಾನಿ ಅಷ್ಟಾದಶ ಸಮೀರಿತಮ್ ॥**

ಎಂದು ಹೇಳಿದಂತೆ-1.ವಾಯವ್ಯ, 2. ಭಾರ್ಗವ, 3.ಸೋಮ, 4.ಬ್ರಹ್ಮಾಂಡ, 5. ಕೌಶಿಕ, 6.ಪರಾಶರ, 7.ನಾರದೀಯ, 8.ನಾರಸಿಂಹ, 9.ಕಾಪಿಲ, 10. ವಾಸಿಷ್ಠ 11. ಶಿವಧರ್ಮ, 12. ಮಾರೀಚ, 13.ಮಾನವ, 14. ಸ್ಕಾಂದ, 15. ದುರ್ವಾಸ, 16. ಆದಿತ್ಯ, 17. ವಾರುಣ 18. ಶಾಂಬರ. ಇವು ಹದಿನೆಂಟು ಉಪಪುರಾಣಗಳು.

**76. ಬ್ರಹ್ಮಮೀಮಾಂಸಾ ಶಾಸ್ತ್ರದ ಕರ್ತೃಗಳು ಯಾರು?**
ಅಧ್ಯಾಯ ಪಾದ ಅಧಿಕರಣ ಸೂತ್ರ ಸಂಖ್ಯೆಗಳನ್ನು ತಿಳಿಸುವಿರಾ?

ಉ. ಬ್ರಹ್ಮಮೀಮಾಂಸಾಶಾಸ್ತ್ರವೆಂದು ಪ್ರಸಿದ್ಧವಾದ ಬ್ರಹ್ಮಸೂತ್ರಗಳ ಕರ್ತೃಗಳು - ಸಾಕ್ಷಾತ್ ಶ್ರೀಮನ್ನಾರಾಯಣನ ಅವತಾರಭೂತರಾದ ಶ್ರೀವೇದವ್ಯಾಸ ದೇವರು. ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಒಟ್ಟು ನಾಲ್ಕು ಅಧ್ಯಾಯಗಳು -೧೬ ಪಾದಗಳು ೨೨೨ ಅಧಿಕರಣಗಳು - ಹಾಗು ೫೬೪ ಸೂತ್ರಗಳು ಇವೆ. ಈ ವಿಷಯವನ್ನು

**ಜ್ಞಾನಾರ್ಥಮರ್ಥಿತಃ ಶ್ರೀಶೋ ಬ್ರಹ್ಮರುದ್ರಾದಿಭಿಃ ಸುರೈಃ**
**ವ್ಯಾಸೋ ಭೂತ್ವಾ ಸಮುತ್ಪನ್ನಾನ್ ವ್ಯಂಜಯನ್ ವ್ಯಭಜತ್ ಶ್ರುತೀಃ ॥**
**ತದರ್ಥಸಂನಿರ್ಣಯಾಯ ಶಾಸ್ತ್ರಂ ಶಾರೀರಕಾಹ್ವಯಮ್ ।**
**ಚಕ್ರೇ ಚತುರ್ಲಕ್ಷಣೇತಂ ಕಲಾಚರಣಸಂಯುತಮ್ ॥**

**ಶತದ್ವಯೇನ ವಿಂಶತ್ಯಾ ದ್ವಾಭ್ಯಾಮಪಿ ಸಮನ್ವಿತಮ್।**
**ನಯಾನಿ ಭೂಷಣ್ಯೈಃ ಸೂತ್ರೈಃ ಸಂಯುತಂ ಭಗವಾನ್ ಪ್ರಭುಃ।**
ಇತ್ಯಾದಿ ಪ್ರಾಜ್ಞರ ವಚನಗಳಿಂದ ತಿಳಿಯಬಹುದು.

77. **ಪ್ರತಿನಿತ್ಯ ಯಾವಾಗಲೂ ಪುರಾಣವನ್ನು ನಾವು ಶ್ರವಣಮಾಡಬೇಕೆಂದು ಹಿರಿಯರು ಹೇಳುತ್ತಾರೆ. ಆದರೆ ಯಾವಾಗಲೂ ಪುರಾಣಶ್ರವಣವನ್ನು ಮಾಡಲು ಅಶಕ್ತರಾದವರು ಏನು ಮಾಡಬೇಕು?**

ಉ. **ಸ್ಕಾಂದಪುರಾಣೇ ಬ್ರಹ್ಮೋತ್ತರಖಂಡೇ ಜಯದೇವನಾರದಸಂವಾದೇ ದ್ವಾವಿಂಶೇಽಧ್ಯಾಯೇ :-**
**ಸದಾಽಶಕ್ತಃ ಸದಾ ಶ್ರೋತುಂ ಕಥಾಂ ಪೌರಾಣಿಕೀಂ ನರಃ।**
**ಮುಹೂರ್ತಂ ವಾಪಿ ಶೃಣುಯಾತ್ ನಿಯತಾತ್ಮಾ ದಿನೇ ದಿನೇ ॥ಇತಿ॥**

''ನರಃ ನಿಯತಾತ್ಮಾ ಭಗವನ್ನಿಯತಾಂತಃಕರಣಃ ಸನ್ ಪೌರಾಣಿಕೀಂ ಕಥಾಂ ದಿನೇ ದಿನೇ ಸದಾ ಶೃಣುಯಾತ್। ದಿನೇ ದಿನೇ ಸದಾ ಶ್ರೋತುಮಶಕ್ತಃ ನರಃ ಮುಹೂರ್ತಂ ವಾಪಿ ಶೃಣುಯಾತ್'' ಇತಿ।

ಎಂದು ಹೇಳಿದಂತೆ ನಾವು ಪ್ರತಿನಿತ್ಯ ಯಾವಾಗಲೂ ಪುರಾಣವನ್ನು ಶ್ರವಣ ಮಾಡಬೇಕು. ಆದರೆ ಪ್ರತಿನಿತ್ಯ ಯಾವಾಗಲೂ ಶ್ರವಣಮಾಡಲು ಅಶಕ್ತರಾದವರು ಮುಹೂರ್ತಕಾಲವಾದರೂ (48 ನಿಮಿಷ) ಪುರಾಣವನ್ನು ಶ್ರವಣ ಮಾಡಬೇಕು.

# ಪಂಚಾಮೃತ

78. **ದೇವರಿಗೆ ಪಂಚಾಮೃತಾಭಿಷೇಕ ಮಾಡುವಾಗ ಗಟ್ಟಿ ತುಪ್ಪವನ್ನು ಉಪಯೋಗಿಸಬೇಕೊ? ನೀರಿನಂತೆ ಇರುವ ತುಪ್ಪವನ್ನು ಉಪಯೋಗಿಸ ಬೇಕೊ?**

ಉ. **(ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀಕೃತಪುಟ ೩೨)**

**"ಅಭಿಷೇಕೇ ತಥಾ ಹೋಮೇ ಘನೀಭೂತಂ ಘೃತಂ ವರಂ"**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಅಭಿಷೇಕ ಮತ್ತು ಹೋಮಗಳಲ್ಲಿ ಘನೀಭೂತವಾದ ಅಂದರೆ ಗಟ್ಟಿಯಾದ ತುಪ್ಪವು ಶ್ರೇಷ್ಠ

ವಾದ್ದರಿಂದ ದೇವರಿಗೆ ಪಂಚಾಮೃತಾಭಿಷೇಕ ಮಾಡುವಾಗ ಗಟ್ಟಿ ತುಪ್ಪವನ್ನು ಉಪಯೋಗಿಸಬೇಕು.

**79. ಪಂಚ ಅಮೃತಗಳು ಯಾವುವು?**

ಉ. ಕೃ.ಸ್ಮ್ಟ. ಆ.ಪ್ರ.ಪುಟ ೨೨೮ ಪಂಕ್ತಿ ೧೦-೧೨

"ಆಪ್ಯಾಯಸ್ವೇತ್ಯ್ಯ ಚಾ ಕ್ಷೀರಂ, ದಧಿಕ್ರಾವ್ಣೇತಿ ವೈ ದಧಿ।

ಘೃತಂ ಮಿಮಿಕ್ಷೇತಿ ಘೃತಂ, ಮಧುವಾತೇತಿ ವೈ ಮಧು ॥

ತಂತೇ ವಯಂ ಯಥಾ ಗೋಭಿರಿತಿ ಋಚಾ ಇಕ್ಷುರಸಂ ಶುಭಮ್।

ಏಭಿಃ ಪಂಚಾಮೃತೈಃ ಸ್ನಾಪ್ಯ" ಎಂಬುದಾಗಿ ಶ್ರೌತಪೂಜಾವಿಧಾನವನ್ನು ಹೇಳುವಾಗ ಶ್ರೀಕೃಷ್ಣಾಚಾರ್ಯರು ಸ್ಮೃತಿಮುಕ್ತಾವಳಿಯ ಆಹ್ನಿಕ ಪ್ರಕರಣದಲ್ಲಿ ಹೇಳಿದಂತೆ, ಹಾಲು-ಮೊಸರು-ತುಪ್ಪ-ಜೇನುತುಪ್ಪ ಮತ್ತು ಕಬ್ಬಿನರಸ ಇವು ಐದು ಪಂಚ ಅಮೃತಗಳು. ಈ ಐದು ಪದಾರ್ಥಗಳು ಮಧುರವಾದ ಪದಾರ್ಥಗಳಾದ ಕಾರಣ, ಇವುಗಳನ್ನು ಪಂಚ ಅಮೃತಗಳು=ಐದು ಮಧುರವಾದ ಪದಾರ್ಥಗಳು ಎಂದು ಕರೆಯಲಾಗುತ್ತದೆ.

**80. ಪಂಚ ಅಮೃತಗಳಲ್ಲಿ ಸಕ್ಕರೆಯು ಸೇರುವುದಿಲ್ಲವೇ?**

ಉ. ಕೃ.ಸ್ಮ್ಟ. ಆ.ಪ್ರ.ಪುಟ ೨೩೬ ಪಂಕ್ತಿ ೮ - ೯.

" ಇಕ್ಷುರಸಾಭಾವೇ ಸ್ವಾದುಃಪವಸ್ವ" ಇತಿ ಋಚಃ ಭರದ್ವಾಜ ಋಷಿಃ। ಲಿಂಗೋಕ್ತಾ ದೇವತಾಃ ತ್ರಿಷ್ಟುಪ್ ಛಂದಃ। ಇತಿ ಪ್ರಾಗುಕ್ತಮಾನ ಶರ್ಕರಾಂ ಅನೇನ ಮಂತ್ರೇಣ ಅನುಮಂತ್ರ್ಯ...." ಎಂಬುದಾಗಿ ಕಲಶ ಶುದ್ಧಿಕ್ರಮವನ್ನು ತಿಳಿಸುವ ಸಂದರ್ಭದಲ್ಲಿ ಶ್ರೀಕೃಷ್ಣಾಚಾರ್ಯರು ಸ್ಮೃತಿಮುಕ್ತಾವಳಿಯ ಆಹ್ನಿಕಪ್ರಕರಣದಲ್ಲಿ ಹೇಳಿದಂತೆ, ಕಬ್ಬಿನರಸವು ಇಲ್ಲದಿದ್ದರೆ ಸಕ್ಕರೆಯನ್ನು ಪಂಚಾಮೃತಾಭಿಷೇಕಕ್ಕೆ ಉಪಯೋಗಿಸಬೇಕು. ಆದ್ದರಿಂದ ಕಬ್ಬಿನರಸವು ಇಲ್ಲದಿದ್ದರೆ. ಹಾಲು-ಮೊಸರು-ತುಪ್ಪ ಮತ್ತು, ಜೇನುತುಪ್ಪ ಇವುಗಳ ಜೊತೆಯಲ್ಲಿ ಸಕ್ಕರೆಯು ಸೇರುತ್ತದೆ. ಒಟ್ಟಿನಲ್ಲಿ ಕಬ್ಬಿನರಸವು ಇಲ್ಲದಿದ್ದರೆ

ಸಕ್ಕರೆಯೂ ಕೂಡ ಪಂಚ ಅಮೃತಗಳಲ್ಲಿ ಸೇರುತ್ತದೆ. (ಹಾಲು-ಮೊಸರು-ತುಪ್ಪ-ಜೇನುತುಪ್ಪ-ಸಕ್ಕರೆ) ಇದೇ ಅಭಿಪ್ರಾಯದ ಹಿನ್ನೆಲೆಯಲ್ಲೇ ಪದ್ಯಮಾಲಾದಲ್ಲಿ ಶ್ರೀಜಯತೀರ್ಥರು "ಪಯೋದಧಿಘೃತಂ ಕ್ಷೌದ್ರಂ ಶರ್ಕರಾಪಂಚಮಾಮೃತಂ" ಎಂದು ಹೇಳಿರಬಹುದು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲವೆಂದು ತೋರುತ್ತದೆ.

**81. ಕಾಯಿಸಿದ ಹಾಲು ಪಂಚಾಮೃತಾಭಿಷೇಕಕ್ಕೆ ಬರುತ್ತದೆಯಾ?**

ಉ. ಕೃ.ಸ್ಮೃ. ಆ.ಪ್ರ.ಪುಟ ೨೩೫ ಪಂಕ್ತಿ ೧೭-೧೮

"ಕ್ಷೀರಂ ಗ್ರಾಹ್ಯಂ ಅತಪ್ತಂ ಚ ದಶಾಹಾತ್ ಜನ್ಮನಃ ಪರಮ್" ಎಂಬುದಾಗಿ ಕಲಶಶುದ್ಧಿಕ್ರಮ ಎಂಬ ಶೀರ್ಷಿಕೆಯ ಕೆಳಗೆ ದೇವರಿಗೆ ಪಂಚ ಅಮೃತಗಳಿಂದ ಅಭೀಷೇಕವನ್ನು ಮಾಡಬೇಕೆಂದು ಹೇಳುವ ಸಂದರ್ಭದಲ್ಲಿ ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ ಆಹ್ನಿಕ ಪ್ರಕರಣದಲ್ಲಿ ಹೇಳಿದಂತೆ ಕಾಯಿಸದೇ ಇರುವ ಹಾಲು=ಹಸಿಹಾಲು ಪಂಚಾಮೃತಾಭಿಷೇಕಕ್ಕೆ ಗ್ರಾಹ್ಯವಾದ್ದರಿಂದ ಪಂಚಾಮೃತಾಭೀಷೇಕಕ್ಕೆ ಕಾಯಿಸಿದ ಹಾಲು ಬರುವುದಿಲ್ಲ.

**82. ಮೊಸರಾಗಲು ಹಾಲಿಗೆ ಮಜ್ಜಿಗೆಯನ್ನು ಬೆರಸಿ ಒಂದೆರಡು ಘಂಟೆಗಳಾಗಿದ್ದರೆ, ಅಂತಹ ಮೊಸರು ಪಂಚಾಮೃತಾಭಿಷೇಕಕ್ಕೆ ಶ್ರೇಷ್ಠವಾದದ್ದಾ?**

ಉ. ಕೃ.ಸ್ಮೃ. ಆ.ಪ್ರ.ಪುಟ ೨೩೫ ಪಂಕ್ತಿ ೧೭.

"ಸದ್ಯಸ್ತಪ್ತಘೃತಂ ಶುದ್ಧಂ ಅಹೋರಾತ್ರೋಷಿತಂ ದಧಿ" ಎಂಬುದಾಗಿ ಕಲಶಶುದ್ಧಿಕ್ರಮ ಎಂಬ ಶೀರ್ಷಿಕೆಯ ಕೆಳಗೆ ಶ್ರೀಕೃಷ್ಣಾಚಾರ್ಯ ಸ್ಮೃತಿ ಮುಕ್ತಾವಳಿ ಆಹ್ನಿಕಪ್ರಕರಣದಲ್ಲಿ ಹೇಳಿದಂತೆ, ಅಹೋರಾತ್ರ ಅಂದರೆ ಹಗಲು-ರಾತ್ರಿ ಕೂಡಿದ ಒಂದು ದಿನ ಹಳೆಯದಾದ ಮೊಸರು ಪಂಚಾಮೃತಾಭಿಷೇಕಕ್ಕೆ ಪವಿತ್ರವಾದದ್ದು (ಶ್ರೇಷ್ಠವಾದದ್ದು)

**83. ಶ್ರೀರಾಯರ ಮಠದಲ್ಲಿ ಶ್ರೀರಾಮನವಮೀ ಮಹಾಭಿಷೇಕದ ದಿನದಂದು ಮತ್ತು ದೀಪಾವಳೀ ಮಹಾಭಿಷೇಕದ ದಿನದಂದು ಬಾಳೆಯೆಲೆಯ ಮೇಲೆ ಅಕ್ಕಿಯನ್ನು ಹಾಕಿ, ಅದರ ಮೇಲೆ ಹಾಲು ಮುಂತಾದ ಅಭಿಷೇಕದ**

**ಸಾಮಾನುಗಳನ್ನು ಇಡುತ್ತಾರೆ. ಹೀಗೆ ಇಡುವುದು ಯಾವುದಾದರು ಗ್ರಂಥದಲ್ಲಿ ಹೇಳಿದೆಯಾ?**

ಉ. ಕೃ.ಸ್ಮೃ. ಆ.ಪ್ರ.ಪುಟ ೨೨೫ ಪಂಕ್ತಿ ೨೩

" ತಂಡುಲೋಪರೀ ಮಧ್ಯೇ ಕ್ಷೀರಪಾತ್ರಂ, ಪ್ರಾಗಾದಿ ದಿಕ್ಷು ದಧ್ಯಾದಿಪಾತ್ರಾಣಿ ಸ್ಥಾಪ್ಯ.... ಕಲಶಪೀಠಪೂಜಾದಿಕಾನ್ ಕಲಶೋಕ್ತ ದ್ರವ್ಯಾಭಿಮಾನಿ ದೇವತಾಂತರ್ಯಾಮಿಣಂ ತತ್ರ ಆವಾಹ್ಯ, ಅರ್ಘ್ಯ ಪಾದ್ಯಾದಿ ನೀರಾಜನಾಂತೋಪಚಾರಾನ್ ಕುರ್ಯಾತ್।" ಎಂಬುದಾಗಿ ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ ಆಹ್ನಿಕಪ್ರಕರಣದಲ್ಲಿ, ಅಕ್ಕಿಯ ಮೇಲೆ ಮಧ್ಯದಲ್ಲಿ ಅಭಿಷೇಕದ ಹಾಲಿನ ಪಾತ್ರೆಯನ್ನು ಮತ್ತು ಪೂರ್ವಾದಿ ದಿಕ್ಕುಗಳಲ್ಲಿ ಅಭಿಷೇಕದ ಮೊಸರು ಮುಂತಾದವುಗಳ ಪಾತ್ರೆಗಳನ್ನೂ ಇಡಬೇಕು ಎಂದು ಹೇಳಿದೆ. ಅದರಂತೆ ಆಚರಣೆಯಲ್ಲೂ ಕಂಡುಬಂದಿದೆ.

**84. ಯಾವ ಬಣ್ಣದ ಆಕಳಿನ ಹಾಲು-ಮೊಸರು-ತುಪ್ಪ ದೇವರ ಅಭಿಷೇಕಕ್ಕೆ ಗ್ರಾಹ್ಯವಾದವುಗಳು (ಶ್ರೇಷ್ಠವಾದವುಗಳು)?**

ಉ. ಕೃ.ಸ್ಮೃ. ಆ.ಪ್ರ.ಪುಟ ೨೩೫ ಪಂಕ್ತಿ ೧೪-೧೫

"ಪಯಶ್ಚ ತಾಮ್ರವರ್ಣಾಯಾಃ ಶ್ವೇತಾಯಾಶ್ಚ ತಥಾ ದಧಿ। ಕಪಿಲಾಯಾಃ ಘೃತಂ ಗ್ರಾಹ್ಯಮ್" ಎಂಬ ಪಾದ್ಮಸಂಹಿತಾವಚನವನ್ನು ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ ಆಹ್ನಿಕಪ್ರಕರಣದಲ್ಲಿ ಉದಾಹರಿಸಿರುತ್ತಾರೆ. ಇದರ ಪ್ರಕಾರ ತಾಮ್ರವರ್ಣವುಳ್ಳ ಹಸುವಿನ ಹಾಲು-ಬಿಳಿಯ ಬಣ್ಣದ ಆಕಳಿನ ಹಾಲಿಗೆ ಹೆಪ್ಪು ಹಾಕಿದ ಮೇಲೆ ಉಂಟಾಗುವ ಮೊಸರು ಮತ್ತು ನಸುಗೆಂಪು ಬಣ್ಣದ (ಕಂದುಹಳದಿ ಬಣ್ಣದ-ಕೆಂಪು ಬೆರೆತ ಹಳದೀ ಬಣ್ಣದ) ಆಕಳಿನ ತುಪ್ಪ ಇವುಗಳು ದೇವರ ಅಭಿಷೇಕಕ್ಕೆ ಗ್ರಾಹ್ಯವಾದವುಗಳು (ಶ್ರೇಷ್ಠವಾದವುಗಳು). ಒಂದು ವೇಳೆ ಈ ಮೇಲೆ ಹೇಳಿದ ಹಾಲು-ಮೊಸರು-ತುಪ್ಪ ಇವುಗಳು ದೊರೆಯದಿದ್ದರೆ. ಇದೇ ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ ಆಹ್ನಿಕಪ್ರಕರಣದ ೨೩೫ನೇ ಪುಟದಲ್ಲೇ ಉದಾಹರಿಸಿರುವ "ಕಪಿಲಾಯಾಶ್ಚ ಪೀತಾಯಾಃ ಪಂಚಗವ್ಯಂ ಪ್ರಶಸ್ಯತೇ । ತಯೋರಭಾವೇ ಸರ್ವಾಸಾಂ ಪಂಚಗವ್ಯಂ ವಿಧೀಯತೇ" ಎಂಬ ಪಾದ್ಮಸಂಹಿತಾ ವಚನದ ಪ್ರಕಾರ, ಎಲ್ಲಾ

ಗೋವುಗಳ ಹಾಲು ಮುಂತಾದವುಗಳನ್ನು ದೇವರ ಅಭಿಷೇಕಕ್ಕೆ ಉಪಯೋಗಿಸಬಹುದು.

**85. ಪಂಚಾಮೃತಾಭಿಷೇಕವನ್ನು ಮಾಡುವುದಕ್ಕಿಂತ ಪೂರ್ವದಲ್ಲಿ, ಅಭಿಷೇಕದ ಹಾಲು ಮುಂತಾದವುಗಳ ಪಾತ್ರೆಗಳನ್ನು ಯಾವ ಕ್ರಮದಲ್ಲಿ ಇರಿಸಬೇಕು?**

ಉ. (ಅ) ಕೃ.ಸ್ಮೃ. ಆ.ಪ್ರ.ಪುಟ ೨೩೫-೨೩೬ ಪಂಕ್ತಿ ೨೩

"ತಂಡುಲೋಪರಿ ಮಧ್ಯೇ ಕ್ಷೀರಪಾತ್ರಂ, ಪ್ರಾಗಾದಿ ದಿಕ್ಷು ದಧ್ಯಾದಿ ಪಾತ್ರಾಣಿ ಸ್ಥಾಪ್ಯ" ॥

(ಆ) "ಮಧ್ಯೇ ಕ್ಷೀರಂ ತು, ದಧ್ಯಾದಿ ನ್ಯಸೇತ್ ಪೂರ್ವಾದಿಷು ಕ್ರಮಾತ್"॥

(ಇ) "ಪೂಜಾಸಾಧನದ್ರವ್ಯಾಣಿ ದೇವಸ್ಯ ದಕ್ಷಿಣಭಾಗೇ ನಿಧಾಯ"।

ಎಂಬುದಾಗಿ ಹೇಳಿದಂತೆ ದೇವರ ಬಲಭಾಗದಲ್ಲಿ, ಮಧ್ಯದಲ್ಲಿ ಹಾಲಿನ ಪಾತ್ರೆಯನ್ನು, ಅದರ ಸುತ್ತ ಪೂರ್ವಾದಿ ದಿಕ್ಕುಗಳಲ್ಲಿ ಕ್ರಮವಾಗಿ ಮೊಸರು ಮುಂತಾದವುಗಳನ್ನು ಇಡಬೇಕು. ಅಂದರೆ ಮೊಸರಿನ ಪಾತ್ರೆಯನ್ನು ಪೂರ್ವ ದಿಕ್ಕಿನಲ್ಲೂ - ತುಪ್ಪದ ಪಾತ್ರೆಯನ್ನು ದಕ್ಷಿಣದಿಕ್ಕಿನಲ್ಲೂ-ಜೇನುತುಪ್ಪದ ಪಾತ್ರೆಯನ್ನು ಪಶ್ಚಿಮ ದಿಕ್ಕಿನಲ್ಲೂ ಮತ್ತು ಸಕ್ಕರೆಯ ಪಾತ್ರೆಯನ್ನು ಉತ್ತರ ದಿಕ್ಕಿನಲ್ಲೂ ಇಡಬೇಕು.

**86. ಪಂಚಾಮೃತಾಭಿಷೇಕವು ಹದಿನಾರು ಉಪಚಾರಗಳ ಪೈಕಿ ಯಾವು ಉಪಚಾರದಲ್ಲಿ ಸೇರುತ್ತದೆ?**

ಅ) ಪೂಜಾಕಲ್ಪಲತಾ :- ಪುಟ ೬ ಪಂಕ್ತಿ ೪-೭

ಷೋಡಶೋಪಚಾರಸಂಗ್ರಹಸೂಕ್ತಃ :- (1)" ಅರ್ಘ್ಯಂ ಪಾದ್ಯಂ ಚಾಚಮನಂ ಮಧುಪರ್ಕಂ ತಥೈವ ಚ । (2) ಪುನರಾಚಮನಂ ಸ್ನಾನಂ ವಸನಂ ಭೂಷಣಂ ತಥಾ ॥ (3) ಉಪವೀತಾಸನೇ ಗಂಧಪುಷ್ಪೇ ವೈ ಧೂಪದೀಪಕೇ । (4) ನೈವೇದ್ಯಂ ನಮನಂ ಚೇತಿ ಉಪಚಾರಾಸ್ತು ಷೋಡಶ" ॥

ಆ) ಪೂಜಾಕಲ್ಪಲತಾ :- ಪುಟ ೪೦ ಪಂಕ್ತಿ ೧೦-೨೧

" ನ ಚೈವಂ ಅರ್ಘ್ಯಾದಿಷು ಪ್ರವಿಷ್ಟಸ್ಯ ಮಲಾಪಕರ್ಷಣಸ್ನಾನಸ್ಯ ಅಧಿಕೋಪಚಾರತ್ವೋಕ್ತ್ಯಾ " ಅರ್ಘ್ಯಂ ಪಾದ್ಯಂ ಚಾಚಮನಂ" ಇತಿ ಪ್ರಮಾಣೋದಾಹೃತೋಪಚಾರಷೋಡಶತ್ವಸಂಖ್ಯಾಭಂಗಃ ಸ್ಯಾತ್ ಇತಿ ವಾಚ್ಯಮ್ । ಪ್ರಮಾಣೇ ಸ್ನಾನಶಬ್ದೇನ ಶುದ್ಧೋದಕಸ್ನಾನಮಾತ್ರವಿವಕ್ಷಾಯಾಂ ಪಂಚಾಮೃತಸ್ನಾನಾಲಾಭಾಪತ್ತ್ಯಾ, ಸ್ನಾನತ್ವೇನ ತಸ್ಯಾಪ್ಯನುಗಮವತ್, ಮಲಾಪಕರ್ಷಣಸ್ನಾನಸ್ಯಾಪಿ ತೇನೈವ ಧರ್ಮೇಣ ಅನುಗಮಾಂಗೀಕಾರೇ ಷೋಡಶತ್ವಸಂಖ್ಯಾಭಂಗಾಭಾವಾತ್ । ನ ಚೈವಂ ಪುನರಾಚಮನಸ್ಯಾಪಿ ಆಚಮನತ್ವೇನ ಶಕ್ಯಸಂಗ್ರಹತ್ವಾತ್, ಅರ್ಘ್ಯಾದೀನಾಂ ಷಟ್ಸಂಖ್ಯಾಕತ್ವಮನುಪಪನ್ನಂ ಸ್ಯಾತ್ ಇತಿ ವಾಚ್ಯಮ್ । ಪ್ರಮಾಣೇ ಪುನರಾಚಮನಸ್ಯ ಪೃಥಗುಪಚಾರತ್ವೋಕ್ತ್ಯಾ ತದ್ವಿರೋಧಾಪಾತೇನ ತಥಾನುಗಮಾಸಂಭವಾತ್। ತತ್ರಾಪಿ ಪೃಥಗುಪಾಚಾರತ್ವೋಕ್ತಿಸ್ತಸ್ಯ ಕುತಃ ಇತಿ ಚೇತ್ ಆಚಮನ ಪುನರಾಚಮನಯೋಃ ಭಿನ್ನದೇವತಾಕತ್ವಾತ್ । ನ ಚೈವಂ ಶುದ್ಧಸ್ನಾನ ಮಲಾಪಕರ್ಷಣಸ್ನಾನ ಪಂಚಾಮೃತಸ್ನಾನಾನಾಮ್ । ತೇಷಾಂ ವರುಣಾಖ್ಯೈಕ ದೇವತಾಕತ್ವಾತ್ ಇತ್ಯಲಂ ''। ಎಂಬುದಾಗಿ ಹೇಳಿದಂತೆ ಅರ್ಘ್ಯ ಪಾದ್ಯ-ಆಚಮನ -ಮಧುಪರ್ಕ-ಪುನರಾಚಮನ-ಸ್ನಾನ-ವಸನ-ಅಂದರೆ ವಸ್ತ್ರ-ಭೂಷಣ ಅಂದರೆ ಆಭರಣ-ಉಪವೀತ ಅಂದರೆ ಯಜ್ಞೋಪವೀತ- ಆಸನ - ಗಂಧ -ಪುಷ್ಪ - ಧೂಪ - ದೀಪ - ನೈವೇದ್ಯ ಮತ್ತು ನಮಸ್ಕಾರ ಇವು ಹದಿನಾರು ಉಪಚಾರಗಳು. ಈ ಹದಿನಾರು ಉಪಚಾರಗಳಲ್ಲಿ ಆರನೇ ಉಪಚಾರ ಸ್ನಾನ. ಶುದ್ಧೋದಕಸ್ನಾನ-ಮಲಾಪಕರ್ಷಣ ಸ್ನಾನ ಮತ್ತು ಪಂಚಾಮೃತಸ್ನಾನ ಅಂದರೆ ಪಂಚಾಮೃತಾಭಿಷೇಕ ಈ ಮೂರೂ, ವರುಣಾಖ್ಯ ಏಕದೇವತಾಕವಾದದ್ದು. ಆದ್ದರಿಂದ ಇಲ್ಲಿ ಸ್ನಾನ ಶಬ್ದದಿಂದ ಶುದ್ಧೋದಕಸ್ನಾನ ಮಾತ್ರ ವಿವಕ್ಷಿತವಾದದ್ದಲ್ಲ, ಆದರೆ, ಸ್ನಾನ ಶಬ್ದದಿಂದ ಶುದ್ಧೋದಕ ಸ್ನಾನದಂತೆ, ಮಲಾಪಕರ್ಷಣ ಸ್ನಾನ ಮತ್ತು ಪಂಚಾಮೃತಸ್ನಾನ ಇವುಗಳೂ ಕೂಡ ವಿವಕ್ಷಿತವಾಗಿವೆ. ಆದ್ದರಿಂದ ಒಟ್ಟಿನಲ್ಲಿ ಹೇಳುವುದಾದರೆ, ಪಂಚಾಮೃತಸ್ನಾನ=ಪಂಚಾಮೃತಾಭಿಷೇಕವು ಈ ಮೇಲೆ **ಕಾಣಿಸಿದ**

ಹದಿನಾರು ಉಪಚಾರಗಳ ಪೈಕಿ ಆರನೇಯದಾದ ''ಸ್ನಾನ'' ಎಂಬ ಉಪಚಾರದಲ್ಲಿ ಸೇರುತ್ತದೆ.

**87. ಪಂಚಾಮೃತಾಭಿಷೇಕದ ಹಾಲು·ಮುಂತಾದವುಗಳ ಪ್ರಮಾಣದ ಬಗ್ಗೆ ಶಾಸ್ತ್ರ ಏನು ಹೇಳುತ್ತದೆ?**

**ಉ. ಕೃಸ್ಮೃ. ಆ. ಪ್ರ. ಪುಟ ೨೩೫ ಪಂಕ್ತಿ ೧೮-೨೩**

''ಏತೇಷಾಂ ಮಾನಸಂಖ್ಯಾ ಉಕ್ತಾ ತತ್ರೈವ (ಪಾದ್ಮಸಂಹಿತಾಯಾಮೇವ) ದ್ರೋಣಮಾನಂ ಪಂಚಗವ್ಯಂ ಘೃತಮಾನಂ ತು ತಾದೃಶಮ್। ತಾವದೇವ ದಧಿ ಕ್ಷೀರಂ ತಾವದೇವ ಹಿ ಮಾಕ್ಷಿಕಮ್ । ಅರ್ಧಂ ವಾ ಸ್ಯಾತ್ ಆಢಕಂ ವಾ ನ್ಯೂನಂ ಚೇತ್ ಆಸುರಂ ತಥಾ। ಗೃಹಾರ್ಚಾ ಸ್ನಾಪನೇ ನ್ಯೂನಂ ಪ್ರಸ್ಥಂ ಚೈವ ಪ್ರಕಲ್ಪಯೇತ್। ಇತಿ। ದ್ರೋಣಮಾನಂ ಪಂಚಗವ್ಯಮಿತಿ ಪೂರ್ವೇಣ ಸಂಬಂಧಃ। ದ್ರೋಣಮಾನ ಲಕ್ಷಣಮ್ । ತತ್ರ ಸ್ಮೃತಿಃ ಪಲದ್ವಯಂ ತು ಪ್ರಸೃತಿಃ ತದ್‌ದ್ವಯಂ ಕುಡಪಂ ತಥಾ । ಚತುರ್ಭಿಃ ಕುಡಪೈಃ ಪ್ರಸ್ಥಃ, ಪ್ರಸ್ಥಾಶ್ಚತ್ವಾರ ಆಢಕಮ್। ತಚ್ಚತುಷ್ಕಂ ಭವೇತ್ ದ್ರೋಣಮ್'' । ಇತಿ ॥ ಎಂಬೀ ಮುಂತಾದ ಪಾದ್ಮಸಂಹಿತಾವಚನವನ್ನು ಮತ್ತು ಸ್ಮೃತಿವಚನವನ್ನು ಶ್ರೀಕೃಷ್ಣಾಚಾರ್ಯರು ಸ್ಮೃತಿಮುಕ್ತಾವಳಿ ಆಹ್ನಿಕಪ್ರಕರಣದಲ್ಲಿ ಉದಾಹರಿಸಿರುತ್ತಾರೆ. ಇದರ ಪ್ರಕಾರ ಪಂಚಾಮೃತಾಭಿಷೇಕಕ್ಕೆ ಒಂದು ದ್ರೋಣಪ್ರಮಾಣದಷ್ಟು ಅಂದರೆ ನಾಲ್ಕು ಆಢಕಪ್ರಮಾಣದಷ್ಟು ಹಾಲು-ಮೊಸರು-ತುಪ್ಪ-ಜೇನುತುಪ್ಪ ಬೇಕಾಗುತ್ತದೆ. ಅಂದರೆ ಹಾಲು-ಮೊಸರು-ತುಪ್ಪ-ಜೇನುತುಪ್ಪ ಇವುಗಳ ಪೈಕಿ ಒಂದೊಂದು ಅಮೃತವೂ ನಾಲ್ಕು ಆಢಕಪ್ರಮಾಣದಷ್ಟು ಬೇಕಾಗುತ್ತದೆ ಅಥವಾ ಒಂದೊಂದು ಅಮೃತವೂ ಇದರ ಅರ್ಧದಷ್ಟು ಅಂದರೆ ಎರಡು ಆಢಕಪ್ರಮಾಣದಷ್ಟು ಇರಬಹುದು. ಅಥವಾ ಒಂದೊಂದು ಅಮೃತವೂ ಒಂದು ಆಢಕ ಪ್ರಮಾಣದಷ್ಟಾದರೂ ಇರಬೇಕು. ಇದು ಕನಿಷ್ಠಪಕ್ಷ. ಇದಕ್ಕಿಂತ ಕಡಿಮೆ ಆದರೆ ಅದು ಆಸುರವೆನಿಸುತ್ತದೆ. ಆದ್ದರಿಂದ ಪಂಚಾಮೃತಾಭಿಷೇಕಕ್ಕೆ ಹಾಲು ಮುಂತಾದ ಒಂದೊಂದು ಅಮೃತವೂ ಒಂದು ಆಢಕಪ್ರಮಾಣಕ್ಕಿಂತಲೂ ಕಡಿಮೆ ಇರಬಾರದು. ಈ ಪ್ರಮಾಣವು ದೇವಸ್ಥಾನ ಮುಂತಾದ ಸ್ಥಳದಲ್ಲಿ ಮಾಡುವ

ಪಂಚಾಮೃತಾಭಿಷೇಕದ ಹಾಲು ಮುಂತಾದವುಗಳಿಗೆ ಅನ್ವಯಿಸುತ್ತದೆ. ಆದರೆ ಮನೆಯಲ್ಲಿ ದೇವರ ಪ್ರತಿಮೆಗೆ ಪಂಚಾಮೃತಾಭಿಷೇಕವನ್ನು ಮಾಡುವಾಗ ಹಾಲು ಮುಂತಾದ ಒಂದೊಂದು ಅಮೃತವೂ ಒಂದು ಪ್ರಸ್ಥಪ್ರಮಾಣಕ್ಕಿಂತಲೂ ಸ್ವಲ್ಪ ಕಡಿಮೆಪ್ರಮಾಣದಲ್ಲಿರಬೇಕು.ಸ್ಮೃತ್ಯುಕ್ತವಾದ ಪ್ರಾಚೀನ ಕಾಲದ ದ್ರೋಣ-ಪ್ರಸ್ಥ ಮುಂತಾದ ಅಳತೆಗಳ=ಪ್ರಮಾಣಗಳ ಕೋಷ್ಟಕವನ್ನು ಈ ಕೆಳಗೆ ಕೊಡಲಾಗಿದೆ.

1. ಪಲ=ನಾಲ್ಕು ಕರ್ಷಗಳ ತೂಕ(ಅಂದರೆ ಐದು ಗುಲಗಂಜಿಗಳ ತೂಕ ಒಂದು ಆದ್ಯಮಾಷಕ, ಹದಿನಾರು ಆದ್ಯಮಾಷಕಗಳು=ಒಂದು ಕರ್ಷ, ನಾಲ್ಕು ಕರ್ಷಗಳು=ಒಂದು ಪಲ)

2. ಪ್ರಸೃತಿ=ಎರಡು ಪಲಗಳ ಪ್ರಮಾಣ

3. ಕುಡುವ/ಕುಡಪ/ಕುಡುಬ=ಪ್ರಸ್ಥದ ನಾಲ್ಕನೆಯ ಒಂದು ಭಾಗ-ಪಾವುಸೇರು-ಅಚ್ಚೇರಿನ ನಾಲ್ಕನೇ ಒಂದುಭಾಗದ ಅಳತೆ.

4. ಪ್ರಸ್ಥ=ಒಂದು ಸೇರು

5. ಆಢಕ=ಒಂದು ಕೊಳಗ-ಎಂಟು ಸೇರು-ನಾಲ್ಕು ಪ್ರಸ್ಥಗಳು-ಹದಿನಾರು ಕುಡವಗಳು-ದ್ರೋಣದ ನಾಲ್ಕನೆಯ ಒಂದು ಭಾಗ (ಒಂದುಪ್ರಸ್ಥಕ್ಕೆ ನಾಲ್ಕು ಕುಡವಗಳು. ನಾಲ್ಕು ಪ್ರಸ್ಥಕ್ಕೆ ಹದಿನಾರು ಕುಡವಗಳು)

6. ದ್ರೋಣ=ನಾಲ್ಕು ಆಢಕಗಳು-ನಾಲ್ಕು ಕೊಳಗಗಳು - ಮೂವತ್ತೆರಡು ಸೇರುಗಳು-ಒಂದು ನಾಗಳ.

ಸೂಚನೆ:- ಈ ಅಳತೆಗಳ ಬಗ್ಗೆ ಭಿನ್ನಾಭಿಪ್ರಾಯಗಳಿವೆ ಎಂದು ಕನ್ನಡ ಸಾಹಿತ್ಯಪರಿಷತ್ತಿನ ಕೋಶದ ನಾಲ್ಕನೆಯ ಸಂಪುಟದಲ್ಲಿ ದ್ರೋಣ ಶಬ್ದದ ಅರ್ಥವನ್ನು ಹೇಳುವಾಗ ಹೇಳಲಾಗಿದೆ. ಈ ಮೇಲೆ ಕಾಣಿಸಿರುವ ಪಲ - ಪ್ರಸೃತಿ - ಕುಡವ - ಪ್ರಸ್ಥ - ಸೇರು - ಆಢಕ - ಕೊಳಗ - ದ್ರೋಣ ಮುಂತಾದುವುಗಳೆಲ್ಲವೂ, ಹಳೆಯ ಕಾಲದ ಪ್ರಮಾಣಗಳು. ಈಗಿನ ಕಾಲದ ಸೇರು ಮುಂತಾದ ಪ್ರಮಾಣಗಳಲ್ಲವೆಂಬುದನ್ನು ಮಾತ್ರ ಗಮನದಲ್ಲಿಟ್ಟುಕೊಳ್ಳಬೇಕು. ಇದೇ ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ

ಆಹ್ನಿಕಪ್ರಕರಣ ಪುಟ೨೩೫ ರಲ್ಲಿ ೧೮ ರಿಂದ ೨೩ ನೇ ಪಂಕ್ತಿಯ ತನಕ ಈ ಮೇಲೆ ಹೇಳಿದಂತೆ ಹಾಲು-ಮೊಸರು-ತುಪ್ಪ-ಜೇನುತುಪ್ಪ ಇವುಗಳ ಪ್ರಮಾಣವನ್ನು ಹೇಳಿ, ಪುಟ ೨೩೬ ರಲ್ಲಿ ೯ನೇ ಪಂಕ್ತಿಯಿಂದ " ಇತಿ ಪ್ರಾಗುಕ್ತಮಾನಶರ್ಕರಾಂ ಅನೇನ ಮಂತ್ರೇಣ (ಸ್ವಾದುಃಪವಸ್ವೇತಿ ಮಂತ್ರೇಣ) ಅನುಮಂತ್ರ್ಯ" ಎಂಬುದಾಗಿ ಹೇಳಿರುವುದರಿಂದ, ಹಾಲು ಮುಂತಾದವುಗಳು ಈ ಮೇಲೆ ಹೇಳಿದಂತೆ ಯಾವ ಪ್ರಮಾಣದಲ್ಲಿರಬೇಕೋ ಅದೇ ಪ್ರಮಾಣದಲ್ಲಿ ಸಕ್ಕರೆಯೂ ಇರಬೇಕು ಎಂಬ ವಿಷಯವು ಸ್ಪಷ್ಟವಾಗಿ ತಿಳಿದು ಬರುತ್ತದೆ.

**88.ಹಾಲು ಮುಂತಾದ ಪಂಚಾಮೃತಗಳಿಂದ ಅಭಿಷೇಕವನ್ನು ಮಾಡುವಾಗ ದೇವರ ಯಾವ ಅಂಗದಲ್ಲಿ ಅಭಿಷೇಕವನ್ನು ಮಾಡಬೇಕು?**

ಉ. ಕೃ.ಸ್ಮೃ. ಆ. ಪ್ರ. ಪುಟ ೨೪೫ ಪಂಕ್ತಿ ೭

"ಆಪ್ಯಾಯಸ್ವೇತಿ ಮಂತ್ರೇಣ ದೇವಸ್ಯ ಶಿರಸಿ ಅಭಿಷಿಚ್ಯ" ಎಂದು ಹೇಳಿದಂತೆ ದೇವರ ಶಿರಸ್ಸಿನಲ್ಲಿ ಪಂಚಾಮೃತಗಳಿಂದ ಅಭಿಷೇಕವನ್ನು ಮಾಡಬೇಕು.

**89. ಹಾಲು ಮುಂತಾದ ಪಂಚ ಅಮೃತಗಳಿಂದ ದೇವರಿಗೆ ಸ್ನಾನವನ್ನು ಯಾರು ಮಾಡಿಸುತ್ತಾರೆ?**

ಉ. "ಸಸ್ನುಷಾ ಚ ಹರೇರ್ಲಕ್ಷ್ಮೀಃ ಸ್ನಾನಂ ಕಾರಯಿತಿ ಪ್ರಭೋಃ" ಎಂಬುದಾಗಿ ಹೇಳಿದಂತೆ ಸರಸ್ವತೀ ಮತ್ತು ಭಾರತೀ ಇವರುಗಳಿಂದ ಕೂಡಿ ಲಕ್ಷ್ಮಿಯು ಪರಮಾತ್ಮನಿಗೆ ಸ್ನಾನವನ್ನು ಮಾಡಿಸುತ್ತಾಳೆ.

**90. ಹಾಲು-ಮೊಸರು-ತುಪ್ಪ-ಜೇನುತುಪ್ಪ ಮತ್ತು ಸಕ್ಕರೆ ಈ ಐದು ಅಮೃತಗಳಿಗೆ (ಪಂಚ ಅಮೃತಗಳಿಗೆ) ಅಭಿಮಾನಿ ದೇವತಗಳು ಯಾರು?**

ಉ. ಅ) ದುಗ್ಧೇ ತು ದೇವೋ ಗೋವಿಂದಃ, ದಧಿ ವಾಮನದೈವತಂ ಆಜ್ಯಂ ತು ವಿಷ್ಣುದೈವತ್ಯಂ ಮಧುನಿ ಮಧುಸೂದನಮ್ ॥ ಶರ್ಕರಾಂ ಚಾಚ್ಯುತಂ ವಿದ್ಯತ್ ಏತಾಃ ಪಂಚಾಮೃತದೇವತಾಃ ॥

ಆ) ಕ್ಷೀರಾಭಿಮಾನೀ ಗೋವಿಂದಃ ದಧ್ನಿ ವಾಮನದೇವತಾ ।

ನಾರಾಯಣಂ ಘೃತೇ ವಿಂದ್ಯಾತ್ ಮಧೌ ತು ಮಧುಸೂದನಮ್ । ಶರ್ಕರಾಯಾಂ ಅಚ್ಯುತಂ ಚ ....॥ ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ, ಹಾಲಿಗೆ ಗೋವಿಂದನೂ - ಮೊಸರಿಗೆ ವಾಮನನೂ-ತುಪ್ಪಕ್ಕೆ ವಿಷ್ಣುವೂ-ಜೇನುತುಪ್ಪಕ್ಕೆ ಮಧುಸೂದನನೂ ಮತ್ತು ಸಕ್ಕರೆಗೆ ಅಚ್ಯುತನೂ ಅಭಿಮಾನಿದೇವತೆ ಎಂದು ತಿಳಿಯಬೇಕು. ಆದರೆ ಶ್ರೀಸುಮತೀಂದ್ರತೀರ್ಥಕೃತ ದೇವಪೂಜಾಪದ್ಧತಿಯಲ್ಲಿ ಉದಾಹರಿಸಿರುವ ಪ್ರಮಾಣದ ಪ್ರಕಾರ ತುಪ್ಪಕ್ಕೆ ನಾರಾಯಣನು ಅಭಿಮಾನಿ ದೇವತೆ ಎಂದು ತಿಳಿಯಬೇಕು.

**91. ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡುವುದಕ್ಕಿಂತ ಪೂರ್ವದಲ್ಲಿ ಹಾಲು ಮುಂತಾದ ಪಂಚ ಅಮೃತಗಳ ಪೂಜೆಯನ್ನು (ಪಂಚಾಮೃತದ್ರವ್ಯ ಪೂಜೆಯನ್ನು) ಯಾವ ರೀತಿಯಾಗಿ ಮಾಡಬೇಕು?**

ಉ. ೧.ಪಂಚಾಮೃತದ್ರವ್ಯಪೂಜಾ:- ಶ್ರೀವಿಷ್ಣುಪೂಜಾಂಗ ಪಂಚಾಮೃತಪೂಜಾಂ ಕರಿಷ್ಯೇ । ಪೂರ್ವೇ ದಧಿ, ದಕ್ಷಿಣೇ ಘೃತಂ, ಪಶ್ಚಿಮೇ ಮಧು, ಉತ್ತರೇ ಶರ್ಕರಾಂ, ವಾಯವ್ಯೇ ಫಲಾನಿ, ಮಧ್ಯೇ ಕ್ಷೀರಂ ನಿಕ್ಷಿಪ್ಯ ಧೇನುಮುದ್ರಾಂ ಪ್ರದರ್ಶ್ಯ, ಕ್ಷೀರೇ ಗೋವಿಂದಮಾವಾಹಯಾಮಿ। ದಧ್ನಿ ದಧಿವಾಮನಮಾವಾಹಯಾಮಿ । ಆಜ್ಯೇ ವಿಷ್ಣುಂ, ಮಧುನಿ ಮಧುಸೂದನಮ್ । ಶರ್ಕರಾಯಾಂ ಅಚ್ಯುತಮ್ । ಫಲೇ ನಾರಾಯಣಂ ಆವಾಹಯಾಮಿ । ಪಂಚಾಮೃತದೇವತಾಭ್ಯೋ ನಮಃ। ಇತ್ಯಾವಾಹನಾದಿ ಷೋಡಶೋಪಚಾರ ಪೂಜಾಂ ಕುರ್ಯಾತ್।

೨. ಮಧ್ಯೇ ಕ್ಷೀರಂ ತು, ದಧ್ಯಾದಿ ನ್ಯಸೇತ್ ಪೂರ್ವಾದಿಷು ಕ್ರಮಾತ್। ದುಗ್ಧೇ ತು ದೇವೋ ಗೋವಿಂದಃ ದಧಿ ವಾಮನದೈವತಮ್ । ಆಜ್ಯಂ ಚ ವಿಷ್ಣುದೈವತ್ಯಂ ಮಧುನಿ ಮಧುಸೂದನಮ್ । ಶರ್ಕರಾಂ ಚ ಅಚ್ಯುತಂ ವಿದ್ಯಾತ್ ಏತಾಃ ಪಂಚಾಮೃತದೇವತಾಃ ಇತ್ಯನುಸಂಧಾಯ । ಪಂಚಾಮೃತದೇವತಾಭ್ಯಃ ತಾರ್ಕ್ಷ್ಯ-ಧೇನು-ಶಂಖ-ಚಕ್ರ-ಗದಾ ಪದ್ಮಾಖ್ಯ ಮುದ್ರಾ, ಷಟ್ಕಮಧ್ಯೇ ಜಲಶೋಧನರೂಪ ಪ್ರಯೋಜನಾಭಾವಾತ್, ಪದ್ಮಮುದ್ರಾತಿರಿಕ್ತಾಃ ಪಂಚಮುದ್ರಾಃ ಪೂರ್ವೋಕ್ತ ತತ್ತನ್ಮಂತ್ರೈಃ ಪ್ರದರ್ಶ್ಯ, ತತ್ರ ತುಳಸೀಪುಷ್ಪಾಣಿ ಕ್ಷಿಪ್ತ್ವಾ ಮೂಲೇನ ಅಭಿಮಂತ್ರ್ಯ, ನಮಸ್ಕೃತ್ಯ,

ವಿಷ್ಣುಗಾಯತ್ರ್ಯಾ ಅಭಿಮಂತ್ರಯತ ॥

೩. ತತಃ ಪಂಚಾಮೃತಸ್ನಾನಾರ್ಥಂ ಪಂಚಪಾತ್ರಾಣಿ ಸ್ಥಾಪಯೇತ್ । ಮಧ್ಯೇ ಕ್ಷೀರಂ ತು, ದಧ್ಯಾದಿ ನ್ಯಸೇತ್ ಪೂರ್ವಾದಿಷು ಕ್ರಮಾತ್। ದುಗ್ಧೇ ತು ದೇವೋ ಗೋವಿಂದಃ ದಧಿವಾಮನದೈವತಮ್। ಆಜ್ಯಂ ತು ವಿಷ್ಣುದೈವತ್ಯಂ ಮಧೌ ಚ ಮಧುಸೂದನಮ್ । ಶರ್ಕರೇ ಚಾಚ್ಯುತಂ ವಿಂದ್ಯಾತ್ ತಾಃ ಪಂಚಾಮೃತದೇವತಾಃ । ಪಂಚಾಮೃತದೇವತಾಭ್ಯಃ ಕಲಶವತ್ ಪಂಚಮುದ್ರಾಃ ಪ್ರದರ್ಶಯೇತ್। ಪಂಚಾಮೃತದೇವತಾಭ್ಯಃ ಗಂಧಪುಷ್ಪತುಳಸೀದಲಾನಿ ನಿಧಾಯ, ಮೂಲೇನ ಅಷ್ಟವಾರಂ ಅಭಿಮಂತ್ರ್ಯ ನಮಸ್ಕೃತ್ಯ ವಿಷ್ಣುಗಾಯತ್ರ್ಯಾ ಅಭಿಮಂತ್ರ್ಯ.

೪. ಶ್ರೀಸಮತೀಂದ್ರತೀರ್ಥಕೃತ ದೇವಪೂಜಾಪದ್ಧತಿಃ :-

ಪಂಚಾಮೃತಪೂಜಾ:- ಕ್ಷೀರಾಭಿಮಾನೀ ಗೋವಿಂದಃ ದಧ್ನಿ ವಾಮನದೇವತಾ । ನಾರಾಯಣಂ ಘೃತೇ ವಿಂದ್ಯಾತ್ ಮಧೌ ಚ ಮಧುಸೂದನಮ್ । ಶರ್ಕರಾಯಾಂ ಅಚ್ಯುತಂ ಚ ಗಾಯತ್ರ್ಯಾ ವಿಷ್ಣುಸಂಜ್ಞಯಾ । ನಮಃ ಸ್ವಾಹಾ ವಷಡಿತಿ ಸ್ಪೃಷ್ಟ್ವಾ । ಮುದ್ರಾಂ ಪ್ರದರ್ಶಯೇತ್। ಪೂರ್ವೇ ದಧಿ ದಕ್ಷಿಣೇ ಘೃತಂ ಪಶ್ಚಿಮೇ ಮಧು ಉತ್ತರೇ ಶರ್ಕರಾಂ ವಾಯವ್ಯೇ ಫಲಾನಿ ಮಧ್ಯೇ ಕ್ಷೀರಂ ನಿಕ್ಷಿಪ್ಯ, ಧೇನುಮುದ್ರಾಂ ಪ್ರದರ್ಶ್ಯ, ಕ್ಷೀರೇ ಗೋವಿಂದಮಾವಾಹಯಾಮಿ । ದಧ್ನಿವಾಮನಮಾವಾಹ ಯಾಮಿ। ಘೃತೇ ನಾರಾಯಣಮಾವಾಹಯಾಮಿ। ಮಧೌ ಮಧುಸೂದನ ಮಾವಾಹಯಾಮಿ । ಶರ್ಕರಾಯಾಮಚ್ಯುತಮಾವಾಹಯಾಮಿ । ಫಲೇ ಶ್ರೀವಿಷ್ಣುಮಾವಾಹಯಾಮಿ।ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ। ತನ್ನೋ ವಿಷ್ಣುಃ ಪ್ರಚೋದಯಾತ್। ಪಂಚಾಮೃತ ದೇವತಾಭ್ಯೋ ನಮಃ । ಧ್ಯಾನಾವಾಹನಾದಿ ಷೋಡಶೋಪಚಾರಪೂಜಾಂ ಸಮರ್ಪ ಯಾಮಿ।

೫. ದೇವ ಪೂಜಾ, ಕನ್ನಡ ಪುಸ್ತಕ :- ... ಫಲೇ ನಾರಾಯಣಸ್ತಥಾ । ಇಕ್ಷುರಸೇऽನಿರುದ್ಧಶ್ಚ ಧ್ಯೇಯಾಃ ಪಂಚಾಮೃತದೇವತಾಃ ಇಕ್ಷುರಸೇ ಅನಿರುದ್ಧಂ ಆವಾಹಯಾಮಿ।.... ತುಳಸೀದಳವನ್ನು ಹಾಕಬೇಕು. ಅಥವಾ ತುಳಸೀದಳವನ್ನು ಕಲಶೋದಕದಲ್ಲಿ ಅದ್ದಿ ಪ್ರೋಕ್ಷಿಸಬೇಕು....

ಪಂಚಾಮೃತದೇವತಾಭ್ಯೋ ನಮಃ ಆವಾಹನಾದಿ ಪಂಚೋಪಚಾರ ಪೂಜಾಃ ಸಮರ್ಪಯಾಮಿ ಎಂದು ಹೇಳಿ, ಕೈಮುಗಿದು, ವಿಷ್ಣುಗಾಯತ್ರಿ ಯಿಂದಲೂ ಅಭಿಮಂತ್ರಿಸಬೇಕು.

೬. ಪಂಚಾಮೃತಪಾತ್ರಪೂಜಾ :- ತತ್ರ ಮಧ್ಯೇ ಸ್ಥಾಪಿತಪಾತ್ರಸ್ಥಕ್ಷೀರೇ ಓಂ ಗೋವಿಂದಾಯ ನಮಃ ಗೋವಿಂದಂ ಆವಾಹಯಾಮಿ। ಪೂರ್ವೇ ಸ್ಥಾಪಿತಪಾತ್ರಸ್ಥ ದಧ್ನಿ ಓಂ ವಾಮನಾಯ ನಮಃ ವಾಮನಂ ಆವಾಹಯಾಮಿ। ದಕ್ಷಿಣೇ ಸ್ಥಾಪಿತ ಪಾತ್ರಸ್ಥಾಜ್ಯೇ ಓಂ ವಿಷ್ಣವೇ ನಮಃ ವಿಷ್ಣುಂ ಆವಾಹಯಾಮಿ। ಪಶ್ಚಿಮೇ ಸ್ಥಾಪಿತ ಪಾತ್ರಸ್ಥ ಮಧುನಿ ಓಂ ಮಧುಸೂದನಾಯ ನಮಃ ಮಧುಸೂದನಂ ಆವಾಹಯಾಮಿ। ಉತ್ತರೇ ಸ್ಥಾಪಿತಪಾತ್ರಸ್ಥ ಶರ್ಕರಾಯಾಂ ಓಂ ಅಚ್ಯುತಾಯ ನಮಃ ಅಚ್ಯುತಂ ಆವಾಹಯಾಮಿ ಇತ್ಯಾವಾಹ್ಯ, ಕ್ಷೀರಾದಿ ದ್ರವ್ಯ ಪಂಚಕೇ ತಾರ್ಕ್ಷ್ಯ- ಧೇನು- ಶಂಖ-ಚಕ್ರ-ಗದಾಖ್ಯ ಪಂಚಮುದ್ರಾಃ ಪ್ರದರ್ಶ್ಯ, ತುಲಸ್ಯಾದಿಭಿಃ ಪೂಜಯಿತ್ವಾ, ಮೂಲಮಂತ್ರೇಣ ಅಷ್ಟವಾರಂ ಅಭಿಮಂತ್ರ್ಯ, ನಮಸ್ಕುರ್ಯಾತ್। ವಿಷ್ಣುಗಾಯತ್ರ್ಯಾ ಅಭಿಮಂತ್ರಯೇತ್ ಇತ್ಯೇಕೇ । ಸತಿ ಸಂಭವೇ ನಾರೀಕೇಲೋದಕಂ, ಆಮ್ರರಸಂ, ದ್ರಾಕ್ಷಾರಸಂ, ಪೃಥಕ್ಪಾತ್ರೇಷು ನಿಧಾಯ, ನಾರಿಕೇಲೋದಕಪಾತ್ರೇ ಓಂ ಶ್ರಿಯೈ ನಮಃ ಶ್ರಿಯಮಾವಾಹಯಾಮಿ। ಆಮ್ರರಸಪಾತ್ರೇ ದ್ರಾಕ್ಷಾರಸಪಾತ್ರೇ ಚ ಓಂ ವಿಷ್ಣವೇ ನಮಃ ವಿಷ್ಣುಂ ಆವಾಹಯಾಮಿ। ಇತ್ಯಾವಾಹ್ಯ ತುಲಸ್ಯಾದಿಭಿಃ ಪೂಜಯೇತ್।

೭. ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ - ಆಹ್ನಿಕಪ್ರಕರಣ ಪುಟ ೨೩೬ "ತಂಡುಲೋಪರೀ ಮಧ್ಯೇ ಕ್ಷೀರಪಾತ್ರಂ, ಪ್ರಾಗಾದಿ ದಿಕ್ಷು ದಧ್ಯಾದಿ ಪಾತ್ರಾಣಿ ಸ್ಥಾಪ್ಯ, ಶಂಖಸ್ಥೋದಕಂ ತುಲಸೀದಲೇನ ಗೃಹೀತ್ವಾ, ತಾನಿ ಸಂಪ್ರೋಕ್ಷ್ಯ, ತತ್ತನ್ಮಧ್ಯೇ ತುಲಸೀದಲಾನಿ ನಿಕ್ಷಿಪ್ಯ, ತೇಷಾಂ ಮುಖಂ ಪ್ರತ್ಯೇಕಂ ಸ್ಪೃಶನ್ ವಕ್ಷ್ಯಮಾಣ ಮಂತ್ರಾನ್ ಯಥಾಕ್ರಮೇಣ ಜಪೇತ್। ಆಪ್ಯಾಯಸ್ವೇತಿ ಗೌತಮ ಋಷಿಃ, ಗಾಯತ್ರೀ ಛಂದಃ ಸೋಮೋ ದೇವತಾ । ದಧಿಕ್ರಾವ್ಣ ಇತ್ಯಸ್ಯ ಗೌತಮಪುತ್ರಃ ವಾಮನದೇವ ಋಷಿಃ । ವಿಷ್ಣುರ್ದೇವತಾ । ಅನುಷ್ಟುಪ್ ಛಂದಃ। ಘೃತಂ ಮಿಮಿಕ್ಷೇತಿ ಜಮದಗ್ನಿ ಋಷಿಃ, ಸ್ವಾಹಾಕೃತಿಃ ದೇವತಾ। ತ್ರಿಷ್ಟುಪ್ ಛಂದಃ। ಮಧುವಾತೇತಿ ತ್ರ್ಯರ್ಚಸ್ಯ ರಾಹೂಗಣಪುತ್ರೋ

ಗೌತಮ ಋಷಿಃ ವಿಶ್ವೇ ದೇವಾಃ ದೇವತಾಃ ಗಾಯತ್ರೀ ಛಂದಃ । ತಂ ತೇ ವಯಂ ಯಥಾ ಗೋಭಿರಿತ್ಯಸ್ಯ ಪ್ರಗಾಥ ಋಷಿಃ । ಇಂದ್ರೋ ದೇವತಾ । ಗಾಯತ್ರೀ ಛಂದಃ। ಇಕ್ಷುರಸಾಭಾವೇ ಸ್ವಾದುಃ ಪವಸ್ವ ಇತ್ಯೃಚಃ ಭರದ್ವಾಜ ಋಷಿಃ। ಲಿಂಗೋಕ್ತಾದೇವತಾ ತ್ರಿಷ್ಟುಪ್‌ಛಂದಃ। ಇತಿ ಪ್ರಾಗುಕ್ತಮಾನಶರ್ಕರಾಂ ಅನೇನ ಮಂತ್ರೇಣ ಅನುಮಂತ್ರ್ಯ, ಕಲಶಪೀಠಪೂಜಾದಿಕಾನ್, ಕಲಶೋಕ್ತದ್ರವ್ಯಾಭಿಮಾನಿದೇವತಾಂತರ್ಯಾಮಿಣಂ ತತ್ರ ಆವಾಹ್ಯ, ಅರ್ಘ್ಯಪಾದ್ಯಾದಿ ನೀರಾಜನಾಂತೋಪಚಾರಾನ್ ಕುರ್ಯಾತ್ । ಸ್ವಯಂ ಅಶಕ್ತೇಶ್ಚೇತ್ ಅನ್ಯೈರ್ವಾ ಕಾರಯೇತ್।

**92. ದೇವರಿಗೆ ಪಂಚ ಅಮೃತಗಳಿಂದ ಅಭಿಷೇಕವನ್ನು ಮಾಡುವಾಗ ಯಾವ ಕ್ರಮದಿಂದ ಮಾಡಬೇಕು?**

**ಅಥ ಪಂಚಾಮೃತಸ್ನಾನಾನಿ । ತತ್ರ ದುಗ್ಧ ದಧ್ಯಾಜ್ಯಶರ್ಕರಾಮಧೂನಿ, ದುಗ್ಧ ದಧ್ಯಾಜ್ಯ ಮಧು ಶರ್ಕರಾ ಇತಿ ವಾ ಕ್ರಮ ಇತಿ ಮಹಾರ್ಣವೇ ।** ಎಂಬುದಾಗಿ ಹೇಳಿದಂತೆ ನಾವು ಶ್ರೀಹರಿ-ವಾಯು-ಗುರುಗಳಿಗೆ ಪಂಚಾಮೃತಾಭಿಷೇಕವನ್ನು ಮಾಡುವಾಗ, ಮೊದಲು ಹಾಲಿನಿಂದ ಅನಂತರದಲ್ಲಿ ಮೊಸರಿನಿಂದ ಅನಂತರದಲ್ಲಿ ತುಪ್ಪದಿಂದ ತರುವಾಯ ಸಕ್ಕರೆಯಿಂದ ಕೊನೆಯಲ್ಲಿ ಜೇನುತುಪ್ಪದಿಂದ ಅಭಿಷೇಕವನ್ನು ಮಾಡಬೇಕು. ಇದು ಒಂದು ಕ್ರಮ ಅಥವಾ ಮೊದಲು ಹಾಲಿನಿಂದ ತರುವಾಯ ಮೊಸರಿನಿಂದ ಅನಂತರದಲ್ಲಿ ತುಪ್ಪದಿಂದ ಅನಂತರಲ್ಲಿ ಜೇನುತುಪ್ಪದಿಂದ ಕೊನೆಯಲ್ಲಿ ಸಕ್ಕರೆಯಿಂದ ಅಭಿಷೇಕವನ್ನು ಮಾಡಬೇಕು. ಇದು ಎರಡನೆಯ ಕ್ರಮ. ನಿಬಂಧಗ್ರಂಥಗಳಲ್ಲಿ ಈ ಎರಡು ಕ್ರಮಗಳನ್ನೂ ಹೇಳಿದ್ದರೂ, ಮಾಧ್ವರಲ್ಲಿ ಅನಾದಿಕಾಲದಿಂದಲೂ ಎರಡನೆಯ ಕ್ರಮವೇ ಅನುಷ್ಠಾನದಲ್ಲಿರುವುದರಿಂದ, ಅದೇ ಕ್ರಮವನ್ನೇ ಅನುಸರಿಸಿ ಶ್ರೀಹರಿ-ವಾಯು-ಗುರುಗಳಿಗೆ ಪಂಚಾಮೃತಾಭಿಷೇಕವನ್ನು ಮಾಡಬೇಕು. ಮೊದಲನೆಯ ಕ್ರಮವು ಮಾಧ್ವರಲ್ಲಿ ಅನುಷ್ಠಾನದಲ್ಲಿ ಇಲ್ಲ.

**93. ಹಾಲು ಮುಂತಾದ ಪಂಚಾಮೃತಗಳೂ ಸಮಾನವಾದವುಗಳೇ ಹೇಗೆ?**

**" ಪಂಚದ್ರವ್ಯಾಣಿ ಸಮಾನ್ಯೇವೇತ್ಯಪಿ ತತ್ರೈವೋಕ್ತಂ "** (ಮಹಾರ್ಣವ ಏವ) ಎಂಬುದಾಗಿ ಹೇಳಿರುವುದರಿಂದ ಹಾಲು-ಮೊಸರು-ತುಪ್ಪ-

ಜೇನುತುಪ್ಪ-ಸಕ್ಕರೆ ಈ ಐದು ಅಮೃತಗಳೂ ಸಮಾನವಾದವುಗಳು.

**94. ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡಲು ಹಾಲು ಮುಂತಾದ ಐದು ಅಮೃತಗಳು ದೊರೆಯದಿದ್ದರೆ ಏನು ಮಾಡಬೇಕು?**

ಪಂಚದ್ರವ್ಯಾಲಾಭೇ ಸಂಗ್ರಹೇ :- "ಮಧು ದಧ್ನಾಮಲಾಭೇ ತು ಘೃತಸ್ಯ ಚ ನರಾಧಿಪ। ಕ್ಷೀರಸ್ನಾನೇನ ಚೈಕೇನ ಸರ್ವಂ ಸಂಪೂರ್ಣತಾಂ ವ್ರಜೇತ್।" ಎಂಬುದಾಗಿ ಸಂಗ್ರಹ ಎಂಬ ಗ್ರಂಥದಲ್ಲಿ ಹೇಳಿದಂತೆ, ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡಲು ಮೊಸರು-ತುಪ್ಪ-ಜೇನುತುಪ್ಪ-ಸಕ್ಕರೆ ಇವುಗಳು ದೊರೆಯದಿದ್ದರೆ, ಹಾಲಿನಿಂದ ಮಾತ್ರ ಅಭಿಷೇಕವನ್ನು ಮಾಡಿದರೆ ಎಲ್ಲವೂ ಸಂಪೂರ್ಣವಾಗುತ್ತದೆ.

**95. ಗುರುಗಳ ಬೃಂದಾವನಕ್ಕೆ ಯಾವಾಗ ಪಂಚಾಮೃತಾಭಿಷೇಕವನ್ನು ಮಾಡಬೇಕು. ?**

ಶ್ರೀಸುಮತೀಂದ್ರತೀರ್ಥಕೃತ ದೇವಪೂಜಾಪದ್ಧತಿಃ :- "ದೇವಸ್ಯ ಉದ್ವರ್ತನಂ ಕೃತ್ವಾ ಗುರುಬೃಂದಾವನಸ್ಯ ಪಂಚಾಮೃತಾಭಿಷೇಕಂ ಕುರ್ಯಾತ್" ಎಂಬುದಾಗಿ ಶ್ರೀಸುಮತೀಂದ್ರತೀರ್ಥರು ಹೇಳಿದಂತೆ ಮೊದಲು ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡಿ ದೇವರ ಉದ್ವಾರ್ಚನೆ ಮಾಡಿದಮೇಲೆ, ಗುರುಗಳ ಬೃಂದಾವನಕ್ಕೆ ಪಂಚಾಮೃತಾ-ಭಿಷೇಕವನ್ನು ಮಾಡಬೇಕು.

**96. ಎಳೆನೀರು ಅಥವಾ ತೆಂಗಿನನೀರು - ಮಾವಿನ ಹಣ್ಣಿನರಸ - ದ್ರಾಕ್ಷಿಹಣ್ಣಿನರಸ ಇವುಗಳಿಂದ ಮಾಡುವ ಅಭಿಷೇಕವು ಯಾವ ಅಭಿಷೇಕದಲ್ಲಿ ಸೇರುತ್ತದೆ?**

ಈ ಮೇಲೆ ಕಾಣಿಸಿದಂತೆ ಎಳನೀರು ಮುಂತಾದವುಗಳಿಂದ ಮಾಡುವ ಅಭಿಷೇಕವು, ಫಲವೆಂಬ ರೂಪದಿಂದ ಫಲದಿಂದ ಮಾಡುವ ಅಭಿಷೇಕದಲ್ಲೇ ಅಂದರೆ ಫಲಾಭಿಷೇಕದಲ್ಲೇ ಸೇರುತ್ತದೆ.

**97. ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡುವಾಗ ಸಕ್ಕರೆಯ ಬದಲು ಬೆಲ್ಲವನ್ನು ಕೆಲವರು ಉಪಯೋಗಿಸುತ್ತಾರೆ. ಕಾರಣವೇನು?**

ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡುವಾಗ ಈ ಹಿಂದೆ ಹೇಳಿದಂತೆ ಕಬ್ಬಿನ ರಸವು ವಿಹಿತವಾಗಿದೆ. ಬೆಲ್ಲವು ಕಬ್ಬಿನ ವಿಕಾರವಾದ ಕಾರಣ ಕೆಲವರು ಬೆಲ್ಲವನ್ನು ಉಪಯೋಗಿಸುತ್ತಾರೆ.

**98. ದೇವರ ಪಂಚಾಮೃತಾಭಿಷೇಕದ ಸಲುವಾಗಿ ಎಂತಹ ಹಸುವಿನಿಂದ ಹಾಲನ್ನು ಕರೆಯಬಾರದು?**

ಪಾದ್ಮಸಂಹಿತಾಯಾಂ :- "ನಾರ್ತಾಯಾಂ ನ ಚ ಗರ್ಭಿಣ್ಯಾಂ ನ ವೃದ್ಧಾಯಾಂ ಕದಾಚನ । ನಾವತ್ಸಾಯಾಂ ತು ಪೂಜಾರ್ಥಂ ಉಪಾದೇಯಮಿತಿ ಸ್ಮೃತಿಃ" ಎಂದು ಪಾದ್ಮಸಂಹಿತೆಯಲ್ಲಿ ಹೇಳಿದಂತೆ, ರೋಗದಿಂದ ಪೀಡಿತವಾಗಿರುವ - ಗರ್ಭವತಿಯಾಗಿರುವ-ವೃದ್ಧವಾದ ಆಕಳುಗಳಿಂದ ದೇವರ ಪಂಚಾಮೃತಾಭಿಷೇಕದ ಸಲುವಾಗಿ ಹಾಲನ್ನು ಕರೆಯಬಾರದು ಮತ್ತು ಕರುವಿಲ್ಲದ ಆಕಳಿನಿಂದಲೂ ಹಾಲನ್ನು ಕರೆಯಬಾರದು.

**99. ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡುವಾಗ ಆಕಳಹಾಲು - ಆಕಳ ಮೊಸರು - ಆಕಳತುಪ್ಪದಿಂದ ಅಭಿಷೇಕ ಮಾಡಬೇಕಲ್ಲವೆ?**

ಉ. ಕೃ.ಸ್ಮೃ.ಆ.ಪ್ರ. ಪುಟ ೨೭೨

"ಪಂಚಾಮೃತೇನ ಸ್ನಪನಂ ಗವಾಂ ಕ್ಷೀರಾದಿನಾ ಚರೇತ್" ಎಂಬುದಾಗಿ ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿಯಲ್ಲಿ ಹೇಳಿದಂತೆ ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡುವಾಗ ಆಕಳಹಾಲು - ಆಕಳಮೊಸರು - ಆಕಳತುಪ್ಪದಿಂದ ಅಭಿಷೇಕ ಮಾಡಬೇಕು.

**100. ದೇವರಿಗೆ ಹಾಲು ಮುಂತಾದ ಪಂಚ ಅಮೃತಗಳಿಂದ ಅಭಿಷೇಕವನ್ನು ಮಾಡಿದರೆ ಬರುವ ಫಲವೇನು? ಮತ್ತು ಪಂಚ ಅಮೃತಗಳಿಂದ ಮಾಡುವ ಅಭಿಷೇಕದ ಮಹತ್ವವೇನು?**

**ಉ. ಕೃ.ಸ್ಮೃ.ಆ.ಪ್ರ. ಪುಟ ೨೪೫ -ಅಥ ಕ್ಷೀರಾದಿ ಸ್ನಾಪಿತಫಲಮ್ ।**

**ಪಾದ್ಮೇ:-**

**" ಕಪಿಲಾಕ್ಷೀರಮಾದಾಯ ಶಂಖೇ ಕೃತ್ವಾ ಜನಾರ್ದನಮ್ ।**

**ಯಜ್ಞಾಯುತಸಹಸ್ರಸ್ಯ ಸ್ನಾಪಿಯಿತ್ವಾ ಲಭೇತ್ ಫಲಮ್ ॥**

**ಕ್ಷೀರಸ್ನಾನಂ ಪ್ರಕುರ್ವಂತಿ ಯೇ ನರಾಃ ಕೃಷ್ಣಮೂರ್ಧನಿ ।**

**ಜ್ಞಾತ್ವಾಶ್ವಮೇಧಜಂ ಪುಣ್ಯಂ ಬಿಂದುನಾ ಬಿಂದುನಾ ಸ್ಮೃತಮ್ ॥**

**ಕ್ಷೀರಾದ್ದಶಗುಣಂ ದಧ್ನೋ ಘೃತಂ ಚೈವ ಶತೋತ್ತರಂ ।**

**ಘೃತಾಚ್ಛತಗುಣಂ ಕ್ಷೌದ್ರಂ ಸ್ವಾದುನ್ಯಪಿ ತಥೋತ್ತರಮ್ ॥**

**ಇಕ್ಷುರಸಂ ಚೂತರಸಂ ದಶವಾಜಿಮುಖೈಸ್ಸಮಮ್ ।**

**ತಥೈವ ತೀರ್ಥನೀರಂ ತು ಫಲಂ ಯಚ್ಛೇತ ಭೂಮಿಪ ॥**

**ದಶಾಪರಾಧಂ ತೋಯೇನ ಕ್ಷೀರೇಣ ಕ್ಷಮತೇ ಶತಮ್ ।**

**ಸಹಸ್ರಂ ಕ್ಷಮತೇ ದಧ್ನಾ ಘೃತೇನ ಕ್ಷಮತೇ ಯುತಮ್ ॥**

**ಮಧುನಾ ಕ್ಷಮತೇ ಲಕ್ಷಂ ಇಕ್ಷುಣಾ ದಶಲಕ್ಷಕಮ್ ।**

**ನಾರಿಕೇಲಾಂಬುನಾ ಕೋಟಿಂ ಅನಂತಂ ಗಂಧವಾರಿಣಾ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ, :-

ನಸುಗೆಂಪು ಬಣ್ಣದ ಆಕಳಿನ ಹಾಲಿನಿಂದ ದೇವರಿಗೆ ಅಭಿಷೇಕವನ್ನು ಮಾಡಿದರೆ, ಹತ್ತುಸಾವಿರ ಯಜ್ಞಗಳನ್ನು ಮಾಡಿದರೆ ಬರುವ ಫಲವು ದೊರೆಯುತ್ತದೆ.

ಹಾಲಿನಿಂದ ದೇವರಿಗೆ ಅಭಿಷೇಕವನ್ನು ಮಾಡಿದರೆ, ಹಾಲಿನ ಒಂದೊಂದು ಬಿಂದುವಿನಿಂದಲೂ ಅಶ್ವಮೇಧಯಾಗದ ಫಲವು ದೊರೆಯುತ್ತದೆ.

ದೇವರಿಗೆ ಹಾಲಿನಿಂದ ಅಭಿಷೇಕಮಾಡಿದರೆ ಬರುವ ಫಲಕ್ಕಿಂತಲೂ ಹತ್ತುಪಟ್ಟು ಹೆಚ್ಚಿನ ಫಲವು, ಮೊಸರಿನಿಂದ ಅಭಿಷೇಕವನ್ನು ಮಾಡಿದರೆ ಬರುತ್ತದೆ. ಮೊಸರಿನಿಂದ ಅಭಿಷೇಕವನ್ನು ಮಾಡಿದರೆ ಬರುವ

ಫಲಕ್ಕಿಂತಲೂ ನೂರುಪಟ್ಟು ಹೆಚ್ಚಿನ ಫಲವು, ತುಪ್ಪದಿಂದ ಅಭಿಷೇಕವನ್ನು ಮಾಡಿದರೆ ಬರುತ್ತದೆ. ತುಪ್ಪದಿಂದ ಅಭಿಷೇಕವನ್ನು ಮಾಡಿದರೆ ಬರುವ ಫಲಕ್ಕಿಂತಲೂ ನೂರುಪಟ್ಟು ಹೆಚ್ಚಿನ ಫಲವು ಜೇನುತುಪ್ಪದಿಂದ ಅಭಿಷೇಕವನ್ನು ಮಾಡಿದರೆ ಬರುತ್ತದೆ. ಜೇನುತುಪ್ಪದಿಂದ ಅಭಿಷೇಕವನ್ನು ಮಾಡಿದರೆ ಬರುವ ಫಲಕ್ಕಿಂತಲೂ ಹೆಚ್ಚಿನ ಫಲವು ಸಕ್ಕರೆಯ ಅಥವಾ ಬೆಲ್ಲದ ಅಭಿಷೇಕದಿಂದ ಬರುತ್ತದೆ.

೩-೪ (ಇದರಂತೆ) ಕಬ್ಬಿನ ರಸದಿಂದ ಮತ್ತು ಮಾವಿನಹಣ್ಣಿನ ರಸದಿಂದ ಅಭಿಷೇಕವನ್ನು ಮಾಡಿದರೆ, ಹತ್ತು ಅಶ್ವಮೇಧಯಾಗದ ಫಲವು ದೊರೆಯುತ್ತದೆ.

೫. ದೇವರಿಗೆ ನೀರಿನಿಂದ ಅಭಿಷೇಕವನ್ನು ಮಾಡಿದರೆ, ನಮ್ಮ ಹತ್ತು ಅಪರಾಧಗಳನ್ನೂ - ಹಾಲಿನಿಂದ ಅಭಿಷೇಕವನ್ನು ಮಾಡಿದರೆ ನಮ್ಮ ನೂರು ಅಪರಾಧಗಳನ್ನೂ - ಮೊಸರಿನಿಂದ ಅಭಿಷೇಕವನ್ನು ಮಾಡಿದರೆ ನಮ್ಮ ಸಾವಿರ ಅಪರಾಧಗಳನ್ನೂ - ತುಪ್ಪದಿಂದ ಅಭಿಷೇಕವನ್ನು ಮಾಡಿದರೆ ನಮ್ಮ ಹತ್ತುಸಾವಿರ ಅಪರಾಧಗಳನ್ನೂ - ಜೇನುತುಪ್ಪದಿಂದ ಅಭಿಷೇಕವನ್ನು ಮಾಡಿದರೆ ನಮ್ಮ ಒಂದು ಲಕ್ಷ ಅಪರಾಧಗಳನ್ನೂ - ಕಬ್ಬಿನರಸದಿಂದ ಅಭಿಷೇಕವನ್ನು ಮಾಡಿದರೆ ನಮ್ಮ ಹತ್ತುಲಕ್ಷ ಅಪರಾಧಗಳನ್ನೂ - ಎಳನೀರು ಅಥವಾ ತೆಂಗಿನ ನೀರಿನಿಂದ ಅಭಿಷೇಕವನ್ನು ಮಾಡಿದರೆ ನಮ್ಮ ಕೋಟಿ ಅಪರಾಧಗಳನ್ನೂ ಮತ್ತು ಸ್ವಾದೋದಕದಿಂದ ಅಭಿಷೇಕವನ್ನು ಮಾಡಿದರೆ ಭಗವಂತನು ನಮ್ಮ ಅನಂತಾಪರಾಧಗಳನ್ನೂ ಕ್ಷಮಿಸುತ್ತಾನೆ (ಸಹಿಸುತ್ತಾನೆ). ಹೀಗೆ ಹೇಳುವುದರಿಂದ ದೇವರಿಗೆ ಹಾಲು ಮುಂತಾದ ಪಂಚಾಮೃತಗಳಿಂದ ಅಭಿಷೇಕವನ್ನು ಮಾಡಿದರೆ ಬರುವ ಫಲವೂ ಮತ್ತು ಪಂಚ ಅಮೃತಗಳಿಂದ ಮಾಡುವ ಅಭಿಷೇಕದ ಮಹತ್ವವೂ ಸ್ಪಷ್ಟವಾಗಿ ತಿಳಿಯುತ್ತದೆ.

**101. ಪ್ರತಿ ದ್ವಾದಶೀದಿನದಂದು ದೇವರಿಗೆ ಕ್ಷೀರಾಭಿಷೇಕವನ್ನು ಮಾಡಬೇಕೆಂದು ಕೆಲವರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **"ಕ್ಷೀರಸ್ನಾನಂ ತು ಯಃ ಕುರ್ಯಾತ್ ಏಕಾದಶ್ಯಾಂ ಸಮಾಹಿತಃ ।**

**ದ್ವಾದಶ್ಯಾಮಥವಾ ವಿಷ್ಣೋಃ ಮಹಾಪಾತಕನಾಶನಮ್ ॥"**

ಎಂದು ಹೇಳಿದಂತೆ ಪ್ರತಿ ದ್ವಾದಶೀದಿನದಂದು ದೇವರಿಗೆ ಕ್ಷೀರದಿಂದ ಅಭಿಷೇಕವನ್ನು ಮಾಡಿದರೆ ಮಹಾಪಾತಕಗಳು ನಾಶವಾಗುತ್ತವೆ.

**102. ಪ್ರತಿವರ್ಷ ಕೆಲವೊಂದು ದಿನಗಳಲ್ಲಿ ತಪ್ಪದಲೇ ದೇವರಿಗೆ ಹಾಲು ಮುಂತಾದವುಗಳಿಂದ ಅಭಿಷೇಕವನ್ನು ಮಾಡಬೇಕೆಂದು ಕೆಲವರು ಹೇಳುತ್ತಾರೆ. ಆ ದಿನಗಳು ಯಾವುವು?**

ಉ. ಕೃ.ಸ್ಮೃ. ಆ. ಪ್ರ. ಪುಟ ೨೭೨

"ಪೌರ್ಣಮಾಸ್ಯಾಂ-ಅಮಾವಾಸ್ಯಾಂ-ಅಯನೇ-ವಿಷುವೇ ತಥಾ। ವೈಧೃತೌ ಚ - ವ್ಯತೀಪಾತೇ - ಪುಷ್ಯಾರ್ಕ್ಷೇ-ಶ್ರವಣೇ ತಥಾ। ದಧಿಕ್ಷೀರಘೃತಾದ್ಯೈರ್ವಾ ತಥಾ ಪಂಚಾಮೃತೇನ ಚ । ಸಕೃಚ್ಚ ಸ್ನಾಪನಂ ವಿಷ್ಣೋಃ ಕೃತ್ವಾ ಮುಕ್ತಿಮವಾಪ್ನುಯಾತ್ । ಕ್ಷೀರೇಣ ಸ್ನಾಪನಂ ವಿಷ್ಣೋಃ ಕೃತ್ವಾ ಮುಕ್ತಿಮವಾಪ್ನುಯಾತ್ । ಕ್ಷೀರೇಣ ಸ್ನಾಪನಂ ವಿಷ್ಣೋಃ ಕ್ರಿಯತೇ ಪಿತೃಕಾರಣಾತ್ । ಕಲ್ಪಕೋಟಿದಿವಂ ಪ್ರಾಪ್ಯ ಮುಕ್ತಿಂ ಯಾಂತಿ ಪಿತಾಮಹಾಃ"।

ಎಂಬುದಾಗಿ ಹೇಳಿದಂತೆ ಪ್ರತಿ ಪೂರ್ಣಿಮೆದಿನದಂದೂ - ಪ್ರತಿ ಅಮಾವಾಸ್ಯೆ ದಿನದಂದೂ - ಪ್ರತಿವರ್ಷ ಉತ್ತರಾಯಣ ಸಂಕ್ರಮಣದಿನದಂದೂ - ದಕ್ಷಿಣಾಯನ ಸಂಕ್ರಮಣ ದಿನದಂದೂ - ವಿಷುವಸಂಕ್ರಮಣಗಳೆಂದು ಪ್ರಸಿದ್ಧವಾದ ತುಲಾಸಂಕ್ರಮಣ ಮತ್ತು ಮೇಷ ಸಂಕ್ರಮಣದಿನಗಳಲ್ಲೂ - ಪ್ರತಿ ತಿಂಗಳು ವೈಧೃತೀಯೋಗವಿರುವ ದಿನ ದಂದೂ - ವ್ಯತೀಪಾತಯೋಗವಿರುವ ದಿನದಂದೂ - ಪುಷ್ಯಾನಕ್ಷತ್ರ ವಿರುವ ದಿನದಂದೂ ಮತ್ತು ಶ್ರವಣಾನಕ್ಷತ್ರವಿರುವ ದಿನದಂದೂ ಭಗವಂತನಿಗೆ ಪಂಚಾಮೃತಾಭಿಷೇಕವನ್ನು ಮಾಡಬೇಕು.

**103. ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡುವಾಗ ಹಾಲಿನ ವ್ರತವಿರುವಾಗ, ಹಾಲಿನ ಬದಲು ಯಾವುದರಿಂದ ಅಭಿಷೇಕ ಮಾಡಬೇಕು? ಇದರಂತೆ ಮೊಸರಿನ ವ್ರತಕಾಲದಲ್ಲಿ ಮೊಸರಿನ ಬದಲು ಏನನ್ನು ಉಪಯೋಗಿಸಬೇಕು?**

ಉ. ಕೆಲವರು ಕ್ಷೀರವ್ರತಕಾಲದಲ್ಲಿ ಹಾಲಿನ ಬದಲು ಕಲ್ಲುಸಕ್ಕರೆ ನೀರನ್ನು ಅಥವಾ ಸಕ್ಕರೆ ನೀರನ್ನು ಉಪಯೋಗಿಸುವದುಂಟು ಅಥವಾ,

ಕೃ.ಸ್ಮೃ.ಆ.ಪ್ರ. ಪುಟ ೩೮ - ಮಾಸದೇವತಾ ನೈವೇದ್ಯಾನಿ ಸ ಏವ ಆಹ :- " ನವನೀತಂ ದಧಿಕ್ಷೀರಂ ಘನೀಭೂತಂ ಘೃತಂ ತಥಾ । ಅನಿರುದ್ಧಾದಿಮೂರ್ತೀನಾಂ ಚತಸೃಣಾಂ ಕ್ರಮಾತ್ ಪ್ರಿಯಮ್ । ನಾರಾಯಣಸ್ಯ ಚತ್ವಾರಿ ಸರ್ವೇಷಾಂ ಶರ್ಕರಾಪಿ ಚ । ಪ್ರಿಯಂ ಮಾಸಾಧಿಪಸ್ಯಾಪಿ ತತ್ತನ್ಮೂರ್ತಿಪ್ರಿಯಂ ಹಿ ತತ್ । ನಭಸ್ಯೇ ದಧಿ ನೋ ದದ್ಯಾತ್ ನ ದದ್ಯಾತ್ ಕ್ಷೀರಮಾಶ್ವಿನೇ । ಕ್ಷೀರ ಸ್ಥಾನೇ ಘೃತಂ ದದ್ಯಾತ್ ದಧಿಸ್ಥಾನೇ ಘೃತಂ ಪಯಃ । ಸರ್ವದೈವ ಘೃತಂ ದದ್ಯಾತ್ ಸತಿ ಕ್ಷೀರಾದಿಕೇऽಪಿ ಚ । ಸರ್ವಸಾರಂ ಘೃತಂ ಪ್ರೋಕ್ತಂ ದೇವಾನಾಂ ಪರಮಂ ಹವಿಃ"

ಎಂಬುದಾಗಿ ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ ಕಾಲನಿರ್ಣಯ ಪ್ರಕರಣದಲ್ಲಿ ಉದಾಹರಿಸಿದ ವರಾಹಪುರಾಣವಚನದ ಪ್ರಕಾರ, ಹಾಲಿನವ್ರತ ಕಾಲದಲ್ಲಿ ಹಾಲಿನ ಬದಲು ತುಪ್ಪವನ್ನು ಉಪಯೋಗಿಸಬಹುದೆಂದು ತೋರುತ್ತದೆ. ಹಾಲಿನ ಸ್ಥಾನದಲ್ಲಿ ತುಪ್ಪವನ್ನು ಉಪಯೋಗಿಸಿದರೂ, ಮೊಸರಿನಿಂದ ಅಭಿಷೇಕವನ್ನು ಮಾಡಿದ ಮೇಲೆ ಘೃತಾಭಿಷೇಕವು ಪ್ರತ್ಯೇಕವಾಗಿ ಇದ್ದೇ ಇರುತ್ತದೆ. ಇದರಂತೆ " ಏವಂ ದಧಿವ್ರತೇ ತಕ್ರಾದೇಃ ನ ವರ್ಜನಮ್" ಎಂಬುದಾಗಿ ಹೇಳಿರುವುದರಿಂದ ಮೊಸರಿನ ವ್ರತವಿರುವಾಗ, ಮೊಸರಿನ ಬದಲು ಮಜ್ಜಿಗೆಯನ್ನು ಉಪಯೋಗಿಸಬಹುದು ಅಥವಾ ಈ ಮೇಲೆ ಉದಾಹರಿಸಿರುವ ವರಾಹಪುರಾಣವಚನದ ಪ್ರಕಾರ ಮೊಸರಿನವ್ರತವಿರುವಾಗ ಮೊಸರಿನ ಸ್ಥಾನದಲ್ಲಿ ತುಪ್ಪ ಮತ್ತು ಹಾಲನ್ನು ಉಪಯೋಗಿಸಬಹುದು. ಮೊಸರಿನ ಸ್ಥಾನದಲ್ಲಿ ತುಪ್ಪ ಮತ್ತು ಹಾಲನ್ನು ಉಪಯೋಗಿಸಿದರೂ, ಮೊದಲು ಕ್ಷೀರದಿಂದ ಅಭಿಷೇಕವು ಮತ್ತು ಜೇನುತುಪ್ಪದ ಅಭಿಷೇಕಕ್ಕಿಂತಲೂ ಅವ್ಯವಹಿತಪೂರ್ವದಲ್ಲಿ ತುಪ್ಪದಿಂದ ಅಭಿಷೇಕವು ಪ್ರತ್ಯೇಕವಾಗಿ ಇದ್ದೇ ಇರುತ್ತದೆ.

**104. ದೇವರಿಗೆ ಕೇವಲ ಕ್ಷೀರಾಭಿಷೇಕವನ್ನು ಮಾಡುವವರು, ಕ್ಷೀರವ್ರತಕಾಲದಲ್ಲಿ**

**ಏನು ಮಾಡಬೇಕು?**

ಕೇವಲ ಕ್ಷೀರಾಭಿಷೇಕವನ್ನು ಮಾಡುವವರು, ಕ್ಷೀರವ್ರತವಿರುವಾಗ, ಸಕ್ಕರೆಕರಿಗದ ನೀರಿನಿಂದಾಗಲಿ ಅಥವಾ ಕಲ್ಲುಸಕ್ಕರೆಕರಗಿದ ನೀರಿನಿಂದಾಗಲಿ ಅಭಿಷೇಕವನ್ನು ಮಾಡಬೇಕು.

**105. "ಪಂಚಾಮೃತಾಭಿಷೇಕಃ" ಮತ್ತು "ಫಲಪಂಚಾಮೃತಾಭಿಷೇಕಃ ಎಂಬುವಲ್ಲಿ ವಿಗ್ರಹ ಹೇಗೆ?**

ಪಂಚ ಅಮೃತಾನಿ ಯಸ್ಮಿನ್ (ಅಭಿಷೇಕೇ) ಸಃ= ಪಂಚಾಮೃತಃ । ಪಂಚಾಮೃತಶ್ಚಾಸೌ ಅಭಿಷೇಕಶ್ಚ=ಪಂಚಾಮೃತಾಭಿಷೇಕಃ । ಎಂದಾಗಲೀ ಅಥವಾ ಪಂಚ ಚ ತಾನಿ ಅಮೃತಾನಿ ಚ = ಪಂಚಾಮೃತಾನಿ । ಪಂಚಾಮೃತೈಃ ಅಭಿಷೇಕಃ= ಪಂಚಾಮೃತಾಭಿಷೇಕಃ ಎಂದಾಗಲೀ ವಿಗ್ರಹ ಮಾಡಬಹುದು. ಈ ಮೇಲೆ ಹೇಳಿದಂತೆ ''ಪಂಚಾಮೃತಾಭಿಷೇಕಃ'' ಎಂಬುವಲ್ಲಿ ವಿಗ್ರಹ ಮಾಡಿದ ಮೇಲೆ, ಫಲೇನ ಸಹಿತಃ ಪಂಚಾಮೃತಾಭಿಷೇಕಃ =ಫಲಪಂಚಾಮೃತಾಭಿಷೇಕಃ। ಎಂದು ವಿಗ್ರಹವನ್ನು ಮಾಡಬಹುದು ಅಥವಾ ಪಂಚ ಚ ಅಮೃತಾನಿ ಚ = ಪಂಚಾಮೃತಾನಿ । ಫಲ ಸಹಿತಾನಿ ಪಂಚಾಮೃತಾನಿ= ಫಲಪಂಚಾಮೃತಾನಿ । ಫಲ ಪಂಚಾಮೃತೈಃ ಅಭಿಷೇಕಃ =ಫಲಪಂಚಾಮೃತಾಭಿಷೇಕಃ । ಎಂಬುದಾಗಿಯೂ ''ಫಲಪಂಚಾ ಮೃತಾಭಿಷೇಕಃ'' ಎಂಬುವಲ್ಲಿ ವಿಗ್ರಹವನ್ನು ಮಾಡಬಹುದು.

**106. ಕೇವಲ ಮಧುಅಭಿಷೇಕದ ಮಹತ್ವವೇನು?**

ನಮಗೆ ಅತ್ಯಂತ ಪ್ರಿಯರಾದವರಿಗೆ ನಾವು ನಮ್ಮ ಅತ್ಯಂತ ಮೆಚ್ಚಿನ ಪದಾರ್ಥವನ್ನು ಕೊಡುತ್ತೇವೆ. ಇದು ಲೋಕದಲ್ಲಿ ಕಂಡು ಬಂದಿದೆ. ಸುಖವು ನಮ್ಮೆಲ್ಲರಿಗೂ ಅತ್ಯಂತ ಮೆಚ್ಚಿನದು. ಸಿಹಿಯೇ ಸುಖದ ಸಂಕೇತ. ಸಿಹಿ ಮಧುವೇ ಸುಖದ ಹಿರಿಯಸಂಕೇತ. ಕಾರಣ ಭಗವಂತನನ್ನು ಹೆಚ್ಚಾಗಿ ಪ್ರೀತಿಸುವವನು ಭಗವಂತನಿಗೆ ತನ್ನ ಸುಖವನ್ನು ಅರ್ಪಿಸುತ್ತಾನೆ. ದೇವರಿಗೆ ಮಧು ಸಮರ್ಪಣೆಯು ಇದಕ್ಕೆ ಪ್ರತೀಕ. ಭಗವಂತನನ್ನು ಯಾರು ಪ್ರೀತಿ

ಸುತ್ತಾರೋ ಅವರಿಗೆ ಇಡೀ ಜಗತ್ತೇ ಸುಖದಾಯಕವಾಗಿರುತ್ತದೆ. ಇದರಿಂದ ಕೇವಲ ಮಧು ಅಭಿಷೇಕದ ಮಹತ್ವವು ನಮಗೆ ಸ್ಪಷ್ಟವಾಗಿ ತಿಳಿದು ಬರುತ್ತದೆ.

ಇನ್ನು "ಕ್ಷೀರಾದ್ದಶಗುಣಂ ದಧ್ನಃ ಘೃತಂ ಚೈವ ಶತೋತ್ತರಮ್। ಘೃತಾತ್ ಶತಗುಣಂ ಕ್ಷೌದ್ರಮ್"। ಎಂಬೀ ಮುಂತಾದ ಪ್ರಮಾಣದಲ್ಲಿ, ಭಗವಂತನಿಗೆ ತುಪ್ಪದಿಂದ ಅಭಿಷೇಕವನ್ನು ಮಾಡುವುದರಿಂದ ಬರುವ ಫಲಕ್ಕಿಂತಲೂ ನೂರುಪಟ್ಟು ಹೆಚ್ಚಿನ ಫಲವು ಮಧುಅಭಿಷೇಕದಿಂದ ಬರುತ್ತದೆ ಎಂದು ಹೇಳಲಾಗಿದೆ. ಇದರಿಂದಲೂ ಕೇವಲ ಮಧುಅಭಿಷೇಕದ ಮಹತ್ವವು ಸ್ಪಷ್ಟವಾಗಿ ತಿಳಿಯುತ್ತದೆ.

**107. ಶ್ರಾದ್ಧದಲ್ಲಿ ಪೂರ್ವಭೋಕ್ತೃ ಬ್ರಾಹ್ಮಣರಿಗೆ ಎಲೆಯ ಮೇಲೆ ಪಂಚಾಮೃತವನ್ನು ಬಡಿಸಬಹುದಾ?**

ಉ. ಶ್ರಾದ್ಧದಲ್ಲಿ ಪೂರ್ವಭೋಕ್ತೃ ಬ್ರಾಹ್ಮಣರಿಗೆ (ಎಲೆಯುಮೇಲೆ) ಪಂಚಾಮೃತವನ್ನು ಬಡಿಸುವ ಸಂಪ್ರದಾಯವಿಲ್ಲ.

**108. ಪ್ರಾಚೀನಕಾಲದಿಂದಲೂ ಪಂಚಾಮೃತಾಭಿಷೇಕಕ್ಕೆ ಉಪಯೋಗಿಸುತ್ತಾ ಬಂದಿರುವ ಸಕ್ಕರೆಯು ಯಾವುದು?**

ಉ. ಬೂರಾ ಸಕ್ಕರೆ

**109. ಪಂಚಾಮೃತಾಭಿಷೇಕಕ್ಕೆ ಕ್ಷೀರವ್ರತಕಾಲದಲ್ಲಿ ಹಾಲು ಬರುವುದಿಲ್ಲ. ಇದರಂತೆ ದಧಿವ್ರತ ಕಾಲದಲ್ಲಿ ಮೊಸರು ಬರುವುದಿಲ್ಲ. ಇದರಂತೆ ಶಾಕವ್ರತ ಕಾಲದಲ್ಲಿ ಬಾಳೇಹಣ್ಣು ಬರುವುದಿಲ್ಲ. ಈ ಪದಾರ್ಥಗಳ ಬದಲು ಯಾವ ಪದಾರ್ಥವನ್ನು ನಾವು ಉಪಯೋಗಿಸುತ್ತೇವೋ, ಆ ಪದಾರ್ಥಗಳಲ್ಲಿ ಸ್ಥಾನಿಯ ಅಭಿಮಾನಿದೇವತೆಯನ್ನೇ ಆವಾಹನೆ ಮಾಡಬೇಕೋ? ಅಥವಾ ಆದೇಶದ ಅಭಿಮಾನಿದೇವತೆಗಳನ್ನು ಆವಾಹನೆ ಮಾಡಬೇಕೋ?**

ಉ. ಆದೇಶದ ಅಭಿಮಾನಿದೇವತೆಗಳನ್ನು ಆವಾಹನೆ ಮಾಡಬೇಕು.

**110. ಹಾಲು-ಮೊಸರು-ತುಪ್ಪ-ಜೇನುತುಪ್ಪ-ಸಕ್ಕರೆ ಮತ್ತು ಬಾಳೇಹಣ್ಣು ಮುಂತಾದ ಹಣ್ಣುಗಳು ಹೀಗೆ ಐದು ಪದಾರ್ಥಗಳಕ್ಕಿಂತಲೂ ಹೆಚ್ಚಿನ ಪದಾರ್ಥಗಳಿಂದ ದೇವರಿಗೆ ಅಭಿಷೇಕವನ್ನು ಮಾಡಿದರೂ,**

**ಪಂಚಾಮೃತಾಭಿಷೇಕವೆಂದು ಕರೆಯಲು ಕಾರಣವೇನು?**

ಉ. ಹಾಲು-ಮೊಸರು-ತುಪ್ಪ-ಜೇನುತುಪ್ಪ ಮತ್ತು ಸಕ್ಕರೆ ಈ ಐದು ಪದಾರ್ಥಗಳಿಗೇ ಮುಖ್ಯವಾಗಿ ಪಂಚಾಮೃತಗಳೆಂದು ಹೆಸರು. ಈ ಐದು ಪದಾರ್ಥಗಳಿಂದ ಮಾಡುವ ಅಭಿಷೇಕವೇ ಪಂಚಾಮೃತಾಭಿಷೇಕ. ಈ ಐದು ಪದಾರ್ಥಗಳ ಜೊತೆಯಲ್ಲಿ ಫಲವೆಂಬ ರೂಪದಿಂದ ಬಾಳೇಹಣ್ಣು ಮುಂತಾದವುಗಳಿಂದಲೂ ಅಭಿಷೇಕವನ್ನು ಮಾಡತ್ತೇವೆ. ಇದು ಫಲಾಭಿಷೇಕ

**111. ಶ್ರೀಹರಿ-ವಾಯು ಗುರುಗಳಿಗೆ ಪಂಚಾಮೃತಾಭಿಷೇಕವನ್ನು ಮಾಡಿದ ಮೇಲೆ ಪ್ರಸಾದರೂಪದಲ್ಲಿ ಕೊಡುವುದು ಪಂಚಾಮೃತವೋ? ಅಥವಾ ಫಲಪಂಚಾಮೃತವೋ?**

ಉ. ಶ್ರೀಹರಿ ಕೊಡುವುದು ಫಲಸಹಿತ ಪಂಚಾಮೃತ, ಆದರೆ ಈ ಮೇಲೆ ಹೇಳಿದಂತೆ ಹಾಲು-ಮೊಸರು-ತುಪ್ಪ-ಜೇನುತಪ್ಪ ಮತ್ತು ಸಕ್ಕರೆ ಈ ಐದು ಪದಾರ್ಥಗಳಿಗೇ ಮುಖ್ಯವಾಗಿ ಪಂಚಾಮೃತಗಳೆಂದು ಪ್ರಸಿದ್ಧಿಯಿದೆ. ಇದರ ಹಿನ್ನೆಲೆಯಲ್ಲಿ ಜನರಿಗೆ ಯದ್ಯಪಿ ಫಲಸಹಿತ ಪಂಚಾಮೃತವನ್ನು ಕೊಟ್ಟರೂ. ಪಂಚಾಮೃತವೆಂದೇ ವ್ಯವಹರಿಸಲಾಗುತ್ತದೆ.

**112. ದೇವರಿಗೆ ಹಾಲು ಮುಂತಾದ ಪಂಚಾಮೃತಗಳಿಂದ ಅಭಿಷೇಕವನ್ನು ಮಾಡಿದ ಮೇಲೆ, ಫಲಾಭಿಷೇಕದ ರೂಪದಲ್ಲಿ ಬಾಳೇಹಣ್ಣಿನಿಂದ ಅಭಿಷೇಕವನ್ನು ಮಾಡುವಂತೆ ದ್ರಾಕ್ಷಿಗೋಡಂಬಿ ಮುಂತಾದವು ಗಳಿಂದಲೂ ಅಭಿಷೇಕವನ್ನು ಮಾಡುತ್ತೇವೆ. ದ್ರಾಕ್ಷಿ-ಗೋಡಂಬಿ ಮುಂತಾದವುಗಳು ಹೇಗೆ ಫಲವಾಗುತ್ತವೆ?**

ಉ. ''ಇಕ್ಷುರ್ವಿಕಾರಾಸ್ತಸ್ಯ ಸ್ಯುಃ ಯಾವಂತಃ ಕೇವಲಸ್ಯ ಚ । ಖರ್ಜೂರಂ ನಾರಿಕೇಲಂ ಚ ಪ್ರಿಯಾಲಪನಸಾದಿಕಮ್॥ ಆಮ್ರಂ ಚ ಕದಲೀ ದ್ರಾಕ್ಷಾ ಕ್ಷೀರಂ ದಧಿ ಘೃತಂ ತಥಾ। ಅನಿಷಿದ್ಧಾನಿ ಮೂಲಾನಿ ತಥಾ ಕಂದಾದಿಕಂ ಚ ಯತ್। ವಿನೋದಕೇನ ಯತ್ಪಕ್ವಂ ಧಾನ್ಯಂ ಯಚ್ಚ ಘೃತಾದಿಕಮ್। ಏತಾನಿ ಫಲಸಂಜ್ಞಾನಿ......'' ಎಂಬುದಾಗಿ ಹೇಳಿದಂತೆ ಕಬ್ಬು-ಕಬ್ಬಿನ ವಿಕಾರಗಳಾದ ಬೆಲ್ಲ- ಸಕ್ಕರೆ-ಕಲ್ಲುಸಕ್ಕರೆ ಮುಂತಾದವುಗಳು - ಖರ್ಜೂರ ಅಂದರೆ ಉತ್ತತ್ತಿ-ತೆಂಗಿನಕಾಯಿ-ಮೊರಟೆಹಣ್ಣು-ಹಲಸಿನ ಹಣ್ಣು ಮೊದಲಾದವು

ಗಳು-ಮಾವಿನಹಣ್ಣು-ಬಾಳೇಹಣ್ಣು-ದ್ರಾಕ್ಷಿ-ಹಾಲು- ಮೊಸರು-ತುಪ್ಪ-ನಿಷಿದ್ಧವಲ್ಲದ ಗೆಡ್ಡೆ ಗೆಣಸುಗಳು-ನೀರುಸೇರಿಸದಲೇ ಪಕ್ವವಾದ ಧಾನ್ಯ (ಹುರಿಗಡಲೆಹಿಟ್ಟು) ಮುಂತಾದವುಗಳು, ಇವುಗಳೆಲ್ಲವೂ ಫಲಸಂಜ್ಞೆವುಳ್ಳದ್ದಾಗಿ ಫಲದ ವ್ಯಾಪ್ತಿಯೊಳಗೆ ಬರುತ್ತವೆ. ಆದ್ದರಿಂದ ದ್ರಾಕ್ಷಿ ಮುಂತಾದವುಗಳು ಫಲವೇ ಆಗಿರುತ್ತವೆ.

**113. ಶ್ರೀರಾಯರ ಮಠದಲ್ಲಿ ಶ್ರೀರಾಮನವಮೀ ಮಹಾಭಿಷೇಕದ ದಿನದಂದೂ ಮತ್ತು ದೀಪಾವಳೀ ಮಹಾಭಿಷೇಕದ ದಿನದಂದೂ, ಹಾಲು, ಮುಂತಾದ ಒಂದೊಂದು ಅಮೃತದಿಂದಲೂ ಅಭಿಷೇಕವನ್ನು ಮಾಡಿದ ಮೇಲೆ,ಮೂಲರಾಮದೇವರೇ ಮೊದಲಾದ ಪ್ರತಿಮಗಳಿಗೆ ತುಳಸೀ ಮತ್ತು ಹೂವು ಏರಿಸಲಾಗುತ್ತದೆ. ಇದಕ್ಕೆ ಪ್ರಮಾಣವೇನು?**

ಕೃ.ಸ್ಮ. ಆ.ಪು. ಪುಟ ೨೪೫ ಪಂಕ್ತಿ ೬-೯

ಉ. ತತ್ಕ್ರಮಃ :- ಪೂರ್ವಮರ್ಚಿತ ಶಂಖೋದಕಮಭಿಷಿಚ್ಯ,ಪ್ರಾಕ್ಪೂಜಿತ ಕ್ಷೀರೇಣ ಶಂಖಂ ಸಂಪೂರ್ಯ, ಆಪ್ಯಾಯಸ್ವೇತಿ ಮಂತ್ರೇಣ ದೇವಸ್ಯ ಶಿರಸ್ಯಭಿಷಿಚ್ಯ, ಗಂಧೋದಕಶುದ್ಧೋದಕೇನೈವ ದಧ್ಯಾದಿದ್ರವ್ಯ ಚತುಷ್ಟಯೇ ತತ್ತದ್ವೈ ದಿಕಮಂತ್ರೇಣ ಸ ದೇವಂ ಸ್ನಾಪಯೇತ್।

ಆ) ಅರ್ಘ್ಯಂ ಪಾದ್ಯಂ ಚಾಚಮನಂ ಮಧುಪರ್ಕಂ ತಥೈವ ಚ । ಪುನರಾಚಮನಂ ಸ್ನಾನಂ ವಸನಂ ಭೂಷಣಂ ತಥಾ । ಉಪವೀತಾಸನೇ ಗಂಧಪುಷ್ಪೇ ವೈ ಧೂಪದೀಪಕೇ। ನೈವೇದ್ಯಂ ನಮನಂ ಚೇತಿ ಉಪಚಾರಾಸ್ತು ಷೋಡಶ । ದೀಪಶಬ್ದೇನ ತಯ್ಯೈವ (ಶಕ್ತ್ಯೈವ) ಮಹಾನೀರಾಜನಸ್ಯಾಪಿ (ಲಾಭಃ) ॥ ಮೇಲೆ ಕಾಣಿಸಿದ ಪ್ರಮಾಣದಲ್ಲಿ ಹಾಲು ಮುಂತಾದ ಒಂದೊಂದು ಅಮೃತದಿಂದಲೂ ಅಭಿಷೇಕವನ್ನು ಮಾಡಿದ ಮೇಲೆ, ದೇವರಿಗೆ ವಸ್ತ್ರಾದಿ ನೀರಾಜನಾಂತ ಉಪಚಾರಗಳನ್ನು ಮಾಡಬೇಕೆಂದು ಹೇಳಿರುವುದರಿಂದಲೂ, ತುಳಸೀ ಮತ್ತು ಪುಷ್ಪಗಳು, ವಸ್ತ್ರಾದಿ ನೀರಾಜನಾಂತೋಪಚಾರಗಳಲ್ಲೇ ಸೇರುತ್ತವೆಯಾದ್ದರಿಂದಲೂ, ಹಾಲು ಮುಂತಾದ ಒಂದೊಂದು ಅಮೃತದಿಂದಲೂ ಅಭಿಷೇಕವನ್ನು ಮಾಡಿದ ಮೇಲೆ ಶ್ರೀಮೂಲರಾಮದೇವರೇ ಮೊದಲಾದ ಪ್ರತಿಮೆಗಳಿಗೆ ತುಳಸೀ ಮತ್ತು ಹೂವುಗಳನ್ನು ಏರಿಸಲಾಗುತ್ತದೆ.

**114. ಶ್ರೀರಾಯರೇ ಮೊದಲಾದ ಬೃಂದಾವನಗಳಿಗೆ ಪಂಚಾಮೃತಾಭಿಷೇಕ ವನ್ನು ಮಾಡಿದ ಮೇಲೆ ಹೂವಿನ ಹಾರವನ್ನು ಹಾಕುವುದು ಏಕೆ? ಈ ವಿಷಯಕ್ಕೆ ಪ್ರಮಾಣವೇನು?**

ಉ. ಈ ಹಿಂದಿನ ಪ್ರಶ್ನೆಗೆ ಕೊಟ್ಟಿರುವ ಉತ್ತರದ ಪ್ರಕಾರ, ಹಾಲು ಮುಂತಾದ ಅಮೃತಗಳಿಂದ ಅಭಿಷೇಕವನ್ನು ಮಾಡಿದ ಮೇಲೆ, ದೇವರಿಗೆ ಹೂವನ್ನು ಏರಿಸಬೇಕು. ಶ್ರೀರಾಯರೇ ಮೊದಲಾದ ಗುರುಗಳಿಗೆ (ಗುರುಗಳ ಬೃಂದಾವನಗಳಿಗೆ) ಪಂಚಾಮೃತಾಭಿಷೇಕವನ್ನು ಅಂತರ್ಯಾಮಿ ವಿವಕ್ಷಾದಿಂದ ಮಾಡುತ್ತೇವೆ. ಆದ್ದರಿಂದ ಗುರುಗಳ ಬೃಂದಾವನಗಳಿಗೆ ಪಂಚಾಮೃತಾಭಿಷೇಕಮಾಡಿದ ಮೇಲೂ ಪುಷ್ಪವನ್ನು ಏರಿಸಬೇಕು. ಅದರಲ್ಲೂ "ಅಬಂಧೇಭ್ಯಃ ಪ್ರಸೂನೇಭ್ಯಃ ಬದ್ಧಮಾಲಾ ಪ್ರಶಸ್ಯತೇ" ಅಂದರೆ ಬಿಡಿಹೂವುಗಳಕ್ಕಿಂತಲೂ ಕಟ್ಟಿದ ಪುಷ್ಪಗಳ ಮಾಲೆಯು ಶ್ರೇಷ್ಠವಾದದ್ದು ಎಂದು ಹೇಳಿರುವುದರಿಂದ, ಶ್ರೀರಾಯರೇ ಮೊದಲಾದ ಗುರುಗಳ ಬೃಂದಾವನಗಳಿಗೆ ಹಾಲು ಮುಂತಾದ ಅಮೃತಗಳಿಂದ ಅಭಿಷೇಕವನ್ನು ಮಾಡಿದ ಮೇಲೆ ಪುಷ್ಪದ ಮಾಲೆಯನ್ನು (ಹೂವಿನ ಹಾರವನ್ನು) ಹಾಕಲಾಗುತ್ತದೆ.

**115. ಫಲಪಂಚಾಮೃತವೆಂದರೇನು?**

ಉ. ಫಲರೂಪದಲ್ಲಿರುವ ಮತ್ತು ಒಟ್ಟಿಗೆ ಸೇರಿರುವ ಬಾಳೇಹಣ್ಣೇ ಮೊದಲಾದ ಐದು ಅಮೃತಗಳೇ ಫಲಪಂಚಾಮೃತ. ಈ ಫಲಪಂಚಾಮೃತದಿಂದ ಶ್ರೀಹರಿವಾಯುಗುರುಗಳಿಗೆ ಅಭಿಷೇಕವನ್ನು ಮಾಡಿದ ಮೇಲೆ ಪ್ರಸಾದರೂಪದಲ್ಲಿ ಒಂದು ದೊನ್ನೆಯಲ್ಲಿ ಜನರಿಗೆ ಫಲಪಂಚಾಮೃತವನ್ನು ಕೊಡುವ ಸಂಪ್ರದಾಯವು ಈಗಲೂ ಇದೆ.

**116. ದೇವರಿಗೆ ಪಂಚಾಮೃತಾಭಿಷೇಕವನ್ನು ಮಾಡುವುದಕ್ಕಿಂತ ಪೂರ್ವದಲ್ಲಿ ಹಾಲು ಮುಂತಾದ ಪಂಚ ಅಮೃತಗಳ ಪೂಜೆಯನ್ನು (ಪಂಚಾಮೃತದ್ರವ್ಯ ಪೂಜೆಯನ್ನು) ಯಾವ ರೀತಿಯಾಗಿ ಮಾಡಬೇಕು?**

ಉ. ೧.ಪಂಚಾಮೃತದ್ರವ್ಯಪೂಜಾ:- ಶ್ರೀವಿಷ್ಣುಪೂಜಾಂಗ ಪಂಚಾಮೃತಪೂಜಾಂ ಕರಿಷ್ಯೇ । ಪೂರ್ವೇ ದಧಿ, ದಕ್ಷಿಣೇ ಘೃತಂ, ಪಶ್ಚಿಮೇ ಮಧು, ಉತ್ತರೇ ಶರ್ಕರಾಂ, ವಾಯವ್ಯೇ ಫಲಾನಿ, ಮಧ್ಯೇ ಕ್ಷೀರಂ ನಿಕ್ಷಿಪ್ಯ ಧೇನುಮುದ್ರಾಂ

ಪ್ರದರ್ಶ್ಯ, ಕ್ಷೀರೇ ಗೋವಿಂದಮಾವಾಹಯಾಮಿ। ದಧ್ನಿ ದಧಿವಾಮನಮಾ ವಾಹಯಾಮಿ । ಆಜ್ಯೇ ವಿಷ್ಣುಂ, ಮಧುನಿ ಮಧುಸೂದನಮ್ । ಶರ್ಕರಾಯಾಂ ಅಚ್ಯುತಮ್ । ಫಲೇ ನಾರಾಯಣಂ ಆವಾಹಯಾಮಿ । ಪಂಚಾಮೃತದೇಫತಾಭ್ಯೋ ನಮಃ। ಇತ್ಯಾವಾಹನಾದಿ ಷೋಡಶೋಪಚಾರ ಪೂಜಾಂ ಕುರ್ಯಾತ್।

೨. ಮಧ್ಯೇ ಕ್ಷೀರಂ ತು, ದಧ್ಯಾದಿ ನ್ಯಸೇತ್ ಪೂರ್ವಾದಿಷು ಕ್ರಮಾತ್। ದುಗ್ಧೇ ತು ದೇವೋ ಗೋವಿಂದಃ ದಧಿ ವಾಮನದೈವತಮ್ । ಆಜ್ಯಂ ಚ ವಿಷ್ಣುದೈವತ್ಯಂ ಮಧುನಿ ಮಧುಸೂದನಮ್ । ಶರ್ಕರಾಂ ಚ ಅಚ್ಯುತಂ ವಿದ್ಯಾತ್ ಏತಾಃ ಪಂಚಾಮೃತದೇವತಾಃ ಇತ್ಯನುಸಂಧಾಯ । ಪಂಚಾಮೃತದೇವತಾಭ್ಯಃ ತಾರ್ಕ್ಷ-ಧೇನು-ಶಂಖ-ಚಕ್ರ-ಗದಾ ಪದ್ಮಾಖ್ಯ ಮುದ್ರಾ, ಷಟ್ಕಮಧ್ಯೇ ಜಲಶೋಧನರೂಪ ಪ್ರಯೋಜನಾಭಾವಾತ್, ಪದ್ಮಮುದ್ರಾತಿರಿಕ್ತಾಃ ಪಂಚಮುದ್ರಾಃ ಪೂರ್ವೋಕ್ತ ತತ್ತನ್ಮಂತ್ರೈಃ ಪ್ರದರ್ಶ್ಯ, ತತ್ರ ತುಳಸೀಪುಷ್ಪಾಣಿ ಕ್ಷಿಪ್ತ್ವಾ ಮೂಲೇನ ಅಭಿಮಂತ್ರ್ಯ, ನಮಸ್ಕೃತ್ಯ, ವಿಷ್ಣುಗಾಯತ್ರ್ಯಾ ಅಭಿಮಂತ್ರಯತ॥

೩. ತತಃ ಪಂಚಾಮೃತಸ್ನಾನಾರ್ಥಂ ಪಂಚಪಾತ್ರಾಣಿ ಸ್ಥಾಪಯೇತ್ । ಮಧ್ಯೇ ಕ್ಷೀರಂ ತು, ದಧ್ಯಾದಿ ನ್ಯಸೇತ್ ಪೂರ್ವಾದಿಷು ಕ್ರಮಾತ್। ದುಗ್ಧೇ ತು ದೇವೋ ಗೋವಿಂದಃ ದಧಿವಾಮನದೈವತಮ್। ಆಜ್ಯಂ ತು ವಿಷ್ಣುದೈವತ್ಯಂ ಮಧೌ ಚ ಮಧುಸೂದನಮ್ । ಶರ್ಕರೇ ಚಾಚ್ಯುತಂ ವಿಂದ್ಯಾತ್ ತಾಃ ಪಂಚಾಮೃತದೇವತಾಃ । ಪಂಚಾಮೃತದೇವತಾಭ್ಯಃ ಕಲಶವತ್ ಪಂಚಮುದ್ರಾಃ ಪ್ರದರ್ಶಯೇತ್। ಪಂಚಾಮೃತದೇವತಾಭ್ಯಃ ಗಂಧಪುಷ್ಪತುಳಸೀದಲಾನಿ ನಿಧಾಯ, ಮೂಲೇನ ಅಷ್ಟವಾರಂ ಅಭಿಮಂತ್ರ್ಯ ನಮಸ್ಕೃತ್ಯ ವಿಷ್ಣುಗಾಯತ್ರ್ಯಾ ಅಭಿಮಂತ್ರ್ಯ.

೪. ಶ್ರೀಸುಮತೀಂದ್ರತೀರ್ಥಕೃತ ದೇವಪೂಜಾಪದ್ಧತಿಃ :-

ಪಂಚಾಮೃತಪೂಜಾ:- ಕ್ಷೀರಾಭಿಮಾನೀ ಗೋವಿಂದಃ ದಧ್ನಿ ವಾಮನದೇವತಾ । ನಾರಾಯಣಂ ಘೃತೇ ವಿಂದ್ಯಾತ್ ಮಧೌ ಚ ಮಧುಸೂದನಮ್ । ಶರ್ಕರಾಯಾಂ ಅಚ್ಯುತಂ ಚ ಗಾಯತ್ರ್ಯಾ ವಿಷ್ಣುಸಂಜ್ಞಯಾ । ನಮಃ ಸ್ವಾಹಾ ವಷಡಿತಿ ಸ್ಪೃಷ್ಟ್ವಾ । ಮುದ್ರಾಂ ಪ್ರದರ್ಶಯೇತ್। ಪೂರ್ವೇ ದಧಿ ದಕ್ಷಿಣೇ ಘೃತಂ ಪಶ್ಚಿಮೇ ಮಧು ಉತ್ತರೇ

ಶರ್ಕರಾಂ ವಾಯವ್ಯೇ ಫಲಾನಿ ಮಧ್ಯೇ ಕ್ಷೀರಂ ನಿಕ್ಷಿಪ್ಯ, ಧೇನುಮುದ್ರಾಂ ಪ್ರದರ್ಶ್ಯ, ಕ್ಷೀರೇ ಗೋವಿಂದಮಾವಾಹಯಾಮಿ । ದಧ್ನಿವಾಮನಮಾವಾಹ ಯಾಮಿ। ಘೃತೇ ನಾರಾಯಣಮಾವಾಹಯಾಮಿ। ಮಧೌ ಮಧುಸೂದನ ಮಾವಾಹಯಾಮಿ । ಶರ್ಕರಾಯಾಮಚ್ಯುತಮಾವಾಹಯಾಮಿ । ಫಲೇ ಶ್ರೀವಿಷ್ಣುಮಾವಾಹಯಾಮಿ।ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ। ತನ್ನೋ ವಿಷ್ಣುಃ ಪ್ರಚೋದಯಾತ್। ಪಂಚಾಮೃತ ದೇವತಾಭ್ಯೋ ನಮಃ । ಧ್ಯಾನಾವಾಹನಾದಿ ಷೋಡಶೋಪಚಾರಪೂಜಾಂ ಸಮರ್ಪ ಯಾಮಿ।

೫. ದೇವಪೂಜಾ, ಕನ್ನಡ ಪುಸ್ತಕ :- ... ಫಲೇ ನಾರಾಯಣಸ್ತಥಾ । ಇಕ್ಷುರಸೇಽನಿರುದ್ಧಶ್ಚ ಧ್ಯೇಯಾಃ ಪಂಚಾಮೃತದೇವತಾಃ ಇಕ್ಷುರಸೇ ಅನಿರುದ್ಧಂ ಆವಾಹಯಾಮಿ।.... ತುಳಸೀದಳವನ್ನು ಹಾಕಬೇಕು. ಅಥವಾ ತುಳಸೀದಳವನ್ನು ಕಲಶೋದಕದಲ್ಲಿ ಅದ್ದಿ ಪ್ರೋಕ್ಷಿಸಬೇಕು.... ಪಂಚಾಮೃತದೇವತಾಭ್ಯೋ ನಮಃ ಆವಾಹನಾದಿ ಪಂಚೋಪಚಾರ ಪೂಜಾಃ ಸಮರ್ಪಯಾಮಿ ಎಂದು ಹೇಳಿ, ಕೈಮುಗಿದು, ವಿಷ್ಣುಗಾಯತ್ರಿ ಯಿಂದಲೂ ಅಭಿಮಂತ್ರಿಸಬೇಕು.

೬. ಪಂಚಾಮೃತಪಾತ್ರಪೂಜಾ :- ತತ್ರ ಮಧ್ಯೇ ಸ್ಥಾಪಿತಪಾತ್ರಸ್ಥಕ್ಷೀರೇ ಓಂ ಗೋವಿಂದಾಯ ನಮಃ ಗೋವಿಂದಂ ಆವಾಹಯಾಮಿ। ಪೂರ್ವೇ ಸ್ಥಾಪಿತಪಾತ್ರಸ್ಥ ದಧ್ನಿ ಓಂ ವಾಮನಾಯ ನಮಃ ವಾಮನಂ ಆವಾಹಯಾಮಿ। ದಕ್ಷಿಣೇ ಸ್ಥಾಪಿತ ಪಾತ್ರಸ್ಥಾಜ್ಯೇ ಓಂ ವಿಷ್ಣವೇ ನಮಃ ವಿಷ್ಣುಂ ಆವಾಹಯಾಮಿ। ಪಶ್ಚಿಮೇ ಸ್ಥಾಪಿತ ಪಾತ್ರಸ್ಥ ಮಧುನಿ ಓಂ ಮಧುಸೂದನಾಯ ನಮಃ ಮಧುಸೂದನಂ ಆವಾಹಯಾಮಿ। ಉತ್ತರೇ ಸ್ಥಾಪಿತಪಾತ್ರಸ್ಥಶರ್ಕರಾಯಾಂ ಓಂ ಅಚ್ಯುತಾಯ ನಮಃ ಅಚ್ಯುತಂ ಆವಾಹಯಾಮಿ ಇತ್ಯಾವಾಹ್ಯ, ಕ್ಷೀರಾದಿ ದ್ರವ್ಯ ಪಂಚಕೇ ತಾರ್ಕ್ಷ್ಯ- ಧೇನು- ಶಂಖ-ಚಕ್ರ-ಗದಾಖ್ಯ ಪಂಚಮುದ್ರಾಃ ಪ್ರದರ್ಶ್ಯ, ತುಲಸ್ಯಾದಿಭಿಃ ಪೂಜಯಿತ್ವಾ, ಮೂಲಮಂತ್ರೇಣ ಅಷ್ಟವಾರಂ ಅಭಿಮಂತ್ರ್ಯ, ನಮಸ್ಕುರ್ಯಾತ್। ವಿಷ್ಣುಗಾಯತ್ರ್ಯಾ ಅಭಿಮಂತ್ರಯೇತ್ ಇತ್ಯೇಕೇ। ಸತಿ ಸಂಭವೇ ನಾರೀಕೇಲೋದಕಂ, ಆಮ್ರರಸಂ, ದ್ರಾಕ್ಷಾರಸಂ, ಪೃಥಕ್ಪಾತ್ರೇಷು ನಿಧಾಯ, ನಾರಿಕೇಲೋದಕಪಾತ್ರೇ ಓಂ ಶ್ರಿಯೈ ನಮಃ

ಶ್ರಿಯಮಾವಾಹಯಾಮಿ। ಆಮ್ರರಸಪಾತ್ರೇ ದ್ರಾಕ್ಷಾರಸಪಾತ್ರೇ ಚ ಓಂ ವಿಷ್ಣವೇ ನಮಃ ವಿಷ್ಣುಂ ಆವಾಹಯಾಮಿ। ಇತ್ಯಾವಾಹ್ಯ ತುಲಸ್ಯಾದಿಭಿಃ ಪೂಜಯೇತ್।

೭. ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ - ಆಹ್ನಿಕಪ್ರಕರಣ ಪುಟ ೨೩೬ "ತಂಡುಲೋಪರೀ ಮಧ್ಯೇ ಕ್ಷೀರಪಾತ್ರಂ, ಪ್ರಾಗಾದಿ ದಿಕ್ಷು ದಧ್ಯಾದಿ ಪಾತ್ರಾಣಿ ಸ್ಥಾಪ್ಯ, ಶಂಖಸ್ಥೋದಕಂ ತುಲಸೀದಲೇನ ಗೃಹೀತ್ವಾ, ತಾನಿ ಸಂಪ್ರೋಕ್ಷ್ಯ, ತತ್ತನ್ಮಧ್ಯೇ ತುಲಸೀದಲಾನಿ ನಿಕ್ಷಿಪ್ಯ, ತೇಷಾಂ ಮುಖಂ ಪ್ರತ್ಯೇಕಂ ಸ್ಪೃಶನ್ ವಕ್ಷ್ಯಮಾಣ ಮಂತ್ರಾನ್ ಯಥಾಕ್ರಮೇಣ ಜಪೇತ್। ಆಪ್ಯಾಯಸ್ವೇತಿ ಗೌತಮ ಋಷಿಃ, ಗಾಯತ್ರೀ ಛಂದಃ ಸೋಮೋ ದೇವತಾ । ದಧಿಕ್ರಾವ್ಣ ಇತ್ಯಸ್ಯ ಗೌತಮಪುತ್ರಃ ವಾಮನದೇವ ಋಷಿಃ । ವಿಷ್ಣುರ್ದೇವತಾ । ಅನುಷ್ಟುಪ್ ಛಂದಃ। ಘೃತಂ ಮಿಮಿಕ್ಷೇತಿ ಜಮದಗ್ನಿ ಋಷಿಃ, ಸ್ವಾಹಾಕೃತಿಃ ದೇವತಾ। ತ್ರಿಷ್ಟುಪ್ ಛಂದಃ। ಮಧುವಾತೇತಿ ತ್ರ್ಯರ್ಚಸ್ಯ ರಾಹೂಗಣಪುತ್ರೋ ಗೌತಮ ಋಷಿಃ ವಿಶ್ವೇ ದೇವಾಃ ದೇವತಾಃ ಗಾಯತ್ರೀ ಛಂದಃ । ತಂ ತೇ ವಯಂ ಯಥಾ ಗೋಭಿರಿತ್ಯಸ್ಯ ಪ್ರಗಾಥ ಋಷಿಃ । ಇಂದ್ರೋ ದೇವತಾ । ಗಾಯತ್ರೀ ಛಂದಃ। ಇಕ್ಷುರಸಾಭಾವೇ ಸ್ವಾದುಃ ಪವಸ್ವ ಇತ್ಯೃಚಃ ಭರದ್ವಾಜ ಋಷಿಃ। ಲಿಂಗೋಕ್ತಾ ದೇವತಾ ತ್ರಿಷ್ಟುಪ್‌ಛಂದಃ। ಇತಿ ಪ್ರಾಗುಕ್ತಮಾನಶರ್ಕರಾಂ ಅನೇನ ಮಂತ್ರೇಣ ಅನುಮಂತ್ರ್ಯ, ಕಲಶಪೀಠಪೂಜಾದಿಕಾನ್, ಕಲಶೋಕ್ತದ್ರವ್ಯಾಭಿಮಾನಿದೇವತಾಂತರ್ಯಾಮಿಣಂ ತತ್ರ ಆವಾಹ್ಯ, ಅರ್ಘ್ಯಪಾದ್ಯಾದಿ ನೀರಾಜನಾಂತೋಪ ಚಾರಾನ್ ಕುರ್ಯಾತ್। ಸ್ವಯಂ ಅಶಕ್ತೇಶ್ಚೇತ್ ಅನ್ಯೈರ್ವಾ ಕಾರಯೇತ್।

# ದೀಪ-ಮಂಗಳಾರತಿ

**117. ದೇವರಿಗೆ ದೀಪವನ್ನು ಹಚ್ಚಿಡುವ ಪಾತ್ರೆಗಳು ಯಾವ ಯಾವ ಲೋಹದ್ದು ಶಾಸ್ತ್ರ ಸಮ್ಮತ? ಅವುಗಳ ಫಲವೇನು?**

ಉ. **(ಕೃ.ಸ್ಮ. ಕಾ.ಪ್ರ.ಪು. ೫೮೨)**

**"ಮೃಣ್ಮಯೇನ ತು ಪಾತ್ರೇಣ ಗೋಘೃತೇನ ಸುರಾಧಿಪ ।**
**ದೀಪಂ ದದಾತಿ ಯೋ ಭಕ್ತ್ಯಾ ಜ್ಞಾನೀ ಯೋಗೀ ಸುಖೀ ಭವೇತ್ ॥**
**ಅಯೋಮಯೇನ ಪಾತ್ರೇಣ ದೀಪಮರ್ಪಯತೇ ಹರೇಃ ।**

ಸ ತು ದೀಪಶತೇನೈವ ಫಲಮಾಪ್ನೋತಿ ಪದ್ಮಜ ॥
ಕಾಂಸ್ಯಪಾತ್ರೇಣ ದೀಪೇನ ಪೂಜಾಂ ಯಃ ಕುರುತೇ ನರಃ ।
ತಸ್ಯ ತೇಜಃಸುಸೌಭಾಗ್ಯಂ ವರ್ಧತೇ ಪದ್ಮಸಂಭವ ॥"
"ಯಸ್ತು ತಾಮ್ರಮಯೇ ಪಾತ್ರೇ ದೀಪಂ ದದ್ಯಾಚ್ಚ ಭಕ್ತಿತಃ ।
ಸ ತು ದೀಪಸಹಸ್ರೇಣ ಫಲಮಾಪೋತಿ ಶೋಭನಮ್ ॥
ಬ್ರಹ್ಮನ್ ರಜತಪಾತ್ರೇಷು ಯೋ ದದಾತಿ ಚ ದೀಪಿಕಾಮ್ ।
ಸ ತು ಲಕ್ಷ್ಯಗುಣೋ ಭೂತ್ವಾ ಮಾಂ ಸಮಾಯಾತಿ ನಿತ್ಯದಾ ॥
ಯೋ ವೈ ಸ್ವರ್ಣಮಯೇ ಪಾತ್ರೇ ದೀಪಂ ದಾಸ್ಯತಿ ವಿಷ್ಣವೇ ।
ಅನಂತಗುಣಿತೋ ಭೂತ್ವಾ ಯಾತಿ ಮಾಂ ನಾತ್ರ ಸಂಶಯಃ ॥

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಮಣ್ಣಿನ ಪಾತ್ರೆಯಲ್ಲಿ ದೇವರಿಗೆ ದೀಪವನ್ನು ಹಚ್ಚಿದರೆ ದೀಪವನ್ನು ಹಚ್ಚಿದ ವ್ಯಕ್ತಿಯು ಜ್ಞಾನಿಯು, ಯೋಗಿಯು ಹಾಗು ಸುಖವಂತನು ಆಗುತ್ತಾನೆ.

ಕಬ್ಬಿಣದ ಪತ್ರೆಯಲ್ಲಿ ದೀಪವನ್ನು ಹಚ್ಚುವವನಿಗೆ ಅಂತಹ ಒಂದು ನೂರು ದೀಪಗಳನ್ನು ಹಚ್ಚಿದರೆ ಮಾತ್ರ ಫಲ ಸಿದ್ಧಿಯಾಗುತ್ತದೆ.

ಕಂಚಿನ ಪಾತ್ರೆಯಲ್ಲಿ ದೀಪವನ್ನು ಹಚ್ಚಿದರೆ ತೇಜಸ್ಸು ಮತ್ತು ಉತ್ತಮವಾದ ಸೌಭಾಗ್ಯ ಹೆಚ್ಚುತ್ತದೆ.

ತಾಮ್ರದ ಪಾತ್ರೆಯಲ್ಲಿ ಯಾವನು ದೀಪವನ್ನು ಹಚ್ಚುತ್ತಾನೋ ಅವನು ಒಂದು ಸಾವಿರ ದೀಪಗಳನ್ನು ಹಚ್ಚಿ ಭಗವಂತನಿಗೆ ಸಮರ್ಪಿಸಿದರೆ ಉತ್ತಮವಾದ ಫಲವನ್ನು ಪಡೆಯುತ್ತಾನೆ. ಬೆಳ್ಳಿಯ ಪಾತ್ರೆಯಲ್ಲಿ ಯಾವನು ದೀಪವನ್ನು ಹಚ್ಚುತ್ತಾನೋ ಅವನ ಪುಣ್ಯವು ಲಕ್ಷ್ಯಪಾಲು ಹೆಚ್ಚುತ್ತದೆ. ಇದರಂತೆ ಬಂಗಾರದ ಪಾತ್ರೆಯಲ್ಲಿ ಯಾವನು ದೀಪವನ್ನು ಹಚ್ಚಿ ಶ್ರೀಹರಿಗೆ ಸಮರ್ಪಿಸುತ್ತಾನೋ ಅವನಿಗೆ ಅನಂತ ಫಲವು ಉಂಟಾಗುತ್ತದೆ. ಮತ್ತು ಅವನು ಶ್ರೀಹರಿಯನ್ನೇ ಹೊಂದುತ್ತಾನೆ. ಆದ್ದರಿಂದ ಒಟ್ಟಿನಲ್ಲಿ ಮಣ್ಣಿನ-ಕಬ್ಬಿಣದ-ಕಂಚಿನ-ತಾಮ್ರದ-ಬೆಳ್ಳಿಯ-ಹಾಗೂ ಬಂಗಾರದ ಪಾತ್ರೆಗಳಲ್ಲಿ ಭಗವಂತನಿಗೆ ದೀಪವನ್ನು ಹಚ್ಚಬಹುದು.

**118. ಪ್ರತಿನಿತ್ಯದಲ್ಲೂ, ಅದರಲ್ಲೂ ವಿಶೇಷವಾಗಿ ಕಾರ್ತೀಕ ಮಾಸದಲ್ಲಿ ದೇವರ**

**ಸನ್ನಿಧಿಗಳಲ್ಲಿ ದೀಪವನ್ನು ಹಚ್ಚಿ ಹೇಗೆ ಇಡಬೇಕು?**

ಉ. **(ಕೃ. ಸ್ಮೃ.ಕಾ.ಪ್ರ.ಪು. ೫೮೩)**
**ಸರ್ವತೋಭದ್ರರೂಪೇಣ ಪದ್ಮಾಕಾರೇಣ ವಾ ನ್ಯಸೇತ್।**
**ಮತ್ಸ್ಯಕೂರ್ಮಾದಿರೂಪೇಣ ಸರೋರೂಪೇಣ ವಾ ಸುತ ॥**
**ದ್ವಿತ್ರಿಮಾಲಾಪ್ರಕಾರೇಣ ಯಥಾ ಕೌಶಲಮಂಜಸಾ।**
**ಚಕ್ರಶಂಖಾಬ್ಜರೂಪಾಣಿ ಕೌಶಲಂ ಪೌಷ್ಟಿಕಂ ನ್ಯಸೇತ್ ॥**
**ಯಥಾವಕಾಶಮನ್ಯತ್ರ ಪಂಕ್ತಿದೀಪಾಂಶ್ಚ ವಿನ್ಯಸೇತ್।**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ದೀಪಗಳನ್ನು ಹಚ್ಚಿ ದೇವರ ಸನ್ನಿಧಿಯಲ್ಲಿ ಸರ್ವತೋಭದ್ರಮಂಡಲಾಕಾರದಿಂದಾಗಲೀ, ಅಥವಾ ಪದ್ಮಾಕಾರದಿಂದಾಗಲೀ ಇಡಬೇಕು. ಮತ್ತು ಮತ್ಸ್ಯ-ಕೂರ್ಮ-ವರಾಹಾದಿ ಪರಮಾತ್ಮನ ಅವತಾರ ರೂಪ ಆಕಾರಗಳಿಂದಲೂ ದೀಪಗಳನ್ನು ಇಡಬಹುದು. ಅಥವಾ ಸರೋವರ ರೂಪದಿಂದ ಚೌಕವಾಗಿ ದೀಪಗಳನ್ನು ಇಡಬಹುದು. ಇದರಂತೆ ಉದ್ದಕ್ಕೆ ಹೂಮಾಲೆಯ ಒಂದೆಳೆಯಂತೆ, ಎರಡೆಳೆಯಂತೆ ಅವರವರ ಕಲಾಕೌಶಲಕ್ಕೆ ಅನುಗುಣವಾಗಿ ದೀಪಗಳನ್ನು ಇಡಬೇಕು. ಇದರಂತೆ ಚಕ್ರ-ಶಂಖ ಹಾಗೂ ಕಮಲದ ರೂಪಗಳನ್ನೂ ದೀಪಗಳಿಂದ ರಚಿಸಬಹುದು ಮತ್ತು ಸಾಲು ಸಾಲಾಗಿಯೂ ದೀಪಗಳನ್ನು ಹಚ್ಚಿ ಇಡಬೇಕು .

**119. ವಿಶೇಷವಾಗಿ ಕಾರ್ತಿಕಮಾಸದಲ್ಲಿ ಎಲ್ಲೆಲ್ಲಿ ದೇವರ ಪ್ರೀತ್ಯರ್ಥವಾಗಿ ದೀಪಗಳನ್ನು ಹಚ್ಚಿ ಇಡಬೇಕು?**

ಉ. **(ಕೃ.ಸ್ಮೃ.ಕಾ.ಪ್ರ.ಪು. ೫೮೩-೫೮೪)**
**ಸ್ತಂಭೇ ಚ ಶಿಖರೇ ದೀಪಾಃ ಪ್ರಾಂಗಣೇ ಚತ್ವರೇ ತಥಾ।**
**ವೃಂದಾವನೇ ಧರ್ಮಶಾಲಾವ್ಯಾಖ್ಯಾಧ್ಯಯನಸದ್ಮನಿ ॥**
**ಅಶ್ವತ್ಥೋಪವನೇ ಬ್ರಹ್ಮನ್ ಗುರುಸದ್ಮನಿ ಪರ್ವತೇ।**
**ಪೃಥೂನ್ನತಾಃ ಪಂಚ ದೀಪಾಃ ಶಿಖರೇ ಮೃದಯೋಮಯಾಃ ॥**
**ಏಷು ಸ್ಥಾನೇಷೂಕ್ತಪಾತ್ರಮಲಾಭೇ ಮೃಣ್ಮಯಂ ಭವೇತ್।**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಕಂಬಗಳಲ್ಲಿ, ಮನೆಯ ಅಥವಾ ದೇವಾಲಯಗಳ ಶಿಖರಗಳಲ್ಲಿ, ಅಂಗಳದಲ್ಲಿ, ನಾಲ್ಕು ಬೀದಿಯ ಚೌಕಗಳಲ್ಲಿ, ತುಲಸೀ ವೃಂದಾವನದಲ್ಲಿ, ಧರ್ಮ ಶಾಲೆಯಲ್ಲಿ, ಪುರಾಣ ಪ್ರವಚನ ನಡೆಯುವ ಸಭಾಗೃಹದಲ್ಲಿ ವೇದಾಧ್ಯಯನಾದಿಗಳು ನಡೆಯುವ ಪಾಠಶಾಲೆಗಳಲ್ಲಿ, ಅಶ್ವತ್ಥ ವೃಕ್ಷಗಳಿರುವ ಉಪವನದಲ್ಲಿ, ಗುರುಗಳ ವಾಸಸ್ಥಳವಾದ ಮಠದಲ್ಲಿ ಹಾಗು ಪರ್ವತಗಳಲ್ಲಿ ಭಗವಂತನ ಪ್ರೀತ್ಯರ್ಥವಾಗಿ

ದೀಪಗಳನ್ನು ಹಚ್ಚಿ ಇಡಬೇಕು.

**120. ದೇವರ ದೀಪವನ್ನು ಹಸುವಿನ ತುಪ್ಪದಿಂದ ಹಚ್ಚುವಂತೆ ಮತ್ತಾವುದರಿಂದ ಹಚ್ಚಬಹುದು?**

ಉ. **(ಕೃ.ಸ್ಮೃ.ಕಾ.ಪ್ರ.ಪು. ೫೮೪)**

**ಕರ್ಪೂರಂ ಗೋಘೃತಂ ತೈಲಂ ಕೋಸುಂಭಂ ನಾರಿಕೇರಜಮ್।**
**ಆಜ್ಯಂ ಘೃತಂ ವಾ ಸಂಪಾದ್ಯ ಪುಮಾನೇವಂ ಸ್ವಶಕ್ತಿತಃ॥**
**ಗೋಘೃತೇನ ತು ಸರ್ವೇಷ್ಟಫಲಸಿದ್ಧಿಂ ಲಭೇನ್ನರಃ।**
**ಅಮಂಗಲ್ಯಹರಂ ತೈಲಂ ಕೌಸುಂಭಂ ಕೀರ್ತಿವರ್ಧನಮ್॥**
**ನಾರಿಕೇರಂ ಸೌಖ್ಯದಂ ಚ ಹ್ಯಾಜ್ಯಂ ಭೋಗೈಕಸಾಧನಮ್।**
**ಏರಂಡಂ ಮಾಹಿಷಘೃತಂ ಸರ್ವಥಾ ವರ್ಜಯೇದ್ಬುಧಃ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಹಸುವಿನ ತುಪ್ಪದಿಂದ ದೀಪ ಹಚ್ಚಿದರೆ ಸಮಸ್ತ ಇಷ್ಟ ಪ್ರಾಪ್ತಿಯಾಗುತ್ತದೆ. ಎಳ್ಳೆಣ್ಣೆಯಿಂದ ದೀಪ ಹಚ್ಚಿದರೆ ಅಮಂಗಲ ಪರಿಹಾರವಾಗುತ್ತದೆ. ಕುಸುಬೆಎಣ್ಣೆಯಿಂದ ದೀಪ ಹಚ್ಚಿದರೆ ಕೀರ್ತಿಯು ಹೆಚ್ಚುತ್ತದೆ. ಕೊಬ್ಬರೆಣ್ಣೆಯಿಂದ ದೀಪ ಹಚ್ಚಿದರೆ ಸೌಖ್ಯವು ಹೆಚ್ಚುತ್ತದೆ. ಆಡಿನ ತುಪ್ಪದಿಂದ ದೀಪ ಹಚ್ಚುವುದು ಭೋಗಕ್ಕೆ (ಸುಖಾನುಭವಕ್ಕೆ) ಉತ್ತಮವಾದ ಸಾಧನವು. ಅಂದರೆ ಆಡಿನ ತುಪ್ಪದಿಂದ ದೇವರ ದೀಪ ಹಚ್ಚಿದರೆ ಸುಖವು ಸಿಗುತ್ತದೆ. ಆದರೆ ಹರಳೆಣ್ಣೆ ಮತ್ತು ಎಮ್ಮಿಯ ತುಪ್ಪವನ್ನು ದೇವರ ದೀಪ ಹಚ್ಚಲು ಸರ್ವಥಾ ಉಪಯೋಗಿಸಬಾರದು. ಆದ್ದರಿಂದ ಒಟ್ಟಿನಲ್ಲಿ ಹಸುವಿನ ತುಪ್ಪ ಎಳ್ಳೆಣ್ಣೆ ಕೊಬ್ಬರೆಣ್ಣೆ, ಆಡಿನ ತುಪ್ಪ ಇವುಗಳಿಂದ ದೇವರ ದೀಪವನ್ನು ಹಚ್ಚಬಹುದು.

**121.ಹತ್ತಿಯಿಂದ ಮಾಡಿದ ಬತ್ತಿಯಿಂದ ದೇವರ ದೀಪವನ್ನು ಹಚ್ಚುವಂತೆ ಬೇರೆ ಯಾವ ಬತ್ತಿಗಳಿಂದ ದೇವರ ದೀಪವನ್ನು ಹಚ್ಚಬಹುದು?**

**(ಕೃ.ಸ್ಮೃ.ಕಾ.ಪ್ರ.ಪು. ೫೮೫)**

**ಪಾದ್ಮೇನ ಜ್ವಲಿತಾ ದೀಪ್ತಿಃ ಸಾರ್ವಭೌಮಪ್ರದಾಯಿನೀ।**
**ಸರ್ವೇಷ್ಟದಾಯಿನೀ ನಿತ್ಯಂ ಸರ್ವಾಭೀಷ್ಟಾರ್ಥಸಿದ್ಧಿದಾ॥**
**ಕ್ಷೌಮೇಣ ಜ್ವಲಿತಾ ದೀಪ್ತಿಃ ಷಡೂರ್ಮಿಪರಿಹಾರಿಣೀ।**
**ನಿತ್ಯಯೌವನದಾತ್ರೀ ಸ್ಯಾತ್ ಸರ್ವಾಭೀಷ್ಟಪ್ರದಾಯಿನೀ॥**
**ದಶಾ ನಿರ್ಮಿತಯಾ ವರ್ತ್ಯಾ ಜ್ವಲಿತಾ ದೀಪಿಕಾ ಪರಾ।**

**ಭವೇತ್ಪಾಪಕ್ಷಯಸ್ತಸ್ಯ ಜ್ಞಾನಸೌಭಾಗ್ಯಸಂಪದಃ ॥**
**ಕಾರ್ಪಾಸವರ್ತಿದೀಪೇನ ಪುಣ್ಯಂ ಪಾಪಕ್ಷಯೋ ಭವೇತ್ ।**
**ಏತಾನ್ಸಂಭೂಯ ಯೋ ಮಹ್ಯಂ ದೀಪಂ ಯಚ್ಛತಿ ಮಾನವಃ ।**
**ಮದ್ಭಕ್ತಿಫಲಭಾಕ್ ನಿತ್ಯಂ ಸೋಽಶ್ವಮೇಧಫಲಂ ಲಭೇತ್ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ತಾವರೆ ದಂಟಿನ ನಾರಿನಿಂದ ಬತ್ತಿಮಾಡಿ 'ಉರಿಸಿದರೆ ಸಾರ್ವಭೌಮತ್ವ ಪ್ರಾಪ್ತಿಯಾಗುತ್ತದೆ. ಸಕಲ ಇಷ್ಟಾರ್ಥಗಳನ್ನೂ ಕೊಡುತ್ತದೆ ಹಾಗೂ ಸಕಲಾಭೀಷ್ಟಸಿದ್ಧಿಯಾಗುತ್ತದೆ. ಅಗಸೆ ನಾರಿನಿಂದ ಬತ್ತಿಯನ್ನು ಮಾಡಿ ದೀಪವನ್ನು 'ಉರಿಸಿದರೆ, ಹಸಿವೆ, ನೀರಡಿಕೆ, ಮುಪ್ಪು, ಮೃತ್ಯು, ಶೋಕ ಹಾಗೂ ಮೋಹ ಎಂಬ ಆರು ಜೀವನದ ಧರ್ಮಗಳು ಪರಿಹಾರವಾಗುತ್ತವೆ (೬ ಊರ್ಮಿಗಳು) ಮತ್ತು ನಿತ್ಯದಲ್ಲೂ ಯೌವನ ಪ್ರಾಪ್ತಿಯಾಗುತ್ತದೆ, ಹಾಗೂ ಎಲ್ಲಾ ಭೀಷ್ಟಗಳನ್ನುಂಟುಮಾಡುತ್ತದೆ. ನಾರಿನಿಂದ ಬತ್ತಿಯನ್ನು ಮಾಡಿ ದೀಪವನ್ನು 'ಉರಿಸಿದರೆ ಪಾಪನಾಶ ವಾಗುವುದಲ್ಲದೆ, ಜ್ಞಾನಸೌಭಾಗ್ಯ ಸಂಪತ್ತುಗಳನ್ನು ಕೊಡುತ್ತದೆ. ಹತ್ತಿಯಿಂದ ಬತ್ತಿಯನ್ನು ಮಾಡಿ ದೀಪವನ್ನು 'ಉರಿಸಿದರೆ ಪಾಪನಾಶವಾಗಿ ಪುಣ್ಯವುಂಟಾಗುತ್ತದೆ. ಆದ್ದರಿಂದ ಒಟ್ಟಿನಲ್ಲಿ ಹತ್ತಿಯಿಂದ ಮಾಡಿದ ಬತ್ತಿಯಿಂದ ದೇವರ ದೀಪವನ್ನು ಹಚ್ಚುವಂತೆ ತಾವರೆ ದಂಟಿನ ನಾರು, ಅಗಸೆನಾರು ಹಾಗೂ ನಾರು ಇವುಗಳಿಂದ ಬತ್ತಿಯನ್ನು ಮಾಡಿ ದೇವರ ದೀಪವನ್ನು ಹಚ್ಚಬಹುದು.

**122. ದೇವರಿಗೆ ಮಾಡಿದ ಮಂಗಳಾರತಿಯನ್ನು ನಾವು ಕಣ್ಣಿಗೆ ಹಚ್ಚಿಕೊಳ್ಳುತ್ತೇವೆ. ಅದರಿಂದೇನು ಫಲ?**

ಉ. **ಸಾರೋದ್ಧಾರೇ :-**
**ನೀರಾಜನ ಪ್ರಭಾಜಾಲಂ ಯೇಷಾಂ ಗಾತ್ರಾಣಿ ಸಂಸ್ಪೃಶೇತ್ ।**
**ಯಜ್ಞಾವಭೃಥಜಸ್ನಾನಜನಿತಂ ಯಜ್ಞೈಃ ಅವಭೃಥೈಃ ಅವಭೃಥಸ್ನಾನೈಶ್ಚ**
**ಜಾತಂ ಯತ್ಫಲಂ ತತ್ಫಲಂ ಲಭೇತ್ - ಪ್ರಾಪ್ನುಯಾತ್ ।**

ಎಂದು ಹೇಳಿದಂತೆ ದೇವರಿಗೆ ಮಾಡಿದ ಮಂಗಳಾರತಿಯನ್ನು ನಾವು ಕಣ್ಣಿಗೆ ಹಚ್ಚಿಕೊಳ್ಳಬೇಕು. ಇದರಿಂದ ಯಜ್ಞದಲ್ಲಿ ಅವಭೃಥಸ್ನಾನವನ್ನು ಮಾಡಿದರೆ ಏನು ಫಲ ಬರುತ್ತದೋ ಆ ಫಲವು ಬರುತ್ತದೆ.

**123. ಕಾರ್ತಿಕಮಾಸದಲ್ಲಿ ಬೆಳಗಿನ ಝಾವ ದೇವರಿಗೆ ಮಂಗಳಾರತಿಯನ್ನು ಮಾಡುವಾಗ ದಾಮೋದರಸ್ತೋತ್ರವನ್ನು ಪಠಿಸುತ್ತೇವೆ. ಈ ವಿಷಯಕ್ಕೆ ಪ್ರಮಾಣವೇನು?**

ಉ. **ದಾಮೋದರಾಷ್ಟಕಶತಂ ಯಃ ಪಠೇದಪಿ ಕಾರ್ತಿಕೇ।**
**ತಾವತೈವ ವಿಮುಕ್ತಾಘಃ ವಿಷ್ಣುಸಾಯುಜ್ಯಮಾಪ್ನುಯಾತ್॥**
**ಯಃ ಕಾರ್ತಿಕೇ ದಾಮೋದರಾಷ್ಟಕಶತಂ ಪಠೇತ್ ಸಃ ತಾವತೈವ ಪಾಠಮಾತ್ರೇಣೈವ ವಿಮುಕ್ತಾಘಃ ಸನ್ ವಿಷ್ಣೋಃ ಸಾಯುಜ್ಯಮಾಪ್ನುಯಾತ್ ಆಪ್ನುಯಾದೇವ "**

ಎಂದು ಹೇಳಿದಂತೆ ಪ್ರತಿವರ್ಷ ಕಾರ್ತಿಕಮಾಸದಲ್ಲಿ ಬೆಳಗಿನ ಜಾವ ದೇವರಿಗೆ ಮಂಗಳಾರತಿಯನ್ನು ಮಾಡುವಾಗ ದಾಮೋದರಾಷ್ಟಕವನ್ನು ಪಠಿಸಬೇಕು. ಪಠನಮಾತ್ರದಿಂದ ವ್ಯಕ್ತಿಯು ಪಾಪಗಳಿಂದ ಮುಕ್ತನಾಗಿ ವಿಷ್ಣುವಿನ ಸಾಯುಜ್ಯವನ್ನು ಹೊಂದುತ್ತಾನೆ.

**124.ದೀಪದ ಪಾತ್ರೆ ಎಷ್ಟು ವಿಧವಾಗಿದೆ?**

ದೀಪದ ಪಾತ್ರೆಯು ಆರು ವಿಧವಾಗಿದೆ

ಸುವರ್ಣನಿರ್ಮಿತಪಾತ್ರೆ, ಮರದಿಂದ ನಿರ್ಮಿತ, ಲೋಹದಿಂದ ನಿರ್ಮಿತ ಮಣ್ಣಿನಿಂದ ನಿರ್ಮಿತ, ತೆಂಗಿನ ಚಿಪ್ಪಿನಿಂದ ನಿರ್ಮಿತ ತಾಳೆಯ ಚಿಪ್ಪಿನಿಂದ ನಿರ್ಮಿತವಾದದ್ದು ಹೀಗೆ.

**ತೈಜಸಂ ದಾರವಂ ಲೌಹಮಾರ್ತಿಕ್ಯಂ ನಾರಿಕೇಲಜಮ್।**
**ತೃಣಧ್ವಜೋದ್ಭವಂ ವಾಽಪಿ ದೀಪಪಾತ್ರಂ ಪ್ರಶಸ್ಯತೇ॥**

ದೀಪವನ್ನು ಹಚ್ಚುವಾಗ ಘಂಟಾನಾದ ಪೂರ್ವಕವಾಗಿಯೇ ಹಚ್ಚಬೇಕು. ದೀಪಮಾತ್ರವಲ್ಲದೆ ಸ್ನಾನ (ಅಭಿಷೇಕ) ಧೂಪಾರತಿ, ನೈವೇದ್ಯ ಭೂಷಣ ಮತ್ತು ನೀರಾಜನ ಕಾಲದಲ್ಲಿ ಘಂಟಾನಾದ ಆವಶ್ಯಕ.

**ಸ್ನಾನೇ ಧೂಪೇ ತಥಾ ದೀಪೇ ನೈವೇದ್ಯೇ ಭೂಷಣೇ ತಥಾ।**
**ಘಂಟಾನಾದಂ ಪ್ರಕುರ್ವೀತ ತಥಾ ನೀರಾಜನೇಽಪಿ ಚ॥**

**125.ದೀಪದ ಬತ್ತಿ ಎಷ್ಟು ವಿಧ?**

ದೀಪದ ಬತ್ತಿಯು ಐದು ವಿಧವೆಂದು ಹೇಳಿದ್ದಾರೆ: ಪದ್ಮಸೂತ್ರದಬತ್ತಿ, ದರ್ಭಸೂತ್ರಬತ್ತಿ, ಸಣಬಿನ ಸೂತ್ರಬತ್ತಿ ತೆಂಗು ಮೊದಲಾದ ಕಾಯಿಯ ಸಿಪ್ಪೆಯ

ಬತ್ತಿ ಮತ್ತು ಹತ್ತಿ ಕಾಯಿಯ ಬತ್ತಿ ಹೀಗೆ.

**ಪದ್ಮಸೂತ್ರಭವಾ ದರ್ಭಗರ್ಭಸೂತ್ರಸಮುದ್ಭವಾ।**
**ಶಾಣಜಾ ಬಾದರೀ ವಾಪೀ ಫಲಕೋಶೋದ್ಭವಾಽಥವಾ**
**ವರ್ತಿಕಾ ದೀಪಕೃತ್ಯೇಷು ಸದಾ ಪಂಚವಿಧಾ ಸ್ಮೃತಾ ॥**

## 126. ದೀಪದ ಲಕ್ಷಣ ಯಾವುದು?

ಕಣ್ಣಿಗೆ ಆಹ್ಲಾದಕರವಾದ, ತಾಪದಾಯಕವಲ್ಲದ, ಜ್ವಾಲೆಗಳುಳ್ಳ ಶಬ್ದವಿಲ್ಲದ, ಹೊಗೆ ಇಲ್ಲದ, ಚಿಕ್ಕದಾಗಿರದ, ಬಲಭಾಗಕ್ಕೆ ತಿರುಗಿಸಿ ತಯಾರಾದ ಬತ್ತಿಯ ದೀಪವು ಸಂಪತ್ತನ್ನು ವೃದ್ಧಿ ಮಾಡುತ್ತದೆ.

**ನೇತ್ರಾನಂದಕರಃ ಸ್ವರ್ಚಿರ್ದೂರತಾಪವಿವರ್ಜಿತಃ।**
**ಸುಶಿಖಃ ಶಬ್ದರಹಿತೋಽತಿಧೂಮೋ ನಾತಿಹ್ರಸ್ವಕಃ।**
**ದಕ್ಷಿಣಾವರ್ತವರ್ತಿಸ್ತು ಪ್ರದೀಪಃ ಶ್ರೀವಿವೃದ್ಧಯೇ ॥**

## 127. ದೀಪದ ದಿಕ್ಕು ಯಾವುದು ಶ್ರೇಷ್ಠ?

ದೀಪವು ಪೂರ್ವ ಅಥವಾ ಉತ್ತರ ದಿಕ್ಕಿಗೆ ಅಭಿಮುಖವಾಗಿ ಉರಿಯುತ್ತಿರ ಬೇಕು. ದಕ್ಷಿಣ ಮುಖವು ಹಾನಿವುಂಟುಮಾಡುತ್ತದೆ. ಪೂರ್ವಾಭಿಮುಖವಾದ ದೀಪವು ಆಯುರಭಿವೃದ್ಧಿಯನ್ನು, ಪಶ್ಚಿಮದಿಕ್ಕು ದುಃಖವನ್ನು ನೀಡುತ್ತದೆ. ಉತ್ತರಾಭಿಮುಖವಾದದ್ದು ಸಂಪತ್ತನ್ನು ನೀಡುತ್ತದೆ. ಆದ್ದರಿಂದ ಪೂರ್ವ ಮತ್ತು ಉತ್ತರ ದಿಕ್ಕುಗಳು ದೀಪ ಬೆಳಗಲು ಶ್ರೇಷ್ಠವಾಗಿವೆ.

**ಆಯುರ್ದಃ ಪ್ರಾಙ್ಮುಖೋ ದೀಪೋ ಧನದಃ ಸ್ಯಾದುದಙ್ಮುಖಃ।**
**ಪ್ರತ್ಯಙ್ಮುಖೋ ದುಃಖದೋಽಸೌ ಹಾನಿದೋ ದಕ್ಷಿಣಾಮುಖಃ ॥**

## 128. ದೀಪದಿಂದ ದೀಪ ಹಚ್ಚಬಾರದೆ?

ಒಂದು ದೀಪವನ್ನು ಬೆಳಗಿಸಿ ಅದೇ ದೀಪದಿಂದಲೇ ಉಳಿದ ದೀಪಗಳನ್ನು ಹಚ್ಚುವುದು ರೂಢಿಯಲ್ಲಿದೆ. ಕಾರ್ತಿಕ ಮಾಸದಲ್ಲಿ ದೇವಸ್ಥಾನ, ಮಠ, ಮನೆಗಳಲ್ಲಿಯೂ ಲಕ್ಷದೀಪೋತ್ಸವ ಕಾಲದಲ್ಲಿ ದೀಪದಿಂದಲೇ ದೀಪವನ್ನು ಹಚ್ಚುವರು. ಆದರೆ ದೀಪದಿಂದ ದೀಪ ಹಚ್ಚಿದರೆ ದಾರಿದ್ರ್ಯ ಮತ್ತು ವ್ಯಾಧಿಗೆ ಅವಕಾಶ ನೀಡಿದಂತೆ.

**ದೀಪೇನ ದೀಪಂ ಪ್ರಜ್ವಾಲ್ಯ ದರಿದ್ರೋ ವ್ಯಾಧಿತೋ ಭವೇತ್** - ಲಿಂಗಪುರಾಣ ದಲ್ಲಿ ಹೇಳಿದಂತೆ ಒಂದು ಬಾರಿ ಹಚ್ಚಿದ ಅಗ್ನಿ ನಿಂದ್ಯವೆನಿಸಿದ್ದು ಪುನಃ ನಿಂದಾಗ್ನಿಯಿಂದ ಮತ್ತೊಂದು ದೀಪ ಹಚ್ಚಬಾರದು. ಹಾಗಾದರೆ ದೀಪ

ಹಚ್ಚುವುದಾದರೂ ಹೇಗೆ?

''ದೀಪಾಗ್ನೇಃ ನಿಂದಿತತ್ವಾತ್''

ತುಳಸೀಕಾಷ್ಠದಿಂದ ದೀಪವನ್ನು ಹಚ್ಚಬೇಕು.

## 129. ದೀಪವನ್ನು ಆರಿಸಬಾರದೆ?

ದೇವರಿಗಾಗಿ ಬೆಳಗಿದ್ದ ದೀಪವನ್ನು ಎಂದೂ ಪ್ರಯತ್ನಪೂರ್ವಕವಾಗಿ ಆರಿಸಬಾರದು.

**ನೈವ ನಿರ್ವಾಪಯೇತ್ ದೀಪಂ ಕದಾಚಿದಪಿ ಯತ್ನತಃ।**

**ಸತತಂ ಲಕ್ಷಣೋಪೇತಂ ದೇವಾರ್ಥಮುಪಕಲ್ಪಿತಮ್॥**

ಪುರುಷರಂತು ದೀಪವನ್ನು ಆರಿಸಿದರೆ ತಮ್ಮ ವಂಶವನ್ನು ಕತ್ತರಿಸಿದಂತೆ ಹಾಗೆಯೇ ಸ್ತ್ರೀಯರು ಕೂಷ್ಮಾಂಡವನ್ನು (ಕುಂಬಳ ಕಾಯಿಯನ್ನು) ಕತ್ತರಿಸುವುದು ವಂಶಚ್ಛೇದ ವಾಗಲು ಕಾರಣವಾಗುತ್ತದೆ.

**ದೀಪಪ್ರಲೋಪನಂ ಪುಂಸಾಂ ಕೂಷ್ಮಾಂಡಭೇದನಂ ಸ್ತ್ರಿಯಾಃ।**

**ಅಚಿರೇಣೈವ ಕಾಲೇನ ವಂಶಚ್ಛೇದೊ ಭವೇದ್ ಧ್ರುವಮ್॥**

ವಂಶವೃದ್ಧಿಯಾಗಲು ದೀಪದಾನ ವಿಹಿತವಾಗಿದೆ, ದೀಪವನ್ನು ಆರಿಸಿದ ಪುರುಷನು ತನಗೆ ಕುಲದೀಪಕ ಬೇಡವೆಂದು ಹೇಳಿದಂತೆ, ಕೂಷ್ಮಾಂಡವನ್ನು ಒಡೆದ ಸ್ತ್ರೀಯು ತನಗೆ ಗರ್ಭವು ನಿಲ್ಲುವುದು ಬೇಡವೆಂದು ಪರೋಕ್ಷವಾಗಿ ಹೇಳಿದಂತೆಯೇ, ದೀಪವನ್ನು ಕದ್ದವನು ಅಂಧನಾಗುವನು. ಆರಿಸಿದವನು ಒಕ್ಕಣ್ಣನಾಗುವನು.

**" ದೀಪಹರ್ತಾ ಭವೇದಂಧಃ ಕಾಣೋ ನಿರ್ವಾಪಕೋ ಭವೇತ್.**

## 130. ದೀಪಗಳಲ್ಲಿರುವ ಬತ್ತಿಯ ಸಂಖ್ಯೆ ಎಷ್ಟು?

ದೀಪದಲ್ಲಿ ಎರಡು ಬತ್ತಿಗಳಿರಲೇಬೇಕು. ಒಂದು ಬತ್ತಿಯಿಂದ ದೀಪ ಹಚ್ಚಬಾರದು.

## 131. ದೇವರದೀಪ, ಕಳ್ಳತನ ಮಾಡಿದರೆ ಏನಾಗುತ್ತದೆ?

ದೇವರ ಎಣ್ಣೆಯನ್ನಾಗಲೀ, ದೀಪವನ್ನಾಗಲೀ ಕಳ್ಳತನ ಮಾಡಬಾರದು. ಕದ್ದರೆ ಕುಷ್ಠರೋಗಭಾಗಿಯಾಗುವನು.

**ನ ಹರೇತ್ ಅಜ್ಞಾನತೋ ದೀಪಂ ತಥಾ ಲೋಭಾದಿನಾ ನರಃ**

**ಸ ಕುಷ್ಠೀ ಜಾಯತೇ ಮೂಢೋ**

## 132. ದೀಪ ಬೆಳಗಿದರೆ ಯಾವ ಫಲ?

ಒಂದು ನಿಮಿಷವಾಗಲಿ, ನಿಮಿಷಾರ್ಧವಾಗಲಿ ಭಗವಂತನಿಗೆ ದೀಪದಾನ ಮಾಡಿದರೆ ಅನೇಕ ಕಲ್ಪಗಳು ವಿಷ್ಣುಲೋಕದಲ್ಲಿ ಮೆರೆಯುವನು.

**ನಿಮಿಷಂ ವಾ ನಿಮಿಷಾರ್ಧಂ ವಾ ಘೃತದೀಪಂ ನಿವೇದಯೇತ್।**
**ಕಲ್ಪಕೋಟಿಸಹಸ್ರಾಣಿ ವಿಷ್ಣುಲೋಕೇ ಮಹೀಯತೇ॥**

ಒಂದು ಘೃತದೀಪವನ್ನು ಹಚ್ಚಿದರೆ ಭೂಮಿಯಲ್ಲಿ ರಾಜನಾಗುವ ಯೋಗವಿದೆ. ಎಂದಮೇಲೆ ಬಹಳ ದೀಪಗಳನ್ನು ಬೆಳಗಿದರೆ ಫಲವನ್ನು ಹೇಳಲು ನಾನೇ ಅಸಮರ್ಥ ಎಂದು ರುದ್ರದೇವರು ಪಾರ್ವತಿಗೆ ಪದ್ಮಪುರಾಣದಲ್ಲಿ ಹೇಳಿರುವರು.

**" ಭವೇದೇಕಸ್ಯ ದೀಪಸ್ಯ ಭೂಮೌ ರಾಜ್ಯಂ ಭವೇದಿತಿ।**
**ಬಹೂನಾಂ ತು ಫಲಂ ವಕ್ತುಂ ಅಹಂ ನಾರ್ಹಾಮಿ ಪಾರ್ವತಿ॥ - ಪದ್ಮಪುರಾಣ**

ಸಂಪತ್ತು ಬೇಕಾದವನು ಮತ್ತು ಚತುರ್ವರ್ಗ ಫಲವನ್ನು ಇಚ್ಛಿಸುವವನು, ಇತರ ಲೋಕಗಳನ್ನು, ಜಯಿಸುವ ಇಚ್ಛೆಯುಳ್ಳವರು ದೀಪವನ್ನು ಹಚ್ಚಿಡಬೇಕು. ದೀಪವು ತೇಜೋಮಯವಾದ್ದರಿಂದ ದೀಪದ ಬೆಳಕಿನಿಂದ ಯಾವ ಲೋಕವನ್ನಾದರೂ ಗೆಲ್ಲಬಹುದು.

**ದೀಪೇನ ಲೋಕಾನ್ ಜಯತಿ ದೀಪಸ್ತೇಜೋಮಯಃ ಸ್ಮೃತಃ।**
**ಚತುರ್ವರ್ಗಫಲೋ ದೀಪಃ ತಸ್ಮಾದ್ ದೀಪೈರ್ಯಜೇತ್ ಶ್ರಿಯೇ॥**

ಘೃತ ಅಥವಾ ತೈಲದಿಂದಾಗಲೀ, ವಿಷ್ಣುವಿಗೆ ದೀಪವನ್ನು ಹಚ್ಚಿದರೆ ಸಕಲ ಪಾಪವನ್ನು ಪರಿಹರಿಸಿಕೊಂಡು ಪ್ರಕಾಶಮಾನವಾದ ವಿಮಾನವೇರಿ ವಿಷ್ಣುಲೋಕವನ್ನು ಸೇರುವನು.

**ಘೃತೇನ ವಾಽಥ ತೈಲೇನ ದೀಪಂ ಯೋ ಜ್ವಾಲಯೇನ್ನರಃ।**
**ವಿಷ್ಣವೇ ವಿಧಿವದ್ ಭಕ್ತ್ಯಾತಸ್ಯ ಪುಣ್ಯಫಲಂ ಶ್ರುಣು॥**
**ವಿಹಾಯ ಸಕಲಂ ಪಾಪಂ ಸಹಸ್ರಾದಿತ್ಯಸನ್ನಿಭಃ॥**
**ಜ್ಯೋತಿಷ್ಮತಾ ವಿಮಾನೇನ ವಿಷ್ಣುಲೋಕೇ ಮಹೀಯತೇ।**

## 133. ದೀಪದಾನದಿಂದ ಯಾವ ಫಲ?

ದೀಪದಾನದಿಂದ ಉತ್ತಮವಾದ ನೇತ್ರಗಳ ಪ್ರಾಪ್ತಿಯಾಗುತ್ತದೆ. **ದೀಪದಃ ಚಕ್ಷುರುತ್ತಮಮ್.**

## 134. ದೀಪಸ್ತಂಭದಲ್ಲಿರುವ ದೇವತೆಗಳು ಯಾರು?

ದೀಪಸ್ತಂಭದಲ್ಲಿ 27 ನಕ್ಷತ್ರದೇವತೆಗಳು ಇದ್ದಾರೆ. ನಾಳದಲ್ಲಿ ವಾಸುಕಿದೇವತೆ, ಪಾದದಲ್ಲಿ ಚಂದ್ರಸೂರ್ಯರು, ಧೂಪದೀಪ ಪಾತ್ರದಲ್ಲಿ ಅಗ್ನಿದೇವತೆ.

## 135. ದೀಪದಾನ ಮಂತ್ರಗಳು ಯಾವು?

**ದೀಪಸ್ತಮೋ ನಾಶಯತಿ ದೀಪಃ ಕಾಂತಿಂ ಪ್ರಯಚ್ಛತಿ ।**
**ತಸ್ಮಾತ್ ದೀಪಪ್ರದಾನೇನ ಮಮ ವಂಶಪ್ರವರ್ಧನಮ್ ॥**
**ದೀಪೋ ಜ್ಞಾನಪ್ರದೋ ನಿತ್ಯಂ ದೇವತಾನಾಂ ಪ್ರಿಯಸ್ಸದಾ ।**
**ದಾನೇನಾಸ್ಯ ಭವೇತ್ ಸೌಖ್ಯಂ ಶಾಂತಿರ್ಮೇ ವಾಂಛಿತಂ ಫಲಮ್**

## 136. ದೀಪದಲ್ಲಿರುವ ದೇವತೆಗಳು ಯಾರು?

ದೀಪದ ಪಾತ್ರೆಯಲ್ಲಿ ಬ್ರಹ್ಮದೇವರು, ತೈಲದಲ್ಲಿ ಲಕ್ಷ್ಮೀದೇವಿಯ ಸನ್ನಿಧಾನ, ಬತ್ತಿಯಲ್ಲಿ ವಾಸುದೇವ ಸಂಕರ್ಷಣದೇವರ ಸನ್ನಿಧಾನ, ಬೆಳಕಿನಲ್ಲಿ ವಾಯುದೇವರು, ಕಪ್ಪಿನಲ್ಲಿ ರುದ್ರದೇವರು, ಕೆಂಪಿನಲ್ಲಿ ಇಂದ್ರದೇವರು. ಮನೋನಿಯಾಮಕರಾದ ಇಂದ್ರರು, ವೈರಾಗ್ಯಾಧಿಪತಿ ರುದ್ರರು, ಜ್ಞಾನದಾತಾ ವಾಯು, ಅಜ್ಞಾನ ಪರಿಹಾರಕ ಸಂಕರ್ಷಣ, ನಿಜಮುಕ್ತಿದಾತ ವಾಸುದೇವ ಎಂಬ ಸೂಚನೆ ಇದೆ.

ದೇವರ ಮುಂದೆ ಹಚ್ಚಿರುವ ಬಲಗಡೆಯ ದೀಪದಲ್ಲಿ ಸಂಜ್ಞಾ ಮತ್ತು ಸೂರ್ಯದೇವರು ಜಯಾಪತಿಸಂಕರ್ಷಣದೇವರು ಸನ್ನಿಹಿತರಾಗಿರುವರು. ಎಡಗಡೆ ದೀಪದಲ್ಲಿ ರೋಹಿಣಿ ಮತ್ತು ಚಂದ್ರದೇವರು ಅವರಂತರ್ಯಾಮಿ ಕೃತೀಪತಿ ಪ್ರದ್ಯುಮ್ನ ಸನ್ನಿಹಿತರಾಗಿರುವರು. ಸೂರ್ಯಚಂದ್ರರ ಕಾಂತಿ ಅವರ ಅಂತರ್ಯಾಮಿಯಾದ ಭಗವಂತನದೇ ಕಾಂತಿಯಾಗಿದೆ

ದೀಪ ಹಚ್ಚುವಾಗ ಈ ಅನುಸಂಧಾನವಿರಬೇಕು.

## 137. ದೀಪ ಹಚ್ಚುವಾಗ ಹೇಳುವ ವೇದಮಂತ್ರ ಯಾವುದು?

**ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ। ಹವ್ಯವಾಡ್ ಜುಹ್ವಾಸ್ಯಃ ॥**

## 138. ನರಕ ಚತುರ್ದಶಿ ದೀಪದಾನದಿಂದ ಏನು ಪ್ರಯೋಜನ?

ನರಕ ಚತುರ್ದಶಿಯಂದು ಪ್ರದೋಷ ಸಮಯದಲ್ಲಿ ಬ್ರಹ್ಮವಿಷ್ಣು ಮಹೇಶ್ವರ ರಿಗಾಗಿ ಮನೆ ಮಠ, ಪ್ರಾಕಾರ, ಉದ್ಯಾನ, ಬಾವಿಕಟ್ಟೆ, ಗೋವಿನ ಹಟ್ಟಿ, ಬೀದಿಗಳಲ್ಲಿ ದೀಪಗಳನ್ನು ಇರಿಸಬೇಕು. ಕುದುರೆಲಾಯ, ಗಜಶಾಲೆಯಲ್ಲಿಯೂ ದೀಪಗಳನ್ನು ಹಚ್ಚಬೇಕು. ಅಲ್ಲಿರುವ ಅಲಕ್ಷ್ಮಿಯು ದೂರವಾಗುತ್ತಾಳೆ.

**ಪ್ರದೋಷಸಮಯೇ ದೀಪಾನ್ ನರೋ ದದ್ಯಾತ್ ಮನೋಹರಾನ್ ।**
**ಬ್ರಹ್ಮಾವಿಷ್ಣುಶಿವಾದೀನಾಂ ಭವನೇಷು ಮಠೇಷು ಚ ।**
**ಪ್ರಾಕಾರೋದ್ಯಾನವಾಪೀಷು ಪ್ರತೋಲೀ ನಿಷ್ಕುಟೇಷು ಚ ।**
**ಮಂದುರಾಸು ವಿಚಿತ್ರಾಸು ಹಸ್ತಿಶಾಲಾಸು ಚೈವ ಹಿ । ಭವಿಷ್ಯೋತ್ತರ**

**139. ದೀಪಾವಳೀ ಅಮಾವಾಸ್ಯೆಯು ಲಕ್ಷ್ಮೀ ದೀಪದಾನದಿಂದ ಏನು ಪ್ರಯೋಜನ?**

ಕಾರ್ತಿಕಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯಂದು ಲಕ್ಷ್ಮೀದೇವಿಗಾಗಿ ದೀಪವನ್ನು ಹಚ್ಚಬೇಕು. ಇದರಿಂದ ಸುಪ್ತಳಾದ ಲಕ್ಷ್ಮಿಯನ್ನು ಪ್ರಭೋಧ ಗೊಳಿಸಬಹುದು.

**ದೀಪದಾನಾತ್ ತತಃ ಪಶ್ಚಾತ್ ಲಕ್ಷ್ಮೀಂ ಸುಪ್ತಾಂ ಪ್ರಬೋಧಯೇತ್।**

ಬಲಿಚಕ್ರವರ್ತಿಗೆ ದೀಪದಾನ-ಮಂತ್ರ

ಭಗವಂತನಿಗೆ ಯಾರು ದೀಪದಾನ ಮಾಡುವರೋ ಅವರ ಮನೆಯಲ್ಲಿ ಲಕ್ಷ್ಮೀದೇವಿಯು ಸುಸ್ಥಿರವಾಗಿರಲಿ. ಯಾರು ದೀಪಾವಳಿಯಲ್ಲಿ ಶೋಕಾದಿಗಳಿಂದ ದೀಪ ಹಚ್ಚುವುದಿಲ್ಲವೋ ಅವರ ಮನೆಯಲ್ಲಿ ಶೋಕವೇ ಇರುವಂತಾಗಲೀ ಎಂದು ಭಗವಂತನನ್ನು ಬಲಿಯು ಪ್ರಾರ್ಥಿಸಿರುವನು.

**ಮದ್ರಾಜ್ಯೇ ಯೇ ದೀಪದಾನಂ ಭುವಿ ಕುರ್ವಂತಿ ಮಾನವಾಃ**
**ತೇಷಾಂ ಗೃಹೇ ತವ ಸ್ತ್ರೀ ಯಂ ಸದಾ ತಿಷ್ಠತು ಸುಸ್ಥಿರಾ।**
**ದೀಪ್ಯೈಃ ನೀರಾಜನಾದತ್ರ ಸೈಷಾ ದೀಪಾವಲೀ ಸ್ಮೃತಾ।**
**ಬಲಿರಾಜ್ಯೇ ತು ಯೇ ಲೋಕಾ ಶೋಕಾನುತ್ಸವಕಾರಿಣಃ।**
**ತೇಷಾಂ ಗೃಹೇ ಸದಾ ಶೋಕಃ ಪತೇದಿತಿ ನ ಸಂಶಯಃ॥ - ಭವಿಷ್ಯತ್ಪುರಾಣ**

**140. ದೀಪದ ದಾನದಿಂದ ಏನು ಪ್ರಯೋಜನ?**

ದೀಪದಾನದಿಂದ ಪುನರ್ಜನ್ಮವೇ ಇಲ್ಲದಾಗುವುದು.

**ದೀಪದಾನೇನ ವಿಪ್ರೇಂದ್ರ ನ ಪುನರ್ಜಾಯತೇ ಭುವಿ।**

ಘೃತ ಅಥವಾ ತೈಲ ದೀಪವನ್ನು ಹಚ್ಚಿದವನು ಅಶ್ವಮೇಧ ಫಲವನ್ನು ಪಡೆಯುವನು.

ಮೇರುಮಂದರ ಪರ್ವತದಷ್ಟು ಪಾಪರಾಶಿಗಳನ್ನು ದೀಪದಾನವು ಸುಟ್ಟು ಬೂದಿಮಾಡುವುದು.

ದೇವರ ಮುಂದೆ ಇಡುವ ನಿಮಿಷಾರ್ಧ ದೀಪವು ಪಾತಕ ಕೋಟಿಗಳನ್ನು ನಾಶಮಾಡುತ್ತದೆ. ಈ ದೀಪದಿಂದ ನಾಶವಾಗದ ಪಾಪಗಳೇ ಇರುವುದಿಲ್ಲ.

ಕಾರ್ತಿಕ ಮಾಸದಲ್ಲಿ ದೇವರ ಮುಂದೆ ದೀಪ ಬೆಳಗದವನು ವೈಷ್ಣವನಲ್ಲ.

ಸರ್ವದಾನಗಳು ಒಂದು ಕಡೆ, ಕಾರ್ತಿಕ ಮಾಸದಲ್ಲಿ ದೀಪದಾನ ಮತ್ತೊಂದು ಕಡೆ ತೂಗಿದರೆ ದೀಪದಾನವೇ ಅಧಿಕವಾಗುತ್ತದೆ.

**ಏಕತಃ ಸರ್ವದಾನಾನಿ ದೀಪದಾನಾನಿ ಚೈಕತಃ।**

**ಕಾರ್ತಿಕೇ ನ ಸಮಂ ಪ್ರೋಕ್ತಂ ದೀಪದೋ ಹ್ಯಧಿಕಃ ಸ್ಮೃತಃ ॥**

ಕಾರ್ತಿಕದಲ್ಲಿ "ದೀಪವನ್ನು ಹಚ್ಚು" ಎಂದು ಪರರನ್ನು ಬೋಧಿಸಿದರೂ ಫಲಾಧಿಕ್ಯವಿದೆ. ರಾಜಸೂಯಾಶ್ವಮೇಧದ ಫಲಪ್ರಾಪ್ತಿ.

ಬೇರೆಯವರು ದೇವರಿಗಾಗಿ ಹಚ್ಚಿಟ್ಟಿರುವ ದೀಪದ ಬತ್ತಿಯನ್ನು ಮುಂದೆ ಮಾಡಿ ಉರಿಯುವಂತೆ ಮಾಡಿದರೂ ಫಲವಿದೆ.

ಕಾರ್ತಿಕ ಮಾಸದ ಏಕಾದಶಿಯಂದು ದೇವರ ಮುಂದೆ ಹಚ್ಚಿಟ್ಟಿದ್ದ ದೀಪದ ಬತ್ತಿಯನ್ನು ತಿನ್ನಲು ಬಂದ ಇಲಿಯು (ಮೂಷಿಕ) ಬತ್ತಿಯನ್ನು ಮುಂದೆ ಚಾಚಿ ಚೆನ್ನಾಗಿ ಉರಿಯುವಂತೆ ಮಾಡಿದ್ದರಿಂದ ಮೂಷಿಕ ಜನ್ಮದಿಂದ ಮುಕ್ತವಾಗಿ ಮನುಷ್ಯನಾಗಿ ಸಾಧನೆ ನಡೆಸಿ ಶ್ರೇಷ್ಠಗತಿ ಪಡೆದನು.

**ಏಕಾದಶ್ಯಾಂ ಪರ್ಯೈರ್ದತ್ತಂ ದೀಪಂ ಪ್ರಜ್ವಾಲ್ಯ ಮೂಷಿಕಾ ।**
**ಮಾನುಷ್ಯಂ ದುರ್ಲಭಂ ಪ್ರಾಪ್ಯ ಪರಾಂ ಗತಿಮವಾಪ ಹಿ ॥**

## 141.ತುಳಸಿಗೆ ದೀಪದಾನದಿಂದ ಫಲ ಯಾವದು?

ಕಾರ್ತಿಕ ಮಾಸದಲ್ಲಿ ತುಳಸಿಯ ಮುಂದೆ ದೀಪವನ್ನು ಹಚ್ಚಿದರೆ ಅವರಿಗೆ ವಿಷ್ಣುಲೋಕಪ್ರಾಪ್ತಿ ಖಂಡಿತ.

**ದೀಪಂ ದದಾತಿ ವಿಪ್ರೇಂದ್ರ ಸ ಲಭೇತ್ ವೈಷ್ಣವಂ ಪದಮ್ ।**
**ಯಃ ಕಶ್ಚಿತ್ ತುಲಸೀಮೂಲೇ ಕಾರ್ತಿಕೇ ಕೇಶವಪ್ರಿಯಃ । - ಪಾದ್ಮ-ಉತ್ತರ ಖಂಡ**

## 142. ನಂದಾದೀಪ ಎಂದರೇನು?

ದೇವರನ್ನು ಬೆಳಗುವ ದಿನವಿಡೀ ನಂದಿಹೋಗದ ದೀಪವೇ ನಂದಾ ದೀಪ.

"ನಂದ" ಎಂದರೆ ಭಗವಂತ. (ಆನಂದೋ ನಂದನೋ ನಂದಃ-ವಿಷ್ಣುಸಹಸ್ರ ನಾಮ) ನಂದಯತಿ ಭಕ್ತಾನ್ ಇತಿ ನಂದಃ ಆನಂದ ಸಾಗರದಲ್ಲಿ ಲೋಲಾಡುವಂತೆ ಮಾಡುವ ಭಗವಂತನೇ ನಂದ. ಇಂತಹ ಭಗವಂತನು ಚೆನ್ನಾಗಿ ತೋರುವಂತೆ ಮಾಡುವ ದೀಪವೇ ನಂದಾದೀಪ. "ನಂದಂ+ಆ ಸಮ್ಯಕ್ ದೀಪಯತೀತಿ ನಂದಾದೀಪಃ" ಈ ದೀಪವನ್ನು ಹಿಂದೆ ಹೇಳಿದಂತೆ ಎರಡು ಬತ್ತಿಗಳಿಂದ ಅಥವಾ ಅನೇಕ ಎಳೆಗಳುಳ್ಳ ಎಳೆ ಬತ್ತಿಯಿಂದ ತಯಾರಿಸಿರಬೇಕು.

## 143.ನೀರಾಜನದ ಫಲ ಏನು ?

ಭಗವಂತನಿಗೆ ಮಾಡುವ ನೀರಾಜನದ ಮೂಲಕ ಭಗವಂತನ ಮುಖಾವಲೋಕನವು ಏಳು ಜನ್ಮಗಳಲ್ಲಿ ವಿಪ್ರನಾಗುವ ಯೋಗವುಂಟುಮಾಡುತ್ತದೆ. ಅಂತ್ಯದಲ್ಲಿ ವಿಷ್ಣುಲೋಕಪ್ರಾಪ್ತಿ.

**ನೀರಾಜನಂ ಚ ಯಃ ಪಶ್ಯೇತ್ ದೇವದೇವಸ್ಯ ಚಕ್ರಿಣಃ ।**

**139. ದೀಪಾವಳೀ ಅಮಾವಾಸ್ಯೆಯ ಲಕ್ಷ್ಮೀ ದೀಪದಾನದಿಂದ ಏನು ಪ್ರಯೋಜನ?**

ಕಾರ್ತಿಕಮಾಸದ ಕೃಷ್ಣಪಕ್ಷದ ಅಮಾವಾಸ್ಯೆಯಂದು ಲಕ್ಷ್ಮೀದೇವಿಗಾಗಿ ದೀಪವನ್ನು ಹಚ್ಚಬೇಕು. ಇದರಿಂದ ಸುಪ್ತಳಾದ ಲಕ್ಷ್ಮಿಯನ್ನು ಪ್ರಭೋಧ ಗೊಳಿಸಬಹುದು.

**ದೀಪದಾನಾತ್ ತತಃ ಪಶ್ಚಾತ್ ಲಕ್ಷ್ಮೀಂ ಸುಪ್ತಾಂ ಪ್ರಬೋಧಯೇತ್।**

ಬಲಿಚಕ್ರವರ್ತಿಗೆ ದೀಪದಾನ-ಮಂತ್ರ

ಭಗವಂತನಿಗೆ ಯಾರು ದೀಪದಾನ ಮಾಡುವರೋ ಅವರ ಮನೆಯಲ್ಲಿ ಲಕ್ಷ್ಮಿದೇವಿಯು ಸುಸ್ಥಿರವಾಗಿರಲಿ. ಯಾರು ದೀಪಾವಳಿಯಲ್ಲಿ ಶೋಕಾದಿಗಳಿಂದ ದೀಪ ಹಚ್ಚುವುದಿಲ್ಲವೋ ಅವರ ಮನೆಯಲ್ಲಿ ಶೋಕವೇ ಇರುವಂತಾಗಲೀ ಎಂದು ಭಗವಂತನನ್ನು ಬಲಿಯು ಪ್ರಾರ್ಥಿಸಿರುವನು.

**ಮದ್ರಾಜ್ಯೇ ಯೇ ದೀಪದಾನಂ ಭುವಿ ಕುರ್ವಂತಿ ಮಾನವಾಃ**
**ತೇಷಾಂ ಗೃಹೇ ತವ ಸ್ತ್ರೀ ಯಂ ಸದಾ ತಿಷ್ಠತು ಸುಸ್ಥಿರಾ।**
**ದೀಪ್ಯೈಃ ನೀರಾಜನಾದತ್ರ ಸೈಷಾ ದೀಪಾವಲೀ ಸ್ಮೃತಾ।**
**ಬಲಿರಾಜ್ಯೇ ತು ಯೇ ಲೋಕಾ ಶೋಕಾನುತ್ಸವಕಾರಿಣಃ।**
**ತೇಷಾಂ ಗೃಹೇ ಸದಾ ಶೋಕಃ ಪತೇದಿತಿ ನ ಸಂಶಯಃ॥ - ಭವಿಷ್ಯತ್ಪುರಾಣ**

**140. ದೀಪದ ದಾನದಿಂದ ಏನು ಪ್ರಯೋಜನ?**

ದೀಪದಾನದಿಂದ ಪುನರ್ಜನ್ಮವೇ ಇಲ್ಲದಾಗುವುದು.

**ದೀಪದಾನೇನ ವಿಪ್ರೇಂದ್ರ ನ ಪುನರ್ಜಾಯತೇ ಭುವಿ।**

ಘೃತ ಅಥವಾ ತೈಲ ದೀಪವನ್ನು ಹಚ್ಚಿದವನು ಅಶ್ವಮೇಧ ಫಲವನ್ನು ಪಡೆಯುವನು.

ಮೇರುಮಂದರ ಪರ್ವತದಷ್ಟು ಪಾಪರಾಶಿಗಳನ್ನು ದೀಪದಾನವು ಸುಟ್ಟು ಬೂದಿಮಾಡುವುದು.

ದೇವರ ಮುಂದೆ ಇಡುವ ನಿಮಿಷಾರ್ಧ ದೀಪವು ಪಾತಕ ಕೋಟಿಗಳನ್ನು ನಾಶಮಾಡುತ್ತದೆ. ಈ ದೀಪದಿಂದ ನಾಶವಾಗದ ಪಾಪಗಳೇ ಇರುವುದಿಲ್ಲ.

ಕಾರ್ತಿಕ ಮಾಸದಲ್ಲಿ ದೇವರ ಮುಂದೆ ದೀಪ ಬೆಳಗದವನು ವೈಷ್ಣವನಲ್ಲ.

ಸರ್ವದಾನಗಳು ಒಂದು ಕಡೆ, ಕಾರ್ತಿಕ ಮಾಸದಲ್ಲಿ ದೀಪದಾನ ಮತ್ತೊಂದು ಕಡೆ ತೂಗಿದರೆ ದೀಪದಾನವೇ ಅಧಿಕವಾಗುತ್ತದೆ.

**ಏಕತಃ ಸರ್ವದಾನಾನಿ ದೀಪದಾನಾನಿ ಚೈಕತಃ।**

**ಕಾರ್ತಿಕೇ ನ ಸಮಂ ಪ್ರೋಕ್ತಂ ದೀಪದೋ ಹ್ಯಧಿಕಃ ಸ್ಮೃತಃ ॥**

ಕಾರ್ತಿಕದಲ್ಲಿ "ದೀಪವನ್ನು ಹಚ್ಚು" ಎಂದು ಪರರನ್ನು ಬೋಧಿಸಿದರೂ ಫಲಾಧಿಕ್ಯವಿದೆ. ರಾಜಸೂಯಾಶ್ವಮೇಧದ ಫಲಪ್ರಾಪ್ತಿ.

ಬೇರೆಯವರು ದೇವರಿಗಾಗಿ ಹಚ್ಚಿಟ್ಟಿರುವ ದೀಪದ ಬತ್ತಿಯನ್ನು ಮುಂದೆ ಮಾಡಿ ಉರಿಯುವಂತೆ ಮಾಡಿದರೂ ಫಲವಿದೆ.

ಕಾರ್ತಿಕ ಮಾಸದ ಏಕಾದಶಿಯಂದು ದೇವರ ಮುಂದೆ ಹಚ್ಚಿಟ್ಟಿದ್ದ ದೀಪದ ಬತ್ತಿಯನ್ನು ತಿನ್ನಲು ಬಂದ ಇಲಿಯು (ಮೂಷಿಕ) ಬತ್ತಿಯನ್ನು ಮುಂದೆ ಚಾಚಿ ಚೆನ್ನಾಗಿ ಉರಿಯುವಂತೆ ಮಾಡಿದ್ದರಿಂದ ಮೂಷಿಕ ಜನ್ಮದಿಂದ ಮುಕ್ತವಾಗಿ ಮನುಷ್ಯನಾಗಿ ಸಾಧನೆ ನಡೆಸಿ ಶ್ರೇಷ್ಠಗತಿ ಪಡೆದನು.

**ಏಕಾದಶ್ಯಾಂ ಪರ್ಯೈರ್ದತ್ತಂ ದೀಪಂ ಪ್ರಜ್ವಾಲ್ಯ ಮೂಷಿಕಾ ।**
**ಮಾನುಷ್ಯಂ ದುರ್ಲಭಂ ಪ್ರಾಪ್ಯ ಪರಾಂ ಗತಿಮವಾಪ ಹಿ ॥**

## 141.ತುಳಸಿಗೆ ದೀಪದಾನದಿಂದ ಫಲ ಯಾವದು?

ಕಾರ್ತಿಕ ಮಾಸದಲ್ಲಿ ತುಳಸಿಯ ಮುಂದೆ ದೀಪವನ್ನು ಹಚ್ಚಿದರೆ ಅವರಿಗೆ ವಿಷ್ಣುಲೋಕಪ್ರಾಪ್ತಿ ಖಂಡಿತ.

**ದೀಪಂ ದದಾತಿ ವಿಪ್ರೇಂದ್ರ ಸ ಲಭೇತ್ ವೈಷ್ಣವಂ ಪದಮ್ ।**
**ಯಃ ಕಶ್ಚಿತ್ ತುಲಸೀಮೂಲೇ ಕಾರ್ತಿಕೇ ಕೇಶವಪ್ರಿಯಃ । - ಪಾದ್ಮ-ಉತ್ತರ ಖಂಡ**

## 142. ನಂದಾದೀಪ ಎಂದರೇನು?

ದೇವರನ್ನು ಬೆಳಗುವ ದಿನವಿಡೀ ನಂದಿಹೋಗದ ದೀಪವೇ ನಂದಾ ದೀಪ.

"ನಂದ" ಎಂದರೆ ಭಗವಂತ. (ಆನಂದೋ ನಂದನೋ ನಂದಃ-ವಿಷ್ಣುಸಹಸ್ರ ನಾಮ) ನಂದಯತಿ ಭಕ್ತಾನ್ ಇತಿ ನಂದಃ ಆನಂದ ಸಾಗರದಲ್ಲಿ ಲೋಲಾಡುವಂತೆ ಮಾಡುವ ಭಗವಂತನೇ ನಂದ. ಇಂತಹ ಭಗವಂತನು ಚೆನ್ನಾಗಿ ತೋರುವಂತೆ ಮಾಡುವ ದೀಪವೇ ನಂದಾದೀಪ. "ನಂದಂ+ಆ ಸಮ್ಯಕ್ ದೀಪಯತೀತಿ ನಂದಾದೀಪಃ" ಈ ದೀಪವನ್ನು ಹಿಂದೆ ಹೇಳಿದಂತೆ ಎರಡು ಬತ್ತಿಗಳಿಂದ ಅಥವಾ ಅನೇಕ ಎಳೆಗಳುಳ್ಳ ಎಳೆ ಬತ್ತಿಯಿಂದ ತಯಾರಿಸಿರಬೇಕು.

## 143.ನೀರಾಜನದ ಫಲ ಏನು ?

ಭಗವಂತನಿಗೆ ಮಾಡುವ ನೀರಾಜನದ ಮೂಲಕ ಭಗವಂತನ ಮುಖಾವಲೋಕನವು ಏಳು ಜನ್ಮಗಳಲ್ಲಿ ವಿಪ್ರನಾಗುವ ಯೋಗವುಂಟುಮಾಡುತ್ತದೆ. ಅಂತ್ಯದಲ್ಲಿ ವಿಷ್ಣುಲೋಕಪ್ರಾಪ್ತಿ.

**ನೀರಾಜನಂ ಚ ಯಃ ಪಶ್ಯೇತ್ ದೇವದೇವಸ್ಯ ಚಕ್ರಿಣಃ ।**

**ಸಪ್ತಜನ್ಮನಿ ವಿಪ್ರಃ ಸ್ಯಾದ್ ಅಂತೇ ಚ ಪರಮಂ ಪದಮ್ ॥**

ನೀರಾಜನದಿಂದ ಅಜ್ಞಾನವೆಂಬ ಕತ್ತಲೆಯು ನಾಶವಾಗುತ್ತದೆ. ಸಂಸಾರಕ್ಕೆ ಮೂಲವಾದ ಅಜ್ಞಾನವೇ ನಾಶವಾದ ಮೇಲೆ ಪುನಃ ಸಂಸಾರವೆಲ್ಲಿ?

**ಕೃತ್ವಾ ನೀರಾಜನಂ ವಿಷ್ಣೋಃ ದೀಪಾವಲ್ಯಾ ಸುದೃಶ್ಯಯಾ**
**ತಮೋವಿಕಾರಂ ಜಯತಿ ಜಿತೇ ತಸ್ಮಿಂಶ್ಚ ಶೋ ಭವಃ ॥**

ನೀರಾಜನದ ಮೂಲಕ ಭಗವಂತನ ಮುಖದರ್ಶನ ಮುಖ್ಯಫಲ . ದೀಪ, ಧೂಪ, ಹಸ್ತಗಳಿಂದ ವಂದಿಸುವಾಗ ಭಕ್ತಿಯಿಂದ ನಿತ್ಯವೂ ಮಾಡುವ ಭಗವಂತನ ಮೂರ್ತಿದರ್ಶನವು ಸಾವಿರ ರಾಜಸೂಯ ಯಾಗ ಮಾಡಿದ ಫಲ ಉಂಟುಮಾಡುತ್ತದೆ.

**ಧೂಪಕಾಲೇ ದೀಪಕಾಲೇ ಕರಾಭ್ಯಾಂ ಚ ಪ್ರವಂದನೇ ।**
**ಭಕ್ತ್ಯಾ ಕರೋತಿ ಯೋ ನಿತ್ಯಂ ಭಗವನ್ಮೂರ್ತಿದರ್ಶನಮ್ ।**
**ರಾಜಸೂಯಸಹಸ್ರೇಣ ದೀಕ್ಷಿತಸ್ಯ ಮಹಾತ್ಮನಃ ।**
**ತತ್ಫಲಂ ಸಮವಾಪ್ನೋತಿ ಮೋದತೇ ಹರಿಮಂದಿರೇ॥**

ಷೋಡಶೋಪಚಾರ ಪೂಜೆಯನ್ನು ಮಾಡುವಾಗ ಮಂಗಲನೀರಾಜನವನ್ನು ಮಾಡುತ್ತೇವೆ. ಈ ಷೋಡಶೋಪಚಾರ ಪೂಜಾಕಾಲದಲ್ಲಿ ಮಂತ್ರ, ತಂತ್ರ, ದ್ರವ್ಯ ದೇವತಾ ವಿಪರ್ಯಾಸಾದಿ ದೋಷಗಳು ನೀರಾಜನದಿಂದ ಪರಿಹೃತವಾಗುತ್ತವೆ.

**ಮಂತ್ರಹೀನಂ ಕ್ರಿಯಾಹೀನಂ ಯತ್ ಕೃತಂ ಪೂಜನಂ ಹರೇಃ।**
**ಸರ್ವಂ ಸಂಪೂರ್ಣತಾಮೇತಿ ಕೃತೇ ನೀರಾಜನೇ ಶುಭೇ (ಶಿವೇ)**

**144. ಮಂಗಳಾರತಿ ಮಾಡುವ ರೀತಿ ಹೇಗೆ?**

ಮೊದಲು ಪಾದಕ್ಕೆ ನಾಲ್ಕು ಬಾರಿ ಪ್ರದಕ್ಷಿಣಾಕಾರವಾಗಿ ನೀರಾಜನ ಮಾಡುವುದು. ಅನಂತರ ನಾಭಿದೇಶದಲ್ಲಿ ಎರಡು ಬಾರಿ ನೀರಾಜನ, ಮುಖದಲ್ಲಿ ಕೇವಲ ಒಂದು ಬಾರಿ, ಅನಂತರ ಎಲ್ಲಾ ಅಂಗಗಳಲ್ಲಿಯೂ ಪಾದದಿಂದ ತಲೆಯವರೆಗೂ ಏಳು ಬಾರಿ ನೀರಾಜಿಸುವುದು ಒಂದು ಕ್ರಮ.

**ಆದೌ ಚತುಷ್ಪಾದತಲೇ ಚ ವಿಷ್ಣೋ ।ದ್ವೌ ನಾಭಿದೇಶೇ ಮುಖಮಂಡಲೈಕಂ ।**
**ಸರ್ವೇಷು ಚಾಂಗೇಷ್ವಪಿ ಸಪ್ತವಾರಾನ್ । ಆರಾತ್ರಿಕಂ ಭಕ್ತಜನಸ್ತು ಕುರ್ಯಾತ್ ॥**

**145. ಮತ್ತೊಂದು ಕ್ರಮ ಯಾವುದು?**

ನೀರಾಜನವನ್ನು ಪಾದಕ್ಕೆ ಮೂರು ಬಾರಿ ಪ್ರದಕ್ಷಿಣಾಕಾರವಾಗಿ ಆರತಿ, ನಾಭಿದೇಶಕ್ಕೆ ಮೂರು ಬಾರಿ, ಮುಖಪದ್ಮದಲ್ಲಿ ಮೂರು ಬಾರಿ, ಸರ್ವಾಂಗಗಳಲ್ಲಿಯೂ ಮೂರು ಬಾರಿ ನೀರಾಜನವನ್ನು ಮಾಡುವುದು

ಮತ್ತೊಂದು ಕ್ರಮ.

**ಪಾದದ್ವಯೇ ತ್ರಿರಾವೇಷ್ಟ್ಯ ಮಧ್ಯೇ ತ್ರಿಃ ಮುಖಪಂಕಜೇ ತ್ರಿಃ।**
**ಆವೇಷ್ಟಯೇಚ್ಚ ಸರ್ವಾಣಿ ಏವಮಾರಾತ್ರಿಕಂ ಭವೇತ್॥**

ನೀರಾಜನ ಕಾಲದಲ್ಲಿ ದೇವರ ಮುಖದರ್ಶನವು ಕೋಟಿ ಬ್ರಹ್ಮಹತ್ಯೆಗಳನ್ನು ಕೋಟಿ ಅಗಮ್ಯಾಗಮನದೋಷವನ್ನು ನಾಶಮಾಡುತ್ತದೆ.

**ಕೋಟಿಯೋ ಬ್ರಹ್ಮಹತ್ಯಾದಿ ಅಗಮ್ಯಾಗಮಕೋಟಯಃ।**
**ದರ್ಶನಾದೇವ ಗಚ್ಛಂತಿ ವಿಷ್ಣೋರಾರಾತ್ರಿಕಂ ಮುಖಮ್॥**

## 146. ಮಂಗಳಾರತಿ ಸ್ವೀಕಾರ ಕ್ರಮ ಹೇಗೆ?

ಮಂಗಳ ನೀರಾಜನ ಆದನಂತರ ಮಂಗಳಾರತಿಯನ್ನು ಎರಡೂ ಕೈಗಳಿಂದ ತೆಗೆದುಕೊಂಡು ಕಣ್ಣು ಬಾಯಿ, ತಲೆಗೆ ಮುಟ್ಟಿಸುವರು. ಇದು ಅಜ್ಞಾನ ಮೂಲಕವಾದದ್ದು. ಆರತಿಯನ್ನು ಒಂದು ಕೈಯಿಂದ ಮಾತ್ರ ತೆಗೆದುಕೊಳ್ಳಬೇಕು. ಹಸ್ತದ್ವಯ ಮಂಗಳಾರತಿ ಸ್ವೀಕಾರಕ್ಕೆ ಅಯುಕ್ತವೆಂದು ವರಾಹದೇವರು ತನ್ನ ಪತ್ನಿಗೆ ಹೀಗೆ ಹೇಳಿದ್ದಾರೆ.

**ಆರಾತ್ರಿಗ್ರಹಣೇ ಕಾಲೇ ಏಕಹಸ್ತೇನ ಯೋಜಯೇತ್।**
**ಯದಿ ಹಸ್ತದ್ವಯೇನೈವ ಮಮ ದ್ರೋಹೀ ನ ಸಂಶಯಃ॥**

## ಸ್ಪರ್ಶಿಸಬೇಕಾದ ಸ್ಥಳಗಳು

ಕೆಲವರು ಭಕ್ತಿಭಾವವನ್ನು ತೋರಿಸಲೆಂದೆ ಎರಡೂ ಕೈಗಳಿಂದ ಪುನಃ ಪುನಃ ಬಿಸಿಮಾಡಿಕೊಂಡು ತಮ್ಮ ಎರಡು ಕಣ್ಣುಗಳಿಗೆ ಮುಟ್ಟಿಸುವರು ಆದರೆ ಇದು ಯುಕ್ತವಲ್ಲ.

ಆರತಿಯನ್ನು ಬಲಗೈಯ್ಯಲ್ಲಿ ಮಾತ್ರ ಸ್ವೀಕರಿಸಿ ಅನಂತರ ಅದರಿಂದ ನಾಭಿಯ ಎಡಭಾಗ, ಹೃದಯ, ತಲೆ ಹೀಗೆ ಅಥವಾ ತಲೆ, ಹೃದಯ, ನಾಭಿ ಹೀಗೆ ಸ್ಪರ್ಶಮಾಡಬೇಕು. ನಮ್ಮ ನಾಭಿಯ ಎಡಭಾಗದಲ್ಲಿ ಪಾಪಪುರುಷ ಇರುವನು.

**ಬ್ರಹ್ಮಹತ್ಯಾ ಶಿರಸ್ಕಂ ಚ - ಕುಕ್ಷೌ ವಾಮೇ ವಿಚಿಂತಯೇತ್।**

ಎಂಬಂತೆ ಪಾಪಪುರುಷನನ್ನು ಮೊದಲು ಒಣಗಿಸಿ ಹೃದಯಕ್ಕೆ ತಂದು ಅಲ್ಲಿ ಸುಟ್ಟು ಹಾಕಿ, ಶಿರಸ್ಸಿನಲ್ಲಿರುವ ಅಮೃತದಿಂದ ನಮ್ಮ ಶರೀರವನ್ನು ಪ್ಲಾವನ ಮಾಡಿ ಸುವುದು ಇದರ ಉದ್ದೇಶವಾಗಿದೆ.

ಅಥವಾ ತಲೆಯಲ್ಲಿರುವ ಅಮೃತವನ್ನು ಹೃದಯಕ್ಕೆ ತಂದು ಹೃದಯದಲ್ಲಿರುವ ಅಗ್ನಿಯನ್ನು ನಾಭಿಗೆ ತಂದು ನಾಭಿಯ ಎಡಭಾಗದಲ್ಲಿರುವ ಪಾಪ ರೂಪಿಯನ್ನು

ಸುಟ್ಟು ನಾಭಿಯ ದ್ವಾರದಿಂದ ಹೊರಗೆ ಹೋದನೆಂದು ಚಿಂತಿಸುವುದು.

**147. ಮಂಗಳಾರತಿ ಸ್ವೀಕಾರದ ಫಲ ಏನು?**

ಅನೇಕ ಬ್ರಹ್ಮಹತ್ಯಾದಿ ದೋಷಗಳು ಆರತಿ ಸ್ವೀಕಾರದಿಂದ ನಷ್ಟವಾಗುತ್ತವೆ.

**ಕೌತುಕಂ ಶೃಣು ಮೇ ದೇವಿ ಉಷ್ಣೋರ್ನಿರ್ಮಾಲ್ಯವಹ್ನಿನಾ।**
**ಬ್ರಹ್ಮಹತ್ಯಾದಿಪಾಪಾನಾಂ ನಾಶನಂ ಕೀರ್ತಿದಂ ಸ್ಮೃತಮ್॥**

ಕೆಲವರು ಮಂಗಳಾರತಿಯನ್ನು ಪೂರ್ಣವಾಗಿ ಉರಿಯುವಾಗಲೇ ಆರಿಸುವರು. ಈ ರೀತಿ ಆರತಿಯನ್ನು ತಾನಾಗಿಯೇ ಆರಿ ಹೋಗವ ಮೊದಲು ಆರಿಸಬಾರದು. ಅದರ ಕಪ್ಪನ್ನು ತೆಗೆಯುವ ಕೆಲಸವನ್ನು ಮಾಡಬಾರದು. ಆರಿಸಿದರೆ ಅಂಧತ್ವ, ಜಡತ್ವ ಬರುತ್ತದೆ.

**ತಾನ್ ಪ್ರಯೋಧ್ಯಾನ್ನ ಹಿಂಸ್ಯಾತ್ತು ನ ವಾ ತೈಲನಿಯೋಜಿತಾನ್।**
**ಕುರ್ವೀತ ದೀಪಹರ್ತಾ ಚ ಮುಗ್ಧಾಂಧೋ ಜಾಯತೇ ಜಡಃ॥**

**148. ದೀಪವನ್ನು ಆರಿಸುವ ವಿಧಾನ ಹೇಗೆ?**

ಕುಪ್ಪಸದ ಗಾಳಿಯಿಂದಾಗಲೀ, ಮುಖದ ಗಾಳಿಯಿಂದಾಗಲೀ ಕೈಯನ್ನು ಬೀಸುವ ಮೂಲಕ ಉಂಟಾದ ಗಾಳಿಯಿಂದಾಗಲೀ ದೀಪವನ್ನು ಆರಿಸಬಾರದು. ಸೀರೆಯ ಸೆರಗಿನ ಗಾಳಿಯಿಂದ ದೀಪವನ್ನು ಆರಿಸಬೇಕು.

ಈ ದೀಪವಾದರೂ ಪೂರ್ಣವಾಗಿ ಆರಿಹೋಗುವವರೆಗೂ ಸುಮ್ಮನಿರಬೇಕು.

**ಕಂಚುಕೋತ್ಥೇನ ಮರುತಾ ದೀಪಂ ನೈವ ನಿವಾರಯೇತ್।**
**ಆನನೋತ್ಥೇನ ಮರುತಾ ಹಸ್ತಸಂಜಾತವಾಯುನಾ॥**
**ವಿಸೃಜೇತಿ ಸಮುಚ್ಚಾರ್ಯ ಲೋಪಯೇದ್ ದೀಪಮಂಚಲಾತ್।**
**ತಾವಚ್ಚ ತೂಷ್ಣೀಂ ಸ್ಥಾತವ್ಯಂ ಯಾವಚ್ಛೇಷಃ ಪ್ರಶಾಮ್ಯತಿ॥**

# ರಂಗೋಲಿ

**149. ರಂಗೋಲಿಯನ್ನು ಹೇಗೆ ಮಾಡಬೇಕು?**

ರಂಗೋಲಿಯನ್ನು ಬೆಣಚುಕಲ್ಲು ಅಥವಾ ಸ್ಫಟಿಕಾ ಇವುಗಳನ್ನು ಉಪಯೋಗಿಸಿ ತಯಾರಿಸಬಹುದು. ಬೆಣಚು ಕಲ್ಲನ್ನು ಉಪಯೋಗಿಸಿ ರಂಗೋಲಿಯನ್ನು ತಯಾರಿಸುವಾಗ ಬೆಣಚುಕಲ್ಲನ್ನು ಹಾರಿಯಿಂದ ಕುಟ್ಟಬೇಕು. ಕುಟ್ಟುವಾಗ ಕುಟ್ಟುವವರ ಮನಸ್ಸು ಅಹಂಕರ್ತೃತ್ವಾದಿಗಳಿಂದ ವಿರಹಿತವಾಗಿ ನಿರ್ಮಮ - ನಿರಹಂಕಾರ ಸಹಿತವಾಗಿ ಪುಲಕಿತ

ವಾಗಿರಬೇಕು. ಬೆಣಚು ಕಲ್ಲುಗಳನ್ನು ಕುಟ್ಟಿ ಪುಡಿ ಮಾಡುವಾಗ ಹಾರಿಯಿಂದಲೇ ಮಾಡಬೇಕು. ಏಕೆಂದರೆ ಬೆಣಚುಕಲ್ಲಿನಲ್ಲಿ ಅಗ್ನಿಯ ಅಂಶಹೆಚ್ಚಿರುವುದರಿಂದ ಆ ಕಲ್ಲಿನ ಪುಡಿಯು ಸ್ಫುರಣವಾಗಿ ಅದು ಶುಭ್ರತೆಯನ್ನು ಪಡೆಯುತ್ತದೆ. ಈ ಶುಭ್ರತೆಗೆ ಮೂಲಕಾರಣ ಹಾರಿ.

**150. ಹೊರಬಾಗಿಲ ಹೊಸ್ತಿಲಿಗೆ / ತಲೆಬಾಗಿಲ ಹೊಸ್ತಿಲಿಗೆ ರಂಗೋಲಿಯನ್ನು ಹಾಕುವ ವಿಧಾನ ಹೇಗೆ?**

1. ಮೊದಲು ಹೊಸ್ತಿಲಿನ ಮೇಲೆ ಅಡ್ಡವಾಗಿ ಐದು ಗೆರೆಗಳನ್ನು ರಂಗೋಲಿಯಿಂದ ಎಳೆಯಬೇಕು.
2. ಅನಂತರದಲ್ಲಿ ಒಂದು ಚಕ್ರದ ಆಕೃತಿಯನ್ನು ರಂಗೋಲಿಯಿಂದ ಹಾಕಬೇಕು.
3. ಪುನಃ ಐದು ಗೆರೆಗಳನ್ನು ಎಳೆಯಬೇಕು.
4. ಅನಂತರದಲ್ಲಿ ಮತ್ತೊಂದು ಚಕ್ರದ ಆಕೃತಿಯನ್ನು ಹಾಕಬೇಕು.
5. ಪುನಃ 5 ಗೆರೆಗಳನ್ನು ಎಳೆಯಬೇಕು.
6. ಪುನಃ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.
7. ಪುನಃ 5 ಗೆರೆಗಳನ್ನು ಎಳೆಯಬೇಕು.
8. ಅನಂತರದಲ್ಲಿ ಮತ್ತೊಂದು ಚಕ್ರದ ಆಕೃತಿಯನ್ನು ಹಾಕಬೇಕು.
9. ಪುನಃ 5 ಗೆರೆಗಳನ್ನು ಎಳೆಯಬೇಕು.

**ವಿವರಣೆ :-**

1. 5 ಗೆರೆಗಳನ್ನ ಪಂಚ ಜ್ಞಾನೇಂದ್ರಿಯ ಮತ್ತು ಪಂಚ ಕರ್ಮೇಂದ್ರಿಯಗಳ ಸಂಕೇತವೆಂದು ತಿಳಿಯಬೇಕು.

2. ಐದೈದು ಗೆರೆಗಳನಂತರ ನಾಲ್ಕು ಮಾರ್ಗಗಳು ಕಾಣಿಸಿಕೊಳ್ಳುತ್ತವೆ. ಹೀಗೆ ಕಾಣಿಸಿಕೊಳ್ಳುವ ನಾಲ್ಕು ಮಾರ್ಗಗಳನ್ನು ಧರ್ಮ-ಅರ್ಥ-ಕಾಮ-ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳ ಸಂಕೇತವೆಂದು ಭಾವಿಸಬೇಕು.

3. ಜನನ-ಮರಣರೂಪವಾದ ಈ ಸಂಸಾರವು, ಸುಖ-ದುಃಖಗಳಂತೆ ಒಂದಾದನಂತರ ಮತ್ತೊಂದರಂತೆ ಬರುತ್ತದೆ. ಇದು ಸಹಜ. 'ಚಕ್ರವತ್ಪರಿವರ್ತಂತೇ ಸುಖಾನಿ ಚ ದುಃಖಾನಿ ಚ' ಎಂಬಂತೆ ತಿರುಗಣೆಯಂತೆ

ಚಕ್ರಾಕಾರವಾಗಿದೆ ಈ ಸಂಸಾರ. ಇದರ ಒಂದು ಸಂಕೇತವಾಗಿ ಐದೈದು ಅಡ್ಡಗೆರೆಗಳನ್ನು ಎಳೆದ ಮೇಲೆ ಒಂದೊಂದು ಚಕ್ರದ ಆಕೃತಿಯನ್ನು ಹಾಕಬೇಕು.

**151. ರಂಗೋಲಿಯನ್ನು ಯಾವ ಬೆರಳಿನಿಂದ ಹಾಕಬೇಕು ?**

ರಂಗೋಲಿಯನ್ನು ತೋರು ಬೆರಳು =ತರ್ಜನೀ ಮತ್ತು ಹೆಬ್ಬೆರಳಿನಿಂದ ಹಾಕಬೇಕು. ರಂಗೋಲಿಯನ್ನು ಹಾಕುವಾಗ ಉಪಯೋಗಿಸುವ ಹೆಬ್ಬೆಟ್ಟು "ಅಂಗುಷ್ಠಃ ಪುಷ್ಟಿದಃ ಪ್ರೋಕ್ತಃ" ಎಂದು ಹೇಳಿದಂತೆ ಪುಷ್ಟಿಯನ್ನು ಕೊಡುತ್ತದೆ. ತೋರು ಬೆರಳು "ತರ್ಜನೀ ಮೋಕ್ಷದಾಯಿನೀ" ಎಂದು ಹೇಳಿದಂತೆ ಮೋಕ್ಷವನ್ನು ಕೊಡುತ್ತದೆ.

**152. ಅಂಗಳದಲ್ಲಿ ರಂಗೋಲಿಯನ್ನು ಯಾವಾಗ ಹಾಕಬೇಕು?**

ಮೊದಲು ತಲೆಬಾಗಿಲಿನ ಹೊಸ್ತಿಲಿಗೆ ರಂಗೋಲಿಯನ್ನು ಹಾಕಿದ ಮೇಲೆ ಅಂಗಳದಲ್ಲಿ ರಂಗೋಲಿಯನ್ನು ಹಾಕಬೇಕು. ಅಂಗಳವು ಎಲ್ಲರೂ ಓಡಾಡಿ ತುಳಿದಾಡುವ ಜಾಗವಾದ್ದರಿಂದ ಅಂಗಳದಲ್ಲಿ ರಂಗೋಲಿಯಿಂದ ಶಂಖ-ಚಕ್ರ-ಪವಿತ್ರಗಂಟುಗಳನ್ನು ಹಾಕಬಾರದು. ಅರಿಷಿಣ-ಕುಂಕುಮವನ್ನು ಏರಿಸುವಾಗ ಕಲ್ಯಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಭೂದೇವಿಪತಿ ಶ್ರೀವರಾಹರೂಪಿ ಪರಮಾತ್ಮನನ್ನು ಚಿಂತಿಸಬೇಕು.

**153. ನಡುಮನೆಯ ಹೊಸ್ತಿಲಿಗೆ ರಂಗೋಲಿ ಹಾಕುವ ವಿಧಾನ ಹೇಗೆ?**

1. ನಡುಮನೆಯ ಹೊಸ್ತಿಲಿನ ಮೇಲೆ ಮೊದಲು ಚಕ್ರದ ಆಕೃತಿ ಒಂದನ್ನು ಹಾಕಬೇಕು.
2. ನಂತರ ಅಡ್ಡವಾಗಿ ನಾಲ್ಕು ಗೆರೆಗಳನ್ನು ರಂಗೋಲಿಯಿಂದ ಎಳೆಯಬೇಕು.
3. ಪುನಃ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.
4. ಅನಂತರದಲ್ಲಿ ಪುನಃ ನಾಲ್ಕು ಗೆರೆಗಳನ್ನು ಎಳೆಯಬೇಕು.
5. ಪುನಃ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.
6. ಅನಂತರದಲ್ಲಿ ಪುನಃ ನಾಲ್ಕುಗೆರೆಗಳನ್ನು ಎಳೆಯಬೇಕು.
7. ಪುನಃ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.
8. ಅನಂತರದಲ್ಲಿ ಪುನಃ ನಾಲ್ಕು ಗೆರೆಗಳನ್ನು ಎಳೆಯಬೇಕು.

9. ಪುನಃ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.

ಒಟ್ಟು ಐದು ಚಕ್ರದ ಆಕೃತಿಗಳು - ಒಂದೊಂದು ಸಲಕ್ಕೆ ನಾಲ್ಕು ನಾಲ್ಕು ಗೆರೆಗಳಂತೆ ನಾಲ್ಕು ಸಲ ಗೆರೆಗಳನ್ನು ಎಳೆಯಬೇಕು.

ವಿವರಣೆ:- ಸಂಸಾರದ ಆಗು - ಹೋಗುಗಳೆಲ್ಲಾ ನಡುಮನೆಯಲ್ಲೇ ನಡೆಯುತ್ತದೆ. ನಡುಮನೆಯಲ್ಲಿ ನಡೆಯುವ ಎಲ್ಲಾ ಕ್ರಿಯೆಗಳಿಗೆ ತತ್ವಾಭಿಮಾನಿದೇವತೆಗಳು ಮತ್ತು ಇವರ ಅಂತರ್ಯಾಮಿಯಾದ ಭಾರತೀರಮಣ ಮುಖ್ಯಪ್ರಣಾಂತರ್ಗತ ಅನಿರುದ್ಧ-ಪ್ರದ್ಯುಮ್ನ ಸಂಕರ್ಷಣ ಮತ್ತು ವಾಸುದೇವ ಇವರುಗಳಿಂದ ಘಟನೆಯಾಗುತ್ತದೆ. ಇದರ ಸಂಕೇತವಾಗಿ ನಡುಮನೆಯ ಹೊಸ್ತಿಲಿನ ಮೇಲೆ ಒಂದೊಂದು ಸಲಕ್ಕೆ ನಾಲ್ಕು-ನಾಲ್ಕು ಗೆರೆಗಳಂತೆ ನಾಲ್ಕು ಸಲ ಗೆರೆಗಳನ್ನು ರಂಗೋಲಿಯಿಂದ ಎಳೆಯಬೇಕು. ಈ ನಾಲ್ಕು ಗೆರೆಗಳಲ್ಲಿ ಅನಿರುದ್ಧ - ಪ್ರದ್ಯುಮ್ನ ಸಂಕರ್ಷಣ ಮತ್ತು ವಾಸುದೇವ ಎಂಬ ನಾಲ್ಕು ಭಗವದ್ರೂಪಗಳನ್ನು ಚಿಂತಿಸಬೇಕು. ಅನಿರುದ್ಧನ ಪತ್ನಿ ಶಾಂತಾ-ಪ್ರದ್ಯುಮ್ನನ ಪತ್ನಿ ಕೃತಿ - ಸಂಕರ್ಷಣ ಪತ್ನಿ ಜಯಾ ಮತ್ತು ವಾಸುದೇವನ ಪತ್ನಿ ಮಾಯಾ ಎಂಬುದಾಗಿ ತಿಳಿಯಬೇಕು.

**154. ದೇವರ ಮನೆಯ ಹೊಸ್ತಿಲಿಗೆ ರಂಗೋಲಿಯನ್ನು ಹಾಕುವ ವಿಧಾನ ಹೇಗೆ?**

1. ದೇವರ ಮನೆ ಹೊಸ್ತಿಲಿನ ಮೇಲೆ ಮೊದಲು ಅಡ್ಡವಾಗಿ ಮೂರು ಗೆರೆಗಳನ್ನು ಎಳೆಯಬೇಕು.
2. ಅನಂತರದಲ್ಲಿ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.
3. ಪುನಃ ಮೂರು ಗೆರೆಗಳನ್ನು ಎಳೆಯಬೇಕು.
4. ಅನಂತರದಲ್ಲಿ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.
5. ಪುನಃ ಮೂರು ಗೆರೆಗಳನ್ನು ಎಳೆಯಬೇಕು.
6. ಅನಂತರದಲ್ಲಿ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.
7. ಪುನಃ ಮೂರು ಗೆರೆಗಳನ್ನು ಎಳೆಯಬೇಕು.
8. ಅನಂತರದಲ್ಲಿ ಒಂದು ಚಕ್ರದ ಆಕೃತಿಯನ್ನು ಹಾಕಬೇಕು.
9. ಪುನಃ ಅಡ್ಡವಾಗಿ ಮೂರು ಗೆರೆಗಳನ್ನು ಎಳೆಯಬೇಕು.

**ವಿವರಣೆ:-**

ಜಾಗ್ರದವಸ್ಥೆ - ಸ್ವಪ್ನಾವಸ್ಥೆ ಸುಷುಪ್ತ್ಯವಸ್ಥೆ ಎಂದು ಮೂರು ಅವಸ್ಥೆಗಳು ಅವಸ್ಥಾತ್ರಯವೆಂದು ಪ್ರಸಿದ್ಧವಾಗಿವೆ. ಜಾಗ್ರದವಸ್ಥೆಗೆ ಅಭಿಮಾನಿ ಭಗವದ್ರೂಪ ಶ್ರೀದೇವಿಪತಿ ವಿಶ್ವ, ಸ್ವಪ್ನಾವಸ್ಥೆಗೆ ಅಭಿಮಾನಿ ಭಗವದ್ರೂಪ ಭೂದೇವಿಪತಿ ತೈಜಸ. ಸುಷುಪ್ತ್ಯವಸ್ಥೆಗೆ ಅಭಿಮಾನಿ ಭಗವದ್ರೂಪ ದುರ್ಗಾದೇವಿಪತಿ ಪ್ರಾಜ್ಞ. ಸಕಲ ಜೀವರಿಗೂ ಅವಸ್ಥಾತ್ರಯವನ್ನು ಕೊಡತಕ್ಕವನು ಶ್ರೀಪರಮಾತ್ಮನೇ ಹೊರತು ಬೇರೆ ಯಾರೂ ಅಲ್ಲ. ಇದನ್ನು ನಾವು ಯಾವಾಗಲೂ ಚಿಂತಿಸಬೇಕು. ಇದರ ಒಂದು ಸಂಕೇತವಾಗಿ ದೇವರ ಮನೆಯ ಹೊಸ್ತಿಲಿನ ಮೇಲೆ ಮೂರು ಗೆರೆಗಳನ್ನು ಅಡ್ಡವಾಗಿ ಎಳೆಯಲಾಗುತ್ತದೆ.

**ಸೂಚನೆ** :- ಸ್ತ್ರೀಯರು ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ಮಡಿ ಬಟ್ಟೆಯನ್ನು ಉಡುವಾಗ ಶ್ರೀಉಪೇಂದ್ರನಾಮಕ ಪರಮಾತ್ಮನನ್ನು ಚಿಂತಿಸಿ. ಗದಾ-ನಾರಾಯಣ ಮುದ್ರೆ-ಕುಂಕುಮ-ಅರಿಷಿಣ-ಇವುಗಳನ್ನು ಧಾರಣ ಮಾಡಿ ಗುರುಮಂತ್ರವನ್ನು ಮಾಡಿಕೊಂಡು ದೇವರ ಮುಂದೆ ರಂಗೋಲಿಯನ್ನು ಹಾಕಬೇಕು.

# ಹಸ್ತೋದಕ

**155. ಉಚ್ಛಿಷ್ಟಶಬ್ದಾರ್ಥವೇನು?**

ಉ. ಉಚ್ಛಿಷ್ಟಶಬ್ದಕ್ಕೆ ಅನೇಕಾರ್ಥಗಳಿರುವುದು ಕೋಶಗಳಿಂದ ತಿಳಿದು ಬರುತ್ತದೆ. ಅವುಗಳನ್ನು ಸಂದರ್ಭಾನುಸಾರ ತೆಗೆದುಕೊಳ್ಳಬೇಕೆಂಬುದು ಸರ್ವಸಮ್ಮತವಾಗಿದೆ. ಪ್ರಕೃತದಲ್ಲಿ ಉಚ್ಛಿಷ್ಟ ಶಬ್ದದ ಎಲ್ಲಾ ಅರ್ಥಗಳನ್ನೂ ಇಲ್ಲಿ ಹೇಳಿ, ಅವುಗಳು ಗ್ರಾಹ್ಯವೋ ಅಗ್ರಾಹ್ಯವೋ ಎಂಬುದನ್ನು ಹೇಳುವುದು ಅನಾವಶ್ಯಕ ಮತ್ತು ಪ್ರಕೃತ ಅನುಪಯುಕ್ತವಾದ್ದರಿಂದ ಅವುಗಳನ್ನು ಹೇಳಿಲ್ಲ. ಆದರೆ ಕೋಶಗಳ ಪ್ರಕಾರ ಉಚ್ಛಿಷ್ಟ ಶಬ್ದಕ್ಕೆ ದೇವರಿಗೆ ನಿವೇದನ ಮಾಡಿದ ಅನ್ನ ಮೊದಲಾದುದು ಎಂಬ ಅರ್ಥವೂ ಇರುವುದು ಇಲ್ಲಿ ಅತ್ಯಂತ ಗಮನಾರ್ಹ.

ಉದಾಹರಣೆಗೆ ಆಪಸ್ತಂಬ ಸೂತ್ರದಲ್ಲಿ ಹೇಳಿದ ''ಗುರೂಚ್ಛಿಷ್ಟಮಪಿ ಗ್ರಾಹ್ಯಂ'' ಎಂಬುವಲ್ಲಿ ಗುರುಗೀತೆಯಲ್ಲಿ ಹೇಳಿದ ''ಗುರೋರುಚ್ಛಿಷ್ಟ ಭೋಜನಂ'' ಎಂಬುವಲ್ಲಿ- ಬಾದರಾಯಣವಿಠ್ಠಲರ ಕೃತಿಯಲ್ಲಿ ಹೇಳಿದ

''ಗುರುಪಾದೋದಕ ಗುರೂಚ್ಛಿಷ್ಟ ಭುಂಜಿಸು'' ಎಂಬುವಲ್ಲಿ ಮತ್ತು ಇದರಂತೆ ಇರುವ ಇನ್ನೂ ಅನೇಕ ಸ್ಥಳಗಳಲ್ಲಿ ''ಗುರುಗಳಿಗೆ/ಬೃಂದಾವನಸ್ಥಯತಿಗಳಿಗೆ ನಿವೇದನ ಮಾಡಿದ ಅನ್ನ ಮೊದಲಾದುದು ಎಂಬ ಅರ್ಥವೇ ವಿವಕ್ಷಿತವಾಗಿದೆ. ಇಂತಹ ಉಚ್ಛಿಷ್ಟವನ್ನು ಭುಂಜಿಸುವುದು ಶಾಸ್ತ್ರನಿಷಿದ್ಧವಲ್ಲ. ಪ್ರತ್ಯುತ ಶಾಸ್ತ್ರ-ಸಂಪ್ರದಾಯ ಸಮ್ಮತವೇ ಆಗಿರುತ್ತದೆ.

**156. "ಯತ್ಯನ್ನಂ ಯತಿಪಾತ್ರಸ್ಥಂ ಯತಿನಾ ಪ್ರೇರಿತಂ ತಥಾ ।**
**ಅನ್ನತ್ರಯಂ ನ ಭುಂಜೀತ ಭುಕ್ತ್ವಾ ಚಾಂದ್ರಾಯಣಂ ಚರೇತ್" ॥**

**"ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್" - ಎಂಬೀ ಮೊದಲಾದ ವಾಕ್ಯಗಳು ಮೇಲ್ನೋಟದಲ್ಲಿ ಯತಿಗಳ ಹಸ್ತೋದಕ ಸ್ವೀಕಾರ ನಿಷೇಧಪರವಾದವುಗಳೆಂದು ತೋರುತ್ತವೆ. ಅವುಗಳ ಪರಮಾರ್ಥವೇನು?**

ಉ. ಈ ಮೇಲೆ ಕಾಣಿಸಿದ ವಾಕ್ಯಗಳ ಪರಮಾರ್ಥವನ್ನು ಈ ಕೆಳಕಂಡಂತೆ ಹೇಳಿ ಅವುಗಳು ಯತಿಹಸ್ತೋದಕ ಸ್ವೀಕಾರ ನಿಷೇಧ ಪರವಾದವುಗಳಲ್ಲ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

**1) ಯತ್ಯನ್ನಂ ಯತಿಪಾತ್ರಸ್ಥಂ ಯತಿನಾ ಪ್ರೇರಿತಂ ತಥಾ ।**
**ಅನ್ನತ್ರಯಂ ನ ಭುಂಜೀತ ಭುಕ್ತ್ವಾ ಚಾಂದ್ರಾಯಣಂ ಚರೇತ್ ।**

- ಎಂಬಲ್ಲಿರುವ ಯತ್ಯನ್ನ ಶಬ್ದಕ್ಕೆ ಯತಿಗಳ ಅನ್ನ ಚಿಕ್ಕ ನೈವೇದ್ಯ - ಯತಿಗಳಿಗೆ ಮಾಡಿದ ಅನ್ನ ಮೊದಲಾದವುಗಳು ಎಂದು ಅರ್ಥ, ಈ ಅನ್ನವನ್ನು ಯತಿಗಳ ಹೊರತಾಗಿ ಬೇರೆಯವರು ಭುಂಜಿಸಬಾರದು. ಯತಿಗಳ ಅನ್ನಾದಿಗಳನ್ನು ದೇವರಿಗೆ ಮಾತ್ರ ಸಮರ್ಪಿಸಲಾಗುತ್ತದೆ. ರಮಾದೇವಿ - ವಾಯುದೇವರು ಮುಂತಾದವರುಗಳಿಗೆ ಎಂದೂ ಸಮರ್ಪಿಸಬಾರದು. ಸಮರ್ಪಿಸುವುದೂ ಇಲ್ಲ, ದೇವರಿಗೆ ಮಾತ್ರ ಸಮರ್ಪಿಸಿದ ಅನ್ನಾದಿಗಳನ್ನು ಯತಿಗಳು ಸ್ವೀಕರಿಸಬೇಕು. ರಮಾ-ಬ್ರಹ್ಮಾದಿಗಳಿಗೆ ಸಮರ್ಪಿಸಿದ ಅನ್ನಾದಿಗಳನ್ನು ಯತಿಗಳು ಸ್ವೀಕರಿಸಬಾರದು, ಇದು ಯತಿಧರ್ಮ, ಯತಿಗಳನ್ನು ಬಿಟ್ಟು ಬೇರೆಯವರಾದರೂ ದೇವರಿಗೆ ಸಮರ್ಪಿಸಿದಂತೆ ರಮಾದಿಗಳಿಗೂ ಸಮರ್ಪಿಸಿದ ಅನ್ನಾದಿಗಳನ್ನೇ ಭುಂಜಿಸಬೇಕು. ಇದು ಶಾಸ್ತ್ರನಿಯಮ.

ಪ್ರಕೃತ ಈ ಮೇಲೆ ಕಾಣಿಸಿದ ಯತ್ಯನ್ನವು ರಮಾದಿಗಳಿಗೆ ಸಮರ್ಪಿತವಾಗಿರುವುದಿಲ್ಲವಾದಕಾರಣ ಅದನ್ನು ನಾವು ಭುಂಜಿಸಬಾರದು. ಹಾಗೆ ಭುಂಜಿಸಿದಲ್ಲಿ ಪ್ರಾಯಶ್ಚಿತ್ತರೂಪದಲ್ಲಿ ಚಾಂದ್ರಾಯಣವ್ರತವನ್ನು ಅನುಷ್ಠಿಸ

ಬೇಕಾಗುತ್ತದೆ. ಈ ರೀತಿಯಾಗಿ ಯತ್ಯನ್ನ ಶಬ್ದಕ್ಕೆ ಅರ್ಥವನ್ನು ಹೇಳಿದರೆ ತಪ್ಪಾಗಲಿಕ್ಕಿಲ್ಲವೆಂದು ತೋರುತ್ತದೆ.

ಇದರಂತೆ ಜೀವಂತ ಯತಿಗಳು ಭೋಜನ ಮಾಡಿದ ಮೇಲೆ ಅವರ ಎಲೆಯಲ್ಲಿ ಮಿಕ್ಕಿರುವ ಅನ್ನಾದಿಗಳನ್ನು (ಯತಿಪಾತ್ರಸ್ಥಮನ್ನಂ) ನಾವು ಭುಂಜಿಸಬಾರದು.

ಇದರಂತೆ ಉದಾಹರಣೆಗೆ ಜಿಲೇಬಿ ಚೆನ್ನಾಗಿದೆ ತಿನ್ನು ಎಂದು ಯತಿಗಳು ನಮಗೆ ಪ್ರೇರಣೆ ಮಾಡಿದಾಗ ಅದನ್ನು ತಿಂದರೆ ಆ ಅನ್ನಾದಿಗಳು ಯತಿಗಳಿಂದ ಪ್ರೇರಿತವಾದ ಅನ್ನಾದಿಗಳೆನಿಸುತ್ತವೆ. (ಯತಿನಾ ಪ್ರೇರಿತಮನ್ನಂ) ಇಂತಹ ಅನ್ನವನ್ನೂ ನಾವು ಭುಂಜಿಸಬಾರದು. ಹೀಗೆ

ಯತ್ಯನ್ನಂ ಯತಿಪಾತ್ರಸ್ಥಂ ಯತಿನಾ ಪ್ರೇರಿತಂ ತಥಾ।

ಅನ್ನತ್ರಯಂ ನ ಭುಂಜೀತ ಭುಕ್ತ್ವಾ ಚಾಂದ್ರಾಯಣಂ ಚರೇತ್। ಎಂಬ ವಾಕ್ಯದ ಅರ್ಥವನ್ನು ತಿಳಿಯಬೇಕು. ಆದರೆ ಬೃಂದಾವನಸ್ಥ ಯತಿಗಳಿಗೆ ಸಮರ್ಪಿತವಾದ ಅನ್ನಾದಿಗಳನ್ನು ಭುಂಜಿಸುವುದು, ಈ ಮೇಲೆ ಕಾಣಿಸಿದ ವಾಕ್ಯದಿಂದ ನಿಷೇಧಿಸಿಲ್ಲವೆಂಬುದನ್ನು ಮಾತ್ರ ಮರೆಯಬಾರದು. ಒಂದು ವೇಳೆ ಯತ್ಯನ್ನ ಶಬ್ದಕ್ಕೆ ಬೃಂದಾವನಸ್ಥಯತಿಗಳಿಗೆ ಸಮರ್ಪಿತವಾದ ಅನ್ನವೆಂದು ಅರ್ಥವನ್ನು ಹೇಳಿ ಅದನ್ನು ಭುಂಜಿಸುವುದು ನಿಷಿದ್ಧವೆಂದು ಹೇಳುವುದಾದರೆ ಅದು ಈ ಪೂರ್ವದಲ್ಲಿ ಬೃಂದಾವನಸ್ಥ ಯತಿಗಳಿಗೆ ಸಮರ್ಪಿತವಾದ ಅನ್ನಾದಿಗಳನ್ನು ಭುಂಜಿಸಬೇಕು ಎಂಬ ವಿಷಯಕ್ಕೆ ಉದಾಹರಿಸಿದ ಅನೇಕ ವಾಕ್ಯಗಳಿಗೆ ವಿರುದ್ಧವಾಗುತ್ತದೆ ಎಂಬುವುದು ಗಮನಾರ್ಹ.

**157. ಯತಿಗಳ ಹಸ್ತೋದಕವೆಂದರೇನು?**

ಉ. ಮೂಲಬೃಂದಾವನ-ಮೃತ್ತಿಕಾ ಬೃಂದಾವನ-ಪ್ರತೀಕ-ಬೆಳ್ಳೀ ಮುಂತಾದ ಲೋಹದ ಬೃಂದಾವನ ಮುಂತಾದವುಗಳಲ್ಲಿ ಸನ್ನಿಹಿತರಾದ ಯತಿಗಳಿಗೆ ವಿಧಿಪೂರ್ವಕವಾಗಿ ನಿವೇದಿಸುವ ಅನ್ನಾದಿಗಳನ್ನು ಹಸ್ತೋದಕವೆಂದು ಕರೆಯುವುದು ರೂಢಿಯಲ್ಲಿ ಬಂದಿದೆ.

**158. ಯಾವುದೇ ಒಬ್ಬ ಯತಿಗಳ ಹೆಸರನ್ನು ಹೇಳಿ ಅವರ ಹಸ್ತೋದಕವನ್ನು ಸ್ವೀಕರಿಸಬೇಕು ಎಂಬ ವಿಷಯಕ್ಕೆ ಶ್ರುತಿ-ಸ್ಮೃತಿಗಳು ದೊರೆಯುತ್ತವೆಯಾ?**

ಉ. ಖಂಡಿತಾ ದೊರೆಯುವುದಿಲ್ಲ. ಉದಾಹರಣೆಗೆ ಶ್ರೀಪದ್ಮನಾಭ ತೀರ್ಥಶ್ರೀಪಾದಾನಾಂ ಹಸ್ತೋದಕಂ ಸ್ವೀಕುರ್ಯಾತ್, ಶ್ರೀಜಯತೀರ್ಥ

ಶ್ರೀಪಾದಾನಾಂ ಹಸ್ತೋದಕಂ ಸ್ವೀಕುರ್ಯಾತ್, ಶ್ರೀವ್ಯಾಸರಾಜ ಶ್ರೀಪಾದಾನಾಂ ಹಸ್ತೋದಕಂ ಸ್ವೀಕುರ್ಯಾತ್, ಶ್ರೀ ರಾಘವೇಂದತೀರ್ಥ ಶ್ರೀಪಾದಾನಾಂ ಹಸ್ತೋದಕಂ ಸ್ವೀಕುರ್ಯಾತ್, ಎಂಬೀ ಮುಂತಾಗಿ ಒಬ್ಬೊಬ್ಬ ಸ್ವಾಮಿಗಳವರ ಹೆಸರನ್ನು ಹೇಳಿ ಅವರ ಹಸ್ತೋದಕವನ್ನು ಸ್ವೀಕರಿಸಬೇಕೆಂದು ಶ್ರುತಿ-ಸ್ಮೃತಿವಾಕ್ಯಗಳು ಖಂಡಿತಾ ದೊರೆಯುವುದಿಲ್ಲ.

ಯಾವುದೇ ಮಠದ ಯಾವುದೇ ಯತಿಗಳ ಹೆಸರನ್ನು ಹೇಳಿ ಅವರ ಹಸ್ತೋದಕವನ್ನು ಸ್ವೀಕರಿಸಬೇಕೆಂದು ಶ್ರುತಿ-ಸ್ಮೃತಿವಾಕ್ಯಗಳು ಸಿಗುವುದಿಲ್ಲ. ಹಾಗೆ ಪ್ರಶ್ನೆ ಮಾಡುವುದರಲ್ಲಿ ಏನೂ ಹುರುಳಿಲ್ಲ. ಆದ್ದರಿಂದ ಉದಾಹರಣೆಗೆ ಶ್ರೀರಾಘವೇಂದ್ರಸ್ವಾಮಿಗಳವರ ಹಸ್ತೋದಕವನ್ನು ಸ್ವೀಕರಿಸಬೇಕೆಂದು ಹೇಳಿದರೆ, ಆ ವಿಷಯಕ್ಕೆ ಪ್ರಮಾಣತ್ವೇನ ಶ್ರುತಿ-ಸ್ಮೃತಿವಾಕ್ಯಗಳು ಉಂಟೆ? ಎಂದು ಪ್ರಶ್ನಿಸುವುದು ಎಷ್ಟರಮಟ್ಟಿಗೆ ಸಮಂಜಸವಾಗುತ್ತದೆ?

**159. ಗುರುಗಳ/ಯತಿಗಳ ಹಸ್ತೋದಕವನ್ನು ಸ್ವೀಕರಿಸಬೇಕು ಎಂಬ ವಿಷಯಕ್ಕೆ ಪ್ರಮಾಣವೇನು?**

ಉ. ಮೇಲ್ಕಂಡ ವಿಷಯಕ್ಕೆ ಕೆಲವೊಂದು ಪ್ರಮಾಣಗಳನ್ನು ಈ ಕೆಳಗೆ ಕೊಡಲಾಗಿದೆ.

ಆಪಸ್ತಂಬಸೂತ್ರೇ:-

''ಗುರೂಚ್ಛಿಷ್ಟಮಪಿ ಗ್ರಾಹ್ಯಂ ತಥಾ ಗುರುಪಾದೋದಕಸೇವನಂ ಹಿ ಕರ್ತವ್ಯಮ್'' ಅಂದರೆ ಗುರುಗಳ ಉಚ್ಛಿಷ್ಟವೂ ಗ್ರಾಹ್ಯ ಮತ್ತು ಗುರುಗಳ ಪಾದೋದಕ ಸೇವನವನ್ನು ಮಾಡಬೇಕು.

2) ಸ್ಕಾಂದೋತ್ತರಖಂಡೇ ಉಮಾ-ಮಹೇಶ್ವರ ಸಂವಾದೇ(ಅ.3):

ಗುರುಪಾದೋದಕಪಾನಂ ಗುರೂಚ್ಛಿಷ್ಟ ಭೋಜನಂ, ಗುರುಮೂರ್ತೇಃ ಸದಾ ಧ್ಯಾನಮ್। ಗುರೋರ್ನಾಮ್ನಃ ಸದಾ ಜಪಃ ಅಂದರೆ-ಗುರುಗಳ ಪಾದೋದಕ ಪಾನವನ್ನೂ ಗುರುಗಳ ಉಚ್ಛಿಷ್ಟ ಭೋಜನವನ್ನೂ - ಸದಾ ಗುರುಗಳ ಮೂರ್ತಿಧ್ಯಾನವನ್ನೂ ಮತ್ತು ಗುರುಗಳ ನಾಮಜಪವನ್ನೂ ಮಾಡಬೇಕು.

3) ಗುರೋಃ ಪಾದೋದಕಂ ಪೀತ್ವಾ, ಗುರೋರುಚ್ಛಿಷ್ಟಭೋಜನಮ್॥

ಅಂದರೆ ಗುರುಗಳ ಪಾದೋದಕವನ್ನು ಪಾನ ಮಾಡಿ ಅವರ ಉಚ್ಛಿಷ್ಟ ಭೋಜನವನ್ನೂ(ಮಾಡಬೇಕು)

4) ಭಾಗವತ-1-5-25

"ಉಚ್ಛಿಷ್ಟಲೇಪಾನ್ ಅನುಮೋದಿತೋ ದ್ವಿಜೈಃ"
ಸಕೃಚ್ಚ ಭುಂಜೇ ತದಪಾಸ್ತಕಿಲ್ಬಿಷಃ
ಏವಂ ಪ್ರವೃತ್ತಸ್ಯ ವಿಶುದ್ಧಚೇತಸಃ
ತದ್ಧರ್ಮ ಏವಾಭಿರುಚಿಃ ಪ್ರಜಾಯತೇ॥ ಎಂಬ ಶ್ಲೋಕಕ್ಕೆ ವ್ಯಾಖ್ಯಾನವನ್ನು ಮಾಡುವಾಗ ಯಾದವಾರ್ಯರು (ಯಾದುಪತ್ಯಕಾರರು) ಭಾಗವತದ ತಮ್ಮ ವ್ಯಾಖ್ಯಾನದಲ್ಲಿ "ಇದಾನೀಮಪಿ ಮಹಾತ್ಮನಾಂ ಉಚ್ಛಿಷ್ಟ ಭೋಜನಾದಿನಾ ಏತತ್ಫಲಂ ಭವತೀತಿ ಪ್ರದರ್ಶನಾಯ ಲಟ್ ಪ್ರಯೋಗಃ- ಅಂದರೆ ಹಿಂದೆ ನಾರದರು ಸಂನ್ಯಾಸಿಗಳ ಉಚ್ಛಿಷ್ಟ ಭೋಜನವನ್ನು ಮಾಡಿದ್ದಾರೆ. ಈಗಲೂ ಮಹಾತ್ಮರ ಉಚ್ಛಿಷ್ಟ ಭೋಜನವನ್ನು ಮಾಡುವುದರಿಂದ ವೈರಾಗ್ಯ-ಭಗವತ್ಕಥಾ ಶ್ರವಣಾದ್ಯಭ್ಯಾಸರೂಪವಾದ ಯತಿಗಳ ಧರ್ಮದಲ್ಲಿ ಅಭಿರುಚಿ ಎಂಬ ಫಲವು ಉಂಟಾಗುತ್ತದೆ ಎಂದು ತೋರಿಸಲು ಶ್ರೀವೇದವ್ಯಾಸದೇವರು ಪ್ರಜಾಯತೇ॥" ಎಂಬುವಲ್ಲಿ ಲಟ್‌ಲಕಾರದ ಪ್ರಯೋಗವನ್ನು ಮಾಡಿದ್ದಾರೆಂದು ಹೇಳಿರುತ್ತಾರೆ. ಇದರಿಂದ ಯತಿಗಳ ಹಸ್ತೋದಕವನ್ನು ಭುಂಜಿಸುವುದು ಶ್ರೀವೇದವ್ಯಾಸದೇವರಿಗೆ ಸಮ್ಮತವೆಂಬುದಾಗಿ ಯಾದವಾರ್ಯರು ಹೇಳಿದಂತೆ ಆಗುತ್ತದೆ.

ಒಟ್ಟಿನಲ್ಲಿ ಯತಿಗಳ ಹಸ್ತೋದಕವನ್ನು ಭುಂಜಿಸುವುದು ಯಾದವಾರ್ಯರಿಗೂ ಸಮ್ಮತವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

**160. ಯಾವುದೇ ಒಬ್ಬ ಯತಿಗಳ ಹೆಸರನ್ನು ಹೇಳಿ ಅವರ ಹಸ್ತೋದಕವನ್ನು ಸ್ವೀಕರಿಸಬೇಕೆಂಬ ವಿಷಯಕ್ಕೆ ಅವರ ಮೇಲೆ ರಚಿಸಿರುವ ಸ್ತೋತ್ರ - ದಾಸರ ಪದಪದ್ಯ ಮುಂತಾದವುಗಳು ದೊರೆಯುತ್ತವೆಯಾ?**

ಉ. ದೊರೆಯುತ್ತವೆ. ಅವುಗಳ ಪೈಕಿ ಕೆಲವೊಂದನ್ನು ಈ ಕೆಳಗೆ ಕೊಡಲಾಗಿದೆ.

1) ಉತ್ತರಾದಿಮಠದ ಪರಂಪರೆಯಲ್ಲಿ ಬಂದಿರುವ ಶ್ರೀ ಸತ್ಯಪರಾಕ್ರಮ ತೀರ್ಥರು ರಚಿಸಿರುವ ಶ್ರೀಸತ್ಯವ್ರತತೀರ್ಥಸ್ತೋತ್ರದಲ್ಲಿ :-

" ಯತ್ಪಾದೋದಕಸೇವನಂ ನವನವಸ್ವಶ್ರೇಯಸೋದ್ಭಾವನಮ್।
ಯದ್ಧಸ್ತೋದಕಪಾವನೌದನಮಹೋ ಸಚ್ಛಾಂತಿಸಂತಾನದಮ್॥

ಅಂದರೆ ಶ್ರೀ ಸತ್ಯವ್ರತತೀರ್ಥರ ಪಾದೋದಕವನ್ನು ಸೇವಿಸುವುದರಿಂದ ಹೊಸ ಹೊಸ ಶ್ರೇಯಸ್ಸುಂಟಾಗುತ್ತದೆ ಮತ್ತು ಬೃಂದಾವನಸ್ಥರಾದ ಶ್ರೀ ಸತ್ಯವ್ರತತೀರ್ಥರಿಗೆ ನಿವೇದಿತವಾದ ಪವಿತ್ರವಾದ ಅನ್ನಾದಿಗಳ (ಹಸ್ತೋದಕದ) ಸೇವನೆಯು ಒಳ್ಳೇ ಶಾಂತಿ ಮತ್ತು ಸಂತಾನಪ್ರದವಾದದ್ದು.

2) ಬಾದರಾಯಣವಿಠ್ಠಲರು ಶ್ರೀರಾಘವೇಂದ್ರಸ್ವಾಮಿಗಳವರ ಬಗ್ಗೆ ರಚಿಸಿರುವ ಒಂದು ಕೃತಿಯಲ್ಲಿ "ಗುರುಪಾದೋದಕ ಗುರೂಚ್ಛಿಷ್ಠ ಭುಂಜಿಸಿ। ಗುರುವಂತರಯಾಮಿ ಬಾದರಾಯಣವಿಠ್ಠಲನ ನಂಬು" ಎಂದು ಶ್ರೀರಾಘವೇಂದ್ರಸ್ವಾಮಿಗಳವರ ಪಾದೋದಕವನ್ನು ಪಾನ ಮಾಡಬೇಕು ಮತ್ತು ಅವರ ಹಸ್ತೋದಕವನ್ನು ಭುಂಜಿಸಬೇಕು ಎಂದು ಹೇಳಿರುತ್ತಾರೆ.

3) ಸರ್ವಸಮರ್ಪಣ ಸ್ತೋತ್ರದಲ್ಲಿ ಶ್ರೀರಾಘವೇಂದ್ರಸ್ವಾಮಿಗಳವರ ಬಗ್ಗೆ ಹೇಳುವಾಗ "ತ್ವತ್ಪಾದೋದಕಪದ್ಮೋದರಸಮಸ್ತು ಶೀರ್ಷೇ। ತ್ವದರ್ಪಿತಾನ್ನಂ ಜಠರೇಽಭವನ್ಮೇ" ಎಂದು ಹೇಳಿದ್ದಾರೆ. ಅಂದರೆ ಶ್ರೀರಾಘವೇಂದ್ರಸ್ವಾಮಿಗಳವರ ಪಾದೋದಕವನ್ನು ಶಿರಸಾಧಾರಣ ಮಾಡಬೇಕು ಮತ್ತು ಅವರಿಗೆ ಅರ್ಪಿತವಾದ ಅನ್ನವನ್ನು=ಹಸ್ತೋದಕವನ್ನು ಸ್ವೀಕರಿಸಬೇಕು ಎಂಬ ಅಭಿಪ್ರಾಯವನ್ನೇ ಹೇಳಿರುತ್ತಾರೆ.

4) ಇದಲ್ಲದೇ ಸವಣೂರ್ ಶ್ರೀಸತ್ಯಬೋಧತೀರ್ಥರ ಸನ್ನಿಧಾನದಲ್ಲೂ ಮತ್ತು ಹೊಳೆ ಹೊನ್ನೂರ್ ಶ್ರೀಸತ್ಯಧರ್ಮತೀರ್ಥರ ಸನ್ನಿಧಾನದಲ್ಲೂ ಆರಾಧನೆಯ ಸಂದರ್ಭದಲ್ಲಿ ಬೃಂದಾವನಸ್ಥ ಯತಿಗಳಿಗೆ ಸಮರ್ಪಿತವಾದ ಅನ್ನಾದಿಗಳನ್ನು=ಹಸ್ತೋದಕವನ್ನು ಭೋಜನದ ಸಮಯದಲ್ಲಿ ಎಲ್ಲರಿಗೂ ಅದ್ಯಾಪಿ ಬಡಿಸುವುದು ಸರ್ವವಿದಿತವಾಗಿದೆ ಮತ್ತು ಅಲ್ಲಿಯ ಪರ್ಯಾಯಸ್ಥರು ಈ ವಿಷಯವನ್ನು ಹೇಳುತ್ತಾರೆ. ಅಷ್ಟೇ ಅಲ್ಲದೆ ಆರಾಧನೆಯ ಸಂದರ್ಭದಲ್ಲಿ ಉತ್ತರಾದಿಮಠದ ಶ್ರೀಗಳವರು ಅಲ್ಲಿಗೆ ಬಂದಿದ್ದರೂ ಹಸ್ತೋದಕವನ್ನು ಭೋಜನದ ಸಮಯದಲ್ಲಿ ಎಲ್ಲರಿಗೂ ಬಡಿಸಲಾಗುತ್ತದೆ ಎಂಬ ವಿಷಯವನ್ನೂ ಅಲ್ಲಿಯ ಪರ್ಯಾಯಸ್ಥರು ಹೇಳುತ್ತಾರೆ.

5) ಇದರಂತೆ ಸಾಂಗ್ಲಿ ಶ್ರೀಸತ್ಯವ್ರತತೀರ್ಥರ ಸನ್ನಿಧಾನದಲ್ಲೂ ಭೋಜನದ ಸಮಯದಲ್ಲಿ ಅವರ ಹಸ್ತೋದಕವನ್ನು ಜನರಿಗೆ ಬಡಿಸುವ ವಿಷಯವು ಸರ್ವವಿದಿತವಾಗಿದೆ.

**161. ಯತಿಗಳ/ಗುರುಗಳ ಹಸ್ತೋದಕ ಸ್ವೀಕಾರ ವಿಷಯದಲ್ಲಿ ಸಂಪ್ರದಾಯವೂ ಪ್ರಮಾಣವಲ್ಲವೆ?**

ಉ. ಕೃಷ್ಣಾಚಾರ್ಯ ಸ್ಮೃತಿ ಮುಕ್ತಾವಳಿ ಕಾಲನಿರ್ಣಯ ಪ್ರಕರಣ - ಸಂಸ್ಕೃತ ಪುಸ್ತಕದ ಪಟ11 ಕನ್ನಡಾನುವಾದ ಪುಸ್ತಕದ ಪುಟ 87-88.

1) "ಕ್ವಚಿತ್ಸಂಪ್ರದಾಯೋಽಪಿ ಪ್ರಮಾಣಮ್। ತತ್ರ ಮನುಃ :-

ಯೇನಾಸ್ಯ ಪಿತರೋ ಯಾತಾಃ ಯೇನ ಯಾತಾಃ ಪಿತಾಮಹಾಃ । ತೇನ ಯಾಯಾತ್ ಸತಾಂ ಮಾರ್ಗೇ ತೇನ ಗಚ್ಛನ್ನ ದುಷ್ಯತಿ ॥ (ಮನುಸ್ಮೃತಿ-ಅ-ಶ್ಲೋ178)

"ಸ್ವಕುಲ ಕ್ರಮಾಗತಾಚಾರಃ ಸಂಪ್ರದಾಯಃ। ಸೋಽಪಿ ಶಾಸ್ತ್ರವಿಪ್ರತಿಪತ್ತೌ ಪ್ರಮಾಣಮ್। ಯತ್ರ ಶಾಸ್ತ್ರಗತಿರ್ಭಿನ್ನಾ ಸರ್ವಕರ್ಮಸು ಭಾರತ। ಉದಿತೇಽನುದಿತೇ ಚೈವ ಹೋಮಭೇದೋ ಯಥಾ ಭವೇತ್। ಯಸ್ಮಿನ್ ಕುಲೇ ಕ್ರಮಾಯಾತಂ ಆಚಾರಂ ತ್ವಾಚರೇದ್ಬುಧಃ । ಸ ಗರೀಯಾನ್ ಮಹಾಬಾಹೋ ಸರ್ವಶಾಸ್ತ್ರೋದಿತಾದಪಿ" ಇತಿ ಸುಮಂತುವಚನಾದಿತಿ।

2) ನಾಲ್ಕನೇ ಪ್ರಶ್ನೆಗೆ ಉತ್ತರವನ್ನು ಕೊಡುವಾಗ ಈ ಪೂರ್ವದಲ್ಲಿ ಲಘುಪ್ರಭಾಗ್ರಂಥಸ್ಥ ವಾಕ್ಯಗಳನ್ನು ಉದಾಹರಿಸಲಾಗಿದೆ. ಅವುಗಳ ಪೈಕಿ ಆಚಾರಶ್ಚ ಸ್ವಾರ್ಥೇ ಸ್ಮೃತಿವತ್ ಸ್ವತಂತ್ರಂ ಪ್ರಮಾಣಮ್. . . . . . . ಸ್ವಾತಂತ್ರ್ಯೋಕ್ತೇಶ್ಚ ಇಲ್ಲಿಯ ತನಕ ಇರುವ ವಾಕ್ಯಗಳ ಜೊತೆಯಲ್ಲಿ ಈ ಕೆಳಗೆ ಕಾಣಿಸಿರುವ ವಾಕ್ಯಗಳನ್ನು ತೆಗೆದುಕೊಳ್ಳಬೇಕು. ತದ್ವತ್ ಆಚಾರೋಽಪಿ ಅತ ಏವ ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್। ಇತಿ ಚ ಶಬ್ದೇನ ಸ್ಮೃತ್ಯಾಚಾರೌ ಸಮುಚ್ಚಿತವಾನ್। ಅತ ಏವ ಗೀತಾಭಾಷ್ಯೇ ಆಚಾರಾಚ್ಚೈವಮಿತ್ಯಾಹ ಕರ್ಮಣ್ಯೈವ ಹಿ ಇತಿ ಚ ಶಬ್ದಃ ಪ್ರಯುಕ್ತಃ। ಅತ್ರ ಚ ಆಚಾರಪರಂಪರಾವಗತಮಿತ್ಯವೋಚತ್ । ನ ತ್ವನುಮಿತ ಶ್ರುತ್ಯವಗತಮಿತಿ । ತೇನ ಚ ಆಚಾರಾತ್ ಶ್ರುತಿಮನುಮಿಮಾನಾಃ ಪರೇ ನಿರಸ್ತಾಃ ವೇದಿತವ್ಯಾಃ। ಆಸ್ತಾಂ ಶ್ರುತ್ಯನುಮಾಪಕತ್ವಂ ಸ್ಮೃತ್ಯನುಮಾನದ್ವಾರೀಕರಣಂ ಅತ್ಯಂತಾಯುಕ್ತಂ । ಸ್ವತ ಏವ ಅರ್ಥಪ್ರತ್ಯಾಯನಸಂಭವಾತ್" ಎಂದು ಈ ಮೇಲೆ ಹೇಳಿದಂತೆ ಸಂಪ್ರದಾಯವೂ ಪ್ರಮಾಣ. ಆದ್ದರಿಂದ ಯತಿಗಳ ಹಸ್ತೋದಕವನ್ನು ಭುಂಜಿಸುವುದು ಸಂಪ್ರದಾಯಸಿದ್ಧವೂ ಹೌದು. ಒಟ್ಟಿನಲ್ಲಿ ಹೇಳುವುದಾದರೆ ಯತಿಗಳ ಹಸ್ತೋದಕವನ್ನು ಭುಂಜಿಸಬೇಕು ಎಂಬ ವಿಷಯಕ್ಕೆ ಸಂಪ್ರದಾಯವೂ ಪ್ರಮಾಣವೆಂದರೆ ತಪ್ಪಾಗಲಿಕ್ಕಿಲ್ಲ (ಜಿ.ಬಿ. ಜೋಷಿಯರ ಸಂಸ್ಕೃತ-ಕನ್ನಡ ಶಬ್ದಕೋಶದಲ್ಲಿ ಆಚಾರಶಬ್ದಕ್ಕೆ ಅರ್ಥವನ್ನು ಹೇಳುವಾಗ ಆಚಾರಃ=ವರ್ತನ=ಸದ್ವರ್ತನ-ರೀತಿ-ಸಂಪ್ರದಾಯ-ಪದ್ಧತಿ-ಸದಾಚಾರ-ಶಿಷ್ಟಾಚಾರ ಮುಂತಾಗಿ ಹೇಳಿರುವುದನ್ನು ಗಮನಿಸಬೇಕು).

**162. ಪ್ರತಿನಿತ್ಯ ಭೋಜನದ ಸಮಯದಲ್ಲಿ ಭೋಕ್ತೃಗಳಿಗೆ ಯತಿಗಳ ಹಸ್ತೋದಕವನ್ನು ಯಾವಾಗ ಹಾಕಬೇಕು?**

ಉ. ಪ್ರತಿನಿತ್ಯ ಭೋಜನದ ಸಮಯದಲ್ಲಿ ಭೋಕ್ತೃಗಳು ಚಿತ್ರಾಹುತಿಯನ್ನು ಇಟ್ಟು (ಪಂಚ ಪ್ರಾಣಾಹುತಿ ತೆಗೆದುಕೊಂಡು) ಭೋಜನಕ್ಕೆ ಕುಳಿತ ಮೇಲೆ ಭೋಜನದ ಮಧ್ಯದಲ್ಲಿ ಭೋಕ್ತೃಗಳಿಗೆ ಯತಿಗಳ ಹಸ್ತೋದಕವನ್ನು ಹಾಕಬೇಕು. ಭೋಜನಕ್ಕೆ ಕೂಡುವುದಕ್ಕಿಂತ ಮುಂಚೆ ಅನ್ನಾದಿಗಳನ್ನು ಎಲೆಯ ಮೇಲೆ ಬಡಿಸಿದಂತೆ ಯತಿಗಳ ಹಸ್ತೋದಕವನ್ನು ಹಾಕಬಾರದು. (ಬಡಿಸಬಾರದು)

**163. ಬೇರೆ ಬೇರೆ ಸಂದರ್ಭಗಳಲ್ಲಿ ಬಳಸುವ ಹಸ್ತೋದಕ ಶಬ್ದದ ರೂಢಿಯಲ್ಲಿರುವ ಅರ್ಥಗಳೇನು?**

ಉ. 1) ಶ್ರೀರಾಯರಿಗೆ/ಗುರುಗಳಿಗೆ ಹಸ್ತೋದಕ ಮಾಡು ಎಂದು ಹೇಳುವಾಗ ಬಳಸುವ ಹಸ್ತೋದಕ ಶಬ್ದಕ್ಕೆ ದೇವರಿಗೆ ನಿವೇದಿತವಾದ ಅನ್ನಾದಿಗಳ ನಿವೇದನೆ ಎಂಬರ್ಥವು ರೂಢಿಯಲ್ಲಿದೆ.

2) ಇದರಂತೆ ಶ್ರೀರಾಯರಿಗೆ ಹಸ್ತೋದಕ ವಾಯಿತೆ? ಎಂದು ಪ್ರಶ್ನಿಸುವಾಗ ಬಳಸುವ ಹಸ್ತೋದಕ ಶಬ್ದಕ್ಕೂ ಈ ಮೇಲಿನ ಅರ್ಥವೇ ರೂಢಿಯಲ್ಲಿದೆ.

3) ಇನ್ನು ಭೋಜನಕ್ಕೆ ಕುಳಿತಿದ್ದಾಗ ಯತಿಗಳ ಹಸ್ತೋದಕವನ್ನು ಹಾಕು ಎಂದು ಹೇಳುವ ಸಂದರ್ಭದಲ್ಲಿ ಬಳಸುವ ಹಸ್ತೋದಕ ಶಬ್ದಕ್ಕೆ ಯತಿಗಳಿಗೆ ನಿವೇದನೆ ಮಾಡಿದ ಅನ್ನಾದಿಗಳು ಎಂಬ ಅರ್ಥವು ರೂಢಿಯಲ್ಲಿದೆ.

4) ಇನ್ನು ಊಟಕ್ಕೆ ಕುಳಿತುಕೊಳ್ಳುವಾಗ ಪಂಕ್ತಿಯಲ್ಲಿ ಹೋಗಿ ಜನರ ಮುಂದೆ ತಟ್ಟೆಯನ್ನು ಹಿಡಿದು, "ಹಸ್ತೋದಕ ಹಾಕುವವರು ಹಾಕಬೇಕು ಎಂದು ಕೂಗುವಾಗ ಅಥವಾ ಯತಿಗಳ ಬೃಂದಾವನದ ಮುಂದೆ ಹುಂಡಿಯನ್ನಿಟ್ಟು ಹಸ್ತೋದಕ ಹಾಕುವವರು ಹಾಕಬೇಕು ಎಂದು ಕೂಗುವಾಗ ಯಾವ ಅರ್ಥದ ಹಿನ್ನೆಲೆಯಲ್ಲಿ ಹಸ್ತೋದಕ ಶಬ್ದವು ಬಳಸಲಾಗುತ್ತದೆ ಅಂದರೆ, ಜೀವಂತ ಯತಿಗಳಿಗೆ ಭಿಕ್ಷೆಯನ್ನು ಮಾಡಿಸಬೇಕಾದದ್ದು ಗೃಹಸ್ಥಾಶ್ರಮಿಗಳ ಕರ್ತವ್ಯ. ಅದನ್ನು ಕಾರಣಾಂತರದಿಂದ ಮಾಡಿಸಲು ಆಗದಿದ್ದಾಗ, ಅದರ ಪ್ರತ್ಯಾಮ್ನಾಯ ನಿಮ್ಮ ನಿಮ್ಮ ಯೋಗ್ಯತಾನುಸಾರ ಹಣವನ್ನು ಹಾಕಿರಿ, ಇದರಿಂದ ಯತಿಗಳಿಗೆ ಭಿಕ್ಷೆಯನ್ನು ಮಾಡಿಸಿದಂತೆ ಆಗುತ್ತದೆ ಎಂಬ ಅರ್ಥದ ಹಿನ್ನೆಲೆಯಲ್ಲಿ ಹಸ್ತೋದಕ ಹಾಕುವವರು ಹಾಕಬೇಕು, ಎಂದು

ಕೂಗಲಾಗುತ್ತದೆ. ಇದರಂತೆ ಶ್ರೀಗಳವರ ಸಮ್ಮುಖದಲ್ಲಿ ಭೋಜನಕ್ಕೆ ಕೂಡುವ ಸಮಯದಲ್ಲಿ ತಟ್ಟೆಯನ್ನು ನೆಲದ ಮೇಲಿಟ್ಟು ಹಸ್ತೋದಕ ಹಾಕೋರು ಹಾಕಬೇಕು ಎಂದು ಹಸ್ತೋದಕ ಶಬ್ದವನ್ನು ಬಳಸಿ ಕೂಗುವುದೂ ಕೂಡ ಇದೇ ಅರ್ಥದ ಹಿನ್ನೆಲೆಯಲ್ಲೇ ಎಂದು ತಿಳಿಯಬೇಕು.

5) ಇದರಂತೆ ಯತಿಗಳಿಗೆ ಗೃಹಸ್ಥಾಶ್ರಮಿಯು ಮಾಡಿಸಬೇಕಾಗಿರುವ ಭಿಕ್ಷೆಯನ್ನು ಕಾರಣಾಂತರದಿಂದ ಮಾಡಿಸಲು ಆಗದಲೆ ಅದಕ್ಕೆ ಬದಲು ತತ್ಕಾಲದಲ್ಲೇ ಹಣವನ್ನು ತಟ್ಟೆಯಲ್ಲಿ ಹಾಕಿ, ತನ್ಮೂಲಕ ಯತಿಗಳಿಗೆ ಭಿಕ್ಷೆಯನ್ನು ಮಾಡಿಸುವುದು ಎಂಬ ಅರ್ಥದ ಹಿನ್ನೆಲೆಯಲ್ಲಿ ನಗದು ಹಸ್ತೋದಕ ಎಂಬ ಶಬ್ದವನ್ನು ಬಳಸಲಾಗುತ್ತದೆ. ಇದರಂತೆ (ಇಂದು ಶ್ರೀರಾಯರಿಗೆ ಹಸ್ತೋದಕವನ್ನು ಮಾಡಿಸಿದ್ದೇನೆ ಎಂದು ಹೇಳುವಾಗಲೂ ಯತಿಗಳಿಗೆ ಗೃಹಸ್ಥಾಶ್ರಮಿಗಳು ಮಾಡಿಸಬೇಕಾಗಿರುವ ಭಿಕ್ಷೆಯನ್ನು ಕಾರಣಾಂತರದಿಂದ ಮಾಡಿಸಲು ಆಗದಲೇ ಅದಕ್ಕೆ ಬದಲು ಪೂರ್ವಭಾವಿಯಾಗಿ ಹಣವನ್ನು ತುಂಬಿ ತನ್ಮೂಲಕ ಯತಿಗಳಿಗೆ ಭಿಕ್ಷೆಯನ್ನು ಮಾಡಿಸುವುದು ಎಂಬ ಅರ್ಥದ ಹಿನ್ನೆಲೆಯಲ್ಲೇ ಹಸ್ತೋದಕ ಶಬ್ದವನ್ನು ಬಳಸಲಾಗುತ್ತದೆ.)

6) ಇನ್ನು ಅವನು ಯತಿಗಳ ಹಸ್ತೋದಕವನ್ನು ಸ್ವೀಕರಿಸುತ್ತಾನೆ ಎಂದು ಹೇಳುವಾಗ, ಬೃಂದಾವನಸ್ಥ ಯತಿಗಳಿಗೆ ನಿವೇದಿತವಾದ ಅನ್ನಾದಿಗಳನ್ನು ಅವನು ಸ್ವೀಕರಿಸುತ್ತಾನೆ ಎಂಬ ಅರ್ಥದ ಹಿನ್ನೆಲೆಯಲ್ಲೇ ಹಸ್ತೋದಕ ಶಬ್ದವು ಬಳಸಲಾಗುತ್ತದೆ.

7) ಇನ್ನು "ಇಂದು ನಾನು ಶ್ರೀರಾಯರ ಮಠಕ್ಕೆ ಹೋಗಿದ್ದೆ, ಅಲ್ಲಿ ಹಸ್ತೋದಕ ಹಾಕಿ ಭೋಜನ ಮಾಡಿ ಬಂದೆ ಎಂದು ಹೇಳುವಾಗ ಯತಿಗಳಿಗೆ ಮಾಡಿಸಬೇಕಾಗಿರುವ ಭಿಕ್ಷೆಯನ್ನು ಕಾರಣಾಂತರದಿಂದ ಮಾಡಿಸಲು ಆಗದಲೇ ಮಠಕ್ಕೆ ಹೋಗಿ ಅಲ್ಲಿ ಹಣವನ್ನು ಹಾಕಿ ತನ್ಮೂಲಕ ಯತಿಭಿಕ್ಷೆಯನ್ನು ಮಾಡಿಸಿ ಪ್ರಸಾದವನ್ನು ತೆಗೆದುಕೊಂಡು ಬಂದೆ ಎಂಬ ಅರ್ಥದ ಹಿನ್ನೆಲೆಯಲ್ಲಿ ಹಸ್ತೋದಕ ಶಬ್ದವು ಬಳಸಲಾಗುತ್ತದೆ.

8) ಇನ್ನು ಯತಿಗಳ ಹಸ್ತೋದಕವು ನಮಗೆ ತಾರಕ ಅದನ್ನು ಸ್ವೀಕರಿಸಬೇಕು ಎಂದು ಹೇಳುವಾಗ, ಬೃಂದಾವನಸ್ಥಯತಿಗಳಿಗೆ ನಿವೇದಿತವಾದ ಅನ್ನಾದಿಗಳು ನಮಗೆ ತಾರಕ ಅದನ್ನು ಸ್ವೀಕರಿಸಬೇಕು ಎಂಬ ಅರ್ಥದ ಹಿನ್ನೆಲೆಯಲ್ಲಿ ಹಸ್ತೋದಕ ಶಬ್ದವನ್ನು ಬಳಸಲಾಗುತ್ತದೆ.

9) ಇನ್ನು "ಸಾದರದಿ ಹಸ್ತೋದಕ ಕೊಡಲು ನಿಷೇಧಗೈಯ್ಯದೆ ನಿವೇದಿಪ ಹರಿಗೆ" ಎಂದು ದಾಸರು ಶ್ರೀರಾಯರ ಬಗ್ಗೆ ರಚಿಸಿರುವ ಕೃತಿಯಲ್ಲಿ ಹಸ್ತೋದಕ ಶಬ್ದವನ್ನು ಬಳಸಿರುತ್ತಾರೆ. ಶ್ರೀರಾಯರು, ತಮ್ಮ ಭಿಕ್ಷೆಗೆ ಎಂದು ಯಾವುದೇ ವಸ್ತುವನ್ನು ಕೊಡಲು ಅದನ್ನು ಹರಿಗೆ ನಿವೇದಿಸುವರು ಎಂದು ಒಟ್ಟಾರೆ ದಾಸರ ಕೃತಿಯ ಏಕದೇಶದ ಅರ್ಥ.

10) ಇದರಂತೆ " ಅರಿತು ಈ ಪರಿಯಿಂದ ನಿರುತ ಹಸ್ತೋದಕ ಗುರುಗಳಿಗರ್ಪಿಸೆ ತ್ವರದಿ ಕೈಗೊಂಡು" ಎಂದು ಇನ್ನೊಂದು ದಾಸರ ಕೃತಿಯಲ್ಲಿ ಹಸ್ತೋದಕ ಶಬ್ದವು ಬಳಸಲಾಗಿದೆ. 'ಅರಿತು ಈ ರೀತಿಯಿಂದ ನಿರುತ ಅನ್ನಾದಿಗಳನ್ನು ಗುರುಗಳಿಗರ್ಪಿಸೆ ತ್ವರದಿ ಕೈಗೊಂಡು ಎಂಬುದಾಗಿ ಈ ಮೇಲೆ ಕಾಣಿಸಿದ ದಾಸರ ಕೃತಿಯ ಏಕದೇಶದ ಅರ್ಥ.

11) ಯತಿಗಳು ಭಿಕ್ಷೆಗೆ ಕೂಡುವಾಗ (ಅವರ ಕೈಯಲ್ಲಿ) ಹಸ್ತೋದಕವನ್ನು ಹಾಕು ಎಂದು ಹೇಳುವುದುಂಟು. ಯತಿಹಸ್ತೇ ಜಲಂ ದದ್ಯಾತ್ ಭೈಕ್ಷ್ಯಂ ದ ದ್ಯಾತ್ಪುನರ್ಜಲಮ್ । ಇತ್ಯಾದಿ ಪ್ರಮಾಣದಲ್ಲಿ ಹೇಳಿದಂತೆ ಯತಿಗಳ ಕೈಯಲ್ಲಿ ನೀರನ್ನು ಹಾಕು ಎಂಬ ಅರ್ಥದ ಹಿನ್ನೆಲೆಯಲ್ಲಿ ಈ ರೀತಿ ಹೇಳಲಾಗುತ್ತದೆ ಎಂದು ತಿಳಿಯಬೇಕು.

# ಅನಂತವ್ರತ

**164. ಶ್ರೀ ಅನಂತಪದ್ಮನಾಭವ್ರತವನ್ನು ವಿಹಿತಕಾಲದಲ್ಲಿ ಅನುಷ್ಠಿಸಲು ಆಗದಿದ್ದರೆ, ಮತ್ತೆ ಯಾವಾಗ ಅನುಷ್ಠಾನ ಮಾಡಬೇಕು?**

**ಉ. ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ ಕಾಲನಿರ್ಣಯ ಪ್ರಕರಣ ಪುಟ117**
**"ಯದ್ಯಾತ್ರ ಕುತಶ್ಚಿನ್ನಿಮಿತ್ತಾತ್ ನೋಕ್ತಕಾಲೇಽನುಷ್ಠಾನಂ ತದಾ**
**ತದನ್ಯಶುಕ್ಲ ಚತುರ್ದಶ್ಯಾಮನುಷ್ಠೇಯಮ್। ತದುಕ್ತಂ ಸ್ಕಾಂದಪುರಾಣೇ :-**
**"ನೋಕ್ತಕಾಲೇಽನುಷ್ಠಿತಂ ತದನಂತವ್ರತಮಂಜಸಾ।**
**ಕುರ್ಯಾಚ್ಛುಕ್ಲಚತುರ್ದಶ್ಯಾಮನ್ಯಥಾ ದೋಷಭಾಗ್ಭವೇತ್॥**
**ದೈವಾದ್ವಾ ಮಾನುಷಾದ್ವಾಽಪಿ ಕಾಮಾಲ್ಲೋಭೇವನ ವಾ ನರೈಃ॥**
**ನಾನುಷ್ಠಿತಂ ವ್ರತಂ ಸಮ್ಯಗನಂತಾಖ್ಯಂ ಯದಾ ನೃಪ।**
**ತದಾನಂತವ್ರತಂ ಶುಕ್ಲಚತುರ್ದಶ್ಯಾಂ ಸಮಾಚರೇತ್।**
**ಅನ್ಯಥಾ ತು ಮಹಾದೋಷಃ ವ್ರತಭಂಗಶ್ಚ ಜಾಯತೇ "॥ ಇತಿ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಶ್ರೀ ಅನಂತ ಪದ್ಮನಾಭವ್ರತವನ್ನು ವಿಹಿತವಾದ ಭಾದ್ರಪದಶುಕ್ಲಚತುರ್ದಶೀ ದಿನದಂದು ಆಚರಿಸಲಾಗದಿದ್ದರೆ, ಬೇರೆ ಮಾಸದ ಶುಕ್ಲಚತುರ್ದಶೀ ದಿನದಂದು (ಆಶ್ವಯುಜ ಶುಕ್ಲ ಚತುರ್ದಶೀದಿನದಂದು) ಅನುಷ್ಠಾನ ಮಾಡಬೇಕು, ಕೆಲವರು ನವರಾತ್ರಿಯಲ್ಲಿ ಅನುಷ್ಠಾನ ಮಾಡುತ್ತಾರೆ.

**165. ಶ್ರೀಅನಂತನ ದಾರ ಕಳೆದುಹೋದರೆ ಏನು ಮಾಡಬೇಕು?**

**ಉ. ಭವಿಷ್ಯೋತ್ತರಪುರಾಣೇ ಕೃಷ್ಣ-ಯುಧಿಷ್ಠಿರಸಂವಾದೇ**
**ನಷ್ಟ-ದೋರಪ್ರಾಯಶ್ಚಿತ್ತವಿಧಿಃ - ಶ್ಲೋಕ 1-3**
**ಯುಧಿಷ್ಠಿರಃ :-**
**ಪ್ರಮಾದಾದ್ದೇವದೇವೇಶ ದೋರೇ ನಷ್ಟೇಽನಂತಕೇ।**
**ತದಾ ಕಿಂ ಕರಣೀಯಂ ಸ್ಯಾತ್ ಪ್ರಾಯಶ್ಚಿತ್ತಂ ವದಸ್ವ ಮೇ ॥**
**ಶ್ರೀಕೃಷ್ಣಃ :-**
**ಅನಂತದೋರೇ ನಷ್ಟೇ ತು ಸಂಭವೇದ್ಬಹು ಪಾತಕಮ್।**
**ತಸ್ಯ ದೋಷಸ್ಯ ಶಾಂತ್ಯರ್ಥಂ ಪ್ರಾಯಶ್ಚಿತ್ತವಿಧಿಂ ಚರೇತ್ ॥**
**ಶುಕ್ಲಪಕ್ಷತ್ರಯೋದಶ್ಯಾಂ ಪ್ರತಿಮಾಪೂಜನಂ ತಥಾ।**
**ಹವನಂ ಚ ಯಥಾ ಕುರ್ಯಾತ್ ದ್ವಿತೀಯೇಽನಂತಪೂಜನಮ್ ॥ ಶ್ಲೋ 18ಧರ್ಮಸಿಂಧೌ:- ದೋರಕನಾಶೇ ಪ್ರಾಯಶ್ಚಿತ್ತಂ ಕೃತ್ವಾ,**
**ನೂತನದೋರಕೇ ಪೂರ್ವವತ್ ಪೂಜನಾದಿ ಚ ಚರೇತ್।**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಒಂದುವೇಳೆ ಅಜಾಗ್ರತೆಯಿಂದ ಶ್ರೀಅನಂತನ ದಾರವು ಕಳೆದುಹೋದರೆ, ಅದರಿಂದ ಬಹುಪಾತಕವು ಸಂಭವಿಸುತ್ತದೆ. ಪಾಪ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಅಂದರೆ ಭಾದ್ರಪದಶುಕ್ಲ ಪಕ್ಷದ ತ್ರಯೋದಶೀ ದಿನದಂದು ಪ್ರತಿಮಾಪೂಜೆ-ಹೋಮ ಇವುಗಳನ್ನು ಮಾಡಿ, ಮಾರನೇ ದಿನ ಅಂದರೆ ಭಾದ್ರಪದಶುಕ್ಲಚತುರ್ದಶೀ ದಿನದಂದು ನೂತನ ದಾರವನ್ನು ಇಟ್ಟು ಶ್ರೀಅನಂತ ಪದ್ಮನಾಭನ ಪೂಜೆಯನ್ನು ಹಿಂದಿನಂತೆ ಮಾಡಿ ಶ್ರೀಅನಂತನ ದಾರವನ್ನು ಧಾರಣ ಮಾಡಬೇಕು.

**166. ಶ್ರೀ ಅನಂತಪದ್ಮನಾಭವ್ರತವನ್ನು ಸ್ತ್ರೀಯರೂ ಮಾಡಬಹುದೆ?**

ಉ. ಅನಂತವ್ರತಕಥಾಯಾಮ್:-

ಶ್ಲೋಕ :49-53

ದದರ್ಶ ಶೀಲಾ ಸಾ ಸ್ತ್ರೀಣಾಂ ಸಮೂಹಂ ರಕ್ತವಾಸಸಾಮ್ ।
ಚತುರ್ದಶ್ಯಾಮರ್ಚಯಂತಂ ಭಕ್ತ್ಯಾದೇವಂ ಜನಾರ್ದನಮ್ ।
ಉಪಗಮ್ಯ ಶನೈಃ ಶೀಲಾ ಪಪ್ರಚ್ಛ ಸ್ತ್ರೀಕದಂಬಕಮ್ ।
ಆರ್ಯಾಃ ಕಿಮೇತನ್ಮೇ ಬ್ರೂತ ಕಿಂ ನಾಮ ವ್ರತಮೀದೃಶಮ್ ।
ತಾ ಊಚುಃ ಯೋಷಿತಃ ತಾಂ ತು ಶೀಲಾ ಶೀಲವಿಭೂಷಣಾಮ್ ॥
ಅನಂತವ್ರತಮೇತದ್ಧಿ ವ್ರತೇsನಂತಸ್ತು ಪೂಜ್ಯತೇ ॥
ಸ್ಸಾಬ್ರವೀದಹಮೇತತ್ಕರಿಷ್ಯೇ ವ್ರತಮುತ್ತಮಮ್ ।
ವಿಧಾನಂ ಕೀದೃಶಂ ತ್ವತ್ರ ಕಿಂ ದಾನಂ ಕೋsತ್ರ ಪೂಜ್ಯತೇ ॥

ಶ್ಲೋಕ: 14-15

ಸ್ಸಾಪಿ ಚಕ್ರೇ. ವ್ರತಂ ಶೀಲಾ ಕರೇ ಬಧ್ವಾ ಸುದೋರಕಮ್ ।
ಚತುರ್ದಶಗ್ರಂಥಿಯುತಂ ವಾಮೇ ಬಾಹೌ ಯಥೋದಿತಮ್ ॥

ಶ್ಲೋಕ : 133-134

ಯೋsನ್ಯೋsಪಿ ಕುರುತೇ ಭಕ್ತ್ಯಾ ನಾರೀ ವಾ ಪುರುಷೋsಪಿ ವಾ
ಸಂತೋಷಮಮಲಂ ಪ್ರಾಪ್ಯ ಮೋದತೇ ವಿಷ್ಣುಮಂದಿರೇ ॥

ಈ ಮೇಲೆ ಕಾಣಿಸಿದ ಪ್ರಮಾಣಗಳಿಂದ ಹಿಂದೆ ಶೀಲಾ ಎಂಬ ಸ್ತ್ರೀಯು ಶ್ರೀ ಅನಂತಪದ್ಮನಾಭವ್ರತವನ್ನು ಅನುಷ್ಠಾನ ಮಾಡಿದಂತೆ ಸ್ಪಷ್ಟವಾಗಿ ತಿಳಿದುಬರುತ್ತದೆ. ಆದ್ದರಿಂದ ಸ್ತ್ರೀಯರೂ ಕೂಡ ಶ್ರೀಅನಂತಪದ್ಮನಾಭ ವ್ರತವನ್ನು ಅನುಷ್ಠಾನಮಾಡಬಹುದು.

167. ಹಿಂದಿನ ವರ್ಷ ಧಾರಣ ಮಾಡಿದ ಶ್ರೀ ಅನಂತನ ದಾರವನ್ನು ಯಾವಾಗ ವಿಸರ್ಜನೆ ಮಾಡಬೇಕು? ವಿಸರ್ಜಿತ ದಾರವನ್ನು ಏನು ಮಾಡಬೇಕು?

ಉ. ಅನಂತಪೂಜಾ ಪದ್ಧತಿ - ಕುಂಭಕೋಣಪ್ರತಿ-ಸಾಂಕ 26ಮತ್ತು ನಿರಂಕ 27ನೇ ಪುಟ

ನಮಃ ಸರ್ವಹಿತಾನಂತ ಜಗದಾನಂದಕಾರಕ ।
ಜೀರ್ಣದೋರಮಮುಂ ದೇವ ವಿಸೃಜ್ಯೇsಹಂ ತ್ವದಾಜ್ಞಯಾ ।
ಇತಿ ಜೀರ್ಣದೋರವಿಸರ್ಜನಮ್ ।

ವ್ರತಾನುಷ್ಠಾನಪದ್ಧತಿ:- ಚತುರ್ವೇದಿ ವೇದವ್ಯಾಸಾಚಾರ್

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಶ್ರೀ ಅನಂತ ಪದ್ಮನಾಭವ್ರತವನ್ನು ವಿಹಿತವಾದ ಭಾದ್ರಪದಶುಕ್ಲಚತುರ್ದಶೀ ದಿನದಂದು ಆಚರಿಸಲಾಗದಿದ್ದರೆ, ಬೇರೆ ಮಾಸದ ಶುಕ್ಲಚತುರ್ದಶೀ ದಿನದಂದು (ಆಶ್ವಯುಜ ಶುಕ್ಲ ಚತುರ್ದಶೀದಿನದಂದು) ಅನುಷ್ಠಾನ ಮಾಡಬೇಕು, ಕೆಲವರು ನವರಾತ್ರಿಯಲ್ಲಿ ಅನುಷ್ಠಾನ ಮಾಡುತ್ತಾರೆ.

**165. ಶ್ರೀಅನಂತನ ದಾರ ಕಳೆದುಹೋದರೆ ಏನು ಮಾಡಬೇಕು?**

**ಉ. ಭವಿಷ್ಯೋತ್ತರಪುರಾಣೇ ಕೃಷ್ಣ-ಯುಧಿಷ್ಠಿರಸಂವಾದೇ**
**ನಷ್ಟ-ದೋರಪ್ರಾಯಶ್ಚಿತ್ತವಿಧಿಃ - ಶ್ಲೋಕ 1-3**
**ಯುಧಿಷ್ಠಿರಃ :-**
**ಪ್ರಮಾದಾದ್ದೇವದೇವೇಶ ದೋರೇ ನಷ್ಟೇಽನಂತಕೇ।**
**ತದಾ ಕಿಂ ಕರಣೀಯಂ ಸ್ಯಾತ್ ಪ್ರಾಯಶ್ಚಿತ್ತಂ ವದಸ್ವ ಮೇ॥**
**ಶ್ರೀಕೃಷ್ಣಃ :-**
**ಅನಂತದೋರೇ ನಷ್ಟೇ ತು ಸಂಭವೇದ್ಬಹು ಪಾತಕಮ್।**
**ತಸ್ಯ ದೋಷಸ್ಯ ಶಾಂತ್ಯರ್ಥಂ ಪ್ರಾಯಶ್ಚಿತ್ತವಿಧಿಂ ಚರೇತ್॥**
**ಶುಕ್ಲಪಕ್ಷತ್ರಯೋದಶ್ಯಾಂ ಪ್ರತಿಮಾಪೂಜನಂ ತಥಾ।**
**ಹವನಂ ಚ ಯಥಾ ಕುರ್ಯಾತ್ ದ್ವಿತೀಯೇಽನಂತಪೂಜನಮ್॥ ಶ್ಲೋ**
**18ಧರ್ಮಸಿಂಧೌ:- ದೋರಕನಾಶೇ ಪ್ರಾಯಶ್ಚಿತ್ತಂ ಕೃತ್ವಾ,**
**ನೂತನದೋರಕೇ ಪೂರ್ವವತ್ ಪೂಜನಾದಿ ಚ ಚರೇತ್।**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಒಂದುವೇಳೆ ಅಜಾಗ್ರತೆಯಿಂದ ಶ್ರೀಅನಂತನ ದಾರವು ಕಳೆದುಹೋದರೆ, ಅದರಿಂದ ಬಹುಪಾತಕವು ಸಂಭವಿಸುತ್ತದೆ. ಪಾಪ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಅಂದರೆ ಭಾದ್ರಪದಶುಕ್ಲ ಪಕ್ಷದ ತ್ರಯೋದಶೀ ದಿನದಂದು ಪ್ರತಿಮಾಪೂಜೆ-ಹೋಮ ಇವುಗಳನ್ನು ಮಾಡಿ, ಮಾರನೇ ದಿನ ಅಂದರೆ ಭಾದ್ರಪದಶುಕ್ಲಚತುರ್ದಶೀ ದಿನದಂದು ನೂತನ ದಾರವನ್ನು ಇಟ್ಟು ಶ್ರೀಅನಂತ ಪದ್ಮನಾಭನ ಪೂಜೆಯನ್ನು ಹಿಂದಿನಂತೆ ಮಾಡಿ ಶ್ರೀಅನಂತನ ದಾರವನ್ನು ಧಾರಣ ಮಾಡಬೇಕು.

**166. ಶ್ರೀ ಅನಂತಪದ್ಮನಾಭವ್ರತವನ್ನು ಸ್ತ್ರೀಯರೂ ಮಾಡಬಹುದೆ?**

ಉ. ಅನಂತವ್ರತಕಥಾಯಾಮ್:-

ಶ್ಲೋಕ :49-53

ದದರ್ಶ ಶೀಲಾ ಸಾ ಸ್ತ್ರೀಣಾಂ ಸಮೂಹಂ ರಕ್ತವಾಸಸಾಮ್।
ಚತುರ್ದಶ್ಯಾಮರ್ಚಯಂತಂ ಭಕ್ತ್ಯಾದೇವಂ ಜನಾರ್ದನಮ್।
ಉಪಗಮ್ಯ ಶನೈಃ ಶೀಲಾ ಪಪ್ರಚ್ಛ ಸ್ತ್ರೀಕದಂಬಕಮ್।
ಆರ್ಯಾಃ ಕಿಮೇತನ್ಮೇ ಬ್ರೂತ ಕಿಂ ನಾಮ ವ್ರತಮೀದೃಶಮ್।
ತಾ ಊಚುಃ ಯೋಷಿತಃ ತಾಂ ತು ಶೀಲಾ ಶೀಲವಿಭೂಷಣಾಮ್॥
ಅನಂತವ್ರತಮೇತದ್ಧಿ ವ್ರತೇsನಂತಸ್ತು ಪೂಜ್ಯತೇ॥
ಸ್ಯಾಬ್ರವೀದಹಮೇತತ್ಕರಿಷ್ಯೇ ವ್ರತಮುತ್ತಮಮ್।
ವಿಧಾನಂ ಕೀದೃಶಂ ತ್ವತ್ರ ಕಿಂ ದಾನಂ ಕೋsತ್ರ ಪೂಜ್ಯತೇ॥

ಶ್ಲೋಕ: 14-15

ಸ್ಯಾಪಿ ಚಕ್ರೇ. ವ್ರತಂ ಶೀಲಾ ಕರೇ ಬಧ್ವಾ ಸುದೋರಕಮ್।
ಚತುರ್ದಶಗ್ರಂಥಿಯುತಂ ವಾಮೇ ಬಾಹೌ ಯಥೋದಿತಮ್॥

ಶ್ಲೋಕ : 133-134

ಯೋsನ್ಯೋs ಪಿ ಕುರುತೇ ಭಕ್ತ್ಯಾ ನಾರೀ ವಾ ಪುರುಷೋsಪಿ ವಾ
ಸಂತೋಷಮಮಲಂ ಪ್ರಾಪ್ಯ ಮೋದತೇ ವಿಷ್ಣುಮಂದಿರೇ॥

ಈ ಮೇಲೆ ಕಾಣಿಸಿದ ಪ್ರಮಾಣಗಳಿಂದ ಹಿಂದೆ ಶೀಲಾ ಎಂಬ ಸ್ತ್ರೀಯು ಶ್ರೀ ಅನಂತಪದ್ಮನಾಭವ್ರತವನ್ನು ಅನುಷ್ಠಾನ ಮಾಡಿದಂತೆ ಸ್ಪಷ್ಟವಾಗಿ ತಿಳಿದುಬರುತ್ತದೆ. ಆದ್ದರಿಂದ ಸ್ತ್ರೀಯರೂ ಕೂಡ ಶ್ರೀಅನಂತಪದ್ಮನಾಭ ವ್ರತವನ್ನು ಅನುಷ್ಠಾನಮಾಡಬಹುದು.

167. ಹಿಂದಿನ ವರ್ಷ ಧಾರಣ ಮಾಡಿದ ಶ್ರೀ ಅನಂತನ ದಾರವನ್ನು ಯಾವಾಗ ವಿಸರ್ಜನೆ ಮಾಡಬೇಕು? ವಿಸರ್ಜಿತ ದಾರವನ್ನು ಏನು ಮಾಡಬೇಕು?

ಉ. ಅನಂತಪೂಜಾ ಪದ್ಧತಿ - ಕುಂಭಕೋಣಪ್ರತಿ-ಸಾಂಕ 26ಮತ್ತು ನಿರಂಕ 27ನೇ ಪುಟ

ನಮಃ ಸರ್ವಹಿತಾನಂತ ಜಗದಾನಂದಕಾರಕ।
ಜೀರ್ಣದೋರಮಮುಂ ದೇವ ವಿಸೃಜೇsಹಂ ತ್ವದಾಜ್ಞಯಾ।
ಇತಿ ಜೀರ್ಣದೋರವಿಸರ್ಜನಮ್।

ವ್ರತಾನುಷ್ಠಾನಪದ್ಧತಿ:- ಚತುರ್ವೇದಿ ವೇದವ್ಯಾಸಾಚಾರ್

**ಪುಟ-315**

**ಜೀರ್ಣದೋರವಿಸರ್ಜನಮ್:-**

**ವಿಸರ್ಜಯಾಮಿ ದೇವೇಶ ಪೂರ್ವಸೂತ್ರಂ ಧೃತಂ ಪರಮ್।**

**ಸಂಪೂರ್ಣಂ ವ್ರತಮಸ್ತ್ವತ್ರ ಮತ್ಕೃತಂ ತ್ವದನುಜ್ಞಯಾ**

**ಇತಿ ಪೂರ್ವದೋರವಿಸರ್ಜನಮ್।**

**ನಮಸ್ತೇ ದೇವ ದೇವೇಶ ನಮಸ್ತೇ ಧರಣೀಧರ।**

**ನಮಸ್ತೇ ಸರ್ವನಾಗೇಂದ್ರ ನಮಸ್ತೇ ಪುರುಷೋತ್ತಮ।**

**ಇತಿ ನಮಸ್ಕೃತ್ಯ। ಕ್ಷೀರೇ ವಿಸರ್ಜಿತದೋರಂ ಸ್ಥಾಪಯೇತ್।**

ಈ ಮೇಲೆ ಕಾಣಿಸಿದ ಪ್ರಮಾಣಗಳಿಂದ ನೂತನ ದೋರವನ್ನು ಧಾರಣ ಮಾಡಿದ ಮೇಲೆ ಪೂರ್ವದಲ್ಲಿ ಧಾರಣ ಮಾಡಿದ್ದ ಜೀರ್ಣವಾದ ದೋರವನ್ನು ವಿಸರ್ಜನೆ ಮಾಡಬೇಕೆಂದು ತಿಳಿದುಬರುತ್ತದೆ. ಆದ್ದರಿಂದ ಪ್ರತಿವರ್ಷ ಭಾದ್ರಪದ ಶುಕ್ಲ ಚತುರ್ದಶೀ ದಿನದಂದು, ಶ್ರೀ ಅನಂತಪದ್ಮನಾಭನ ಪೂಜೆಯನ್ನು ಮಾಡಿ ನೂತನ ದೋರವನ್ನು ಕಟ್ಟಿಕೊಂಡು, ಆ ಮೇಲೆ ಅಂದೇ ಹಿಂದಿನ ವರ್ಷ ಧಾರಣ ಮಾಡಿದ್ದ ಜೀರ್ಣವಾದ ದೋರವನ್ನು ವಿಸರ್ಜಿಸಬೇಕು. ವಿಸರ್ಜಿತವಾದ ಶ್ರೀ ಅನಂತನ ದಾರವನ್ನು ಹಾಲಿನಲ್ಲಿ ಹಾಕಬೇಕು ಕೆರೆ-ಬಾವಿ ಮುಂತಾದ ಜಲಾಶಯಗಳಲ್ಲೂ ಹಾಕಬಹುದೆಂದು ಕೆಲವರು ಹೇಳುತ್ತಾರೆ.

**168. ಶ್ರೀ ಅನಂತನ ದಾರವು ಕೆಂಪು ಬಣ್ಣದ್ದೇ ಏಕೆ ಆಗಿರಬೇಕು?**

ಉ. **ಅನಂತವ್ರತಕಥಾಯಾಮ್ :- ಶ್ಲೋಕ :- 59-60**

**ತಸ್ಯ ಅಗ್ರತಃ ದೃಢಂ ಸೂತ್ರಂ ಕುಂಕುಮಾಕ್ತಂ ಸುದೋರಕಮ್।**

2. **ಬ್ರಹ್ಮಾಂಡಪುರಾಣಾಂತರ್ಗತ ಭಾದ್ರಪದಮಾಸಮಹಿಮೆ :-**

**ಶ್ಲೋ-35**

**ತಸ್ಯ ಅಗ್ರತಃ ದೃಢಂ ಸೂತ್ರಂ ಕುಂಕುಮಾಕ್ತಂ ಸುದೋರಕಮ್।**

3. **ಸ್ಮೃತಿಕೌಸ್ತುಭೇ :- ಸೂತ್ರೈಃ ............ ಕುಂಕುಮಾದಿಭಿರಕ್ತಮ್।**

4. ವರಾಹಪುರಾಣಾಂತರ್ಗತ ಚಾತುರ್ಮಾಸ್ಯ ಮಾಹಾತ್ಮ್ಯೇ

ಅಧ್ಯಾಯ19-ಶ್ಲೋ:53.

ತತೋಽನಂತಚತುರ್ದಶ್ಯಾಂ ರಕ್ತಂ ಸೂತ್ರಂ ಪ್ರಪೂಜಯೇತ್।

ಈ ಮೇಲೆ ಕಾಣಿಸಿದ ಪ್ರಮಾಣಗಳಲ್ಲಿ ಹೇಳಿದಂತೆ ಶ್ರೀ ಅನಂತ

ಪದ್ಮನಾಭನ ದಾರವು ಕೆಂಪು ಬಣ್ಣವುಳ್ಳದ್ದಾಗಿರಬೇಕೆಂದು ತಿಳಿದು ಬರುತ್ತದೆ. ಶ್ರೀಅನಂತಪದ್ಮನಾಭನ ದಾರವು ಕೆಂಪು ಬಣ್ಣದ್ದೇ ಏಕೆ ಆಗಿರಬೇಕು ಎಂಬ ಪ್ರಶ್ನೆಗೂ ಈ ಮೇಲೆ ಕಾಣಿಸಿದ ಪ್ರಮಾಣಗಳನ್ನೇ ಉದಾಹರಿಸಿ, ಈ ಪ್ರಮಾಣಗಳ ಪ್ರಕಾರ ಅನಂತನ ದಾರವು ಕೆಂಪುಬಣ್ಣವುಳ್ಳದ್ದೇ ಆಗಿರಬೇಕೆಂದು ಸಮಾಧಾನವನ್ನು ಹೇಳಬೇಕು.

**169. ಶ್ರೀ ಅನಂತನ ದಾರದಲ್ಲಿರುವ 14 (ಗ್ರಂಥಿ) ಗಂಟುಗಳು ಯಾವುದರ ಸಂಕೇತ?**

ಉ. ತತೋಽನಂತಚತುರ್ದಶ್ಯಾಂ ರಕ್ತಂ ಸೂತ್ರಂ ಪ್ರಪೂಜಯೇತ್

2. ಸ್ವಗೃಹಂ ಗಚ್ಛ ಕೌಂಡಿಣ್ಯ ಮಾ ವಿಲಂಬಂ ಕುರು ದ್ವಿಜ ।
ಚರಾನಂತವ್ರತಂ ಭಕ್ತ್ಯಾ ನವವರ್ಷಾಣಿ ಪಂಚ ಚ ।

3. ಕುಬೇರೇಣ ಚ ಧರ್ಮೇಣ ಪ್ರಾಪ್ತಂ ರಾಜ್ಯಮಕಂಟಕಮ್ ।
ಸಗರೇಣ ದಿಲೀಪೇನ ಭರತೇನ ಮಹೀಭೃತಾ ।
ಶತ್ರುಸಂಘಂ ರಣೇ ಹತ್ವಾ ರಾಜ್ಯಂ ಚ ವಿಪುಲಂ ಕೃತಮ್ ।
ಅನಂತವ್ರತಧರ್ಮೇಣ ಜೀರ್ಣೇನ ಪಾಂಡವ ।

**170. ನಮ್ಮ ಜೀವನದಲ್ಲಿ ಪ್ರತಿವರ್ಷ ಭಾದ್ರಪದಶುಕ್ಲಚತುರ್ದಶೀ ದಿನದಂದು ಶ್ರೀಅನಂತಪದ್ಮನಾಭನ ಪೂಜೆಯನ್ನು ಮಾಡಬೇಕಾದರೆ ಮೊದಲನೇ ವರ್ಷ ವಿಧಿಪೂರ್ವಕವಾಗಿ ವ್ರತವನ್ನು ಹಿಡಿದು ಪೂಜೆ ಮಾಡಬೇಕಲ್ಲವೆ?**

ಉ. ವರಾಹಪುರಾಣಾಂತರ್ಗತ ಚಾತುರ್ಮಾಸ್ಯಮಾಹಾತ್ಮ್ಯೆ ಅಧ್ಯಾಯ 19 ಶ್ಲೋ 53.

**ತತೋಽನಂತಚತುರ್ದಶ್ಯಾಂ ರಕ್ತಂ ಸೂತ್ರಂ ಪ್ರಪೂಜಯೇತ್ ।**
**ಚತುರ್ದಶೈವ ವರ್ಷಾಣಿ ಗೃಹೀತ್ವಾ ವ್ರತಮುತ್ತಮಮ್ ॥**

ಈ ಮೇಲೆ ಕಾಣಿಸಿರುವ ಪ್ರಮಾಣದಿಂದ ಮೊದಲು ಶ್ರೀಅನಂತ ವ್ರತವನ್ನು ವಿಧಿಪ್ರಕಾರವಾಗಿ ಹಿಡಿದು 14ವರ್ಷಗಳ ತನಕ ಶ್ರೀಅನಂತನ ಪೂಜೆಯನ್ನು ಮಾಡಬೇಕೆಂದು ತಿಳಿದು ಬರುತ್ತದೆ. ಆದ್ದರಿಂದ ಮೊದಲನೇ ವರ್ಷ ವಿಧಿಪ್ರಕಾರವಾಗಿ ಶ್ರೀಅನಂತನ ವ್ರತವನ್ನು ಹಿಡಿದು ಪ್ರತಿವರ್ಷ ಪೂಜೆಯನ್ನು ಮಾಡಬೇಕು.

**171. ಶ್ರೀಅನಂತವ್ರತವನ್ನು ವಿಧಿಪ್ರಕಾರವಾಗಿ ಹಿಡಿಯದೇ ಇದ್ದವರು ಪ್ರತಿವರ್ಷ ಶ್ರೀಅನಂತನ ಪೂಜಾದಿಗಳನ್ನು ಮಾಡಬಹುದೆ ?**

ಉ. ವರಾಹ ಪುರಾಣಾಂತರ್ಗತ ಚಾತುರ್ಮಾಸ್ಯ ಮಾಹಾತ್ಮ್ಯೆ ಅಧ್ಯಾಯ 19 ಶ್ಲೋಕ 53-54

**ತತೋಽನಂತಚತುರ್ದಶ್ಯಾಂ ರಕ್ತಂ ಸೂತ್ರಂ ಪ್ರಪೂಜಯೇತ್।**
**ಚತುರ್ದಶೈವ ವರ್ಷಾಣಿ ಗೃಹೀತ್ವಾ ವ್ರತಮುತ್ತಮಮ್॥**
**ಅವ್ರತೋಽಪಿ ಪ್ರಕುರ್ವೀತ ದಾನಂ ತಸ್ಯ ಪ್ರಪೂಜನಮ್।**

ಈ ಮೇಲೆ ಕಾಣಿಸಿದ ಪ್ರಮಾಣದಿಂದ ಅವ್ರತನೂ ಕೂಡ ಅಂದರೆ ಶ್ರೀಅನಂತವ್ರತವನ್ನು ವಿಧಿಪ್ರಕಾರವಾಗಿ ಹಿಡಿಯದವನೂ ಕೂಡ ಪ್ರತಿವರ್ಷ ಶ್ರೀಅನಂತನ ಪೂಜಾದಿಗಳನ್ನು ಮಾಡಬೇಕು ಎಂದು ತಿಳಿದುಬರುತ್ತದೆ. ಆದ್ದರಿಂದ ವಿಧಿಪ್ರಕಾರವಾಗಿ ಶ್ರೀಅನಂತವ್ರತವನ್ನು ಹಿಡಿಯದವನೂ ಕೂಡ ಪ್ರತಿ ವರ್ಷ ಶ್ರೀಅನಂತಪೂಜಾದಿಗಳನ್ನು ಮಾಡಬೇಕು. ಆದರೆ ಮೊದಲನೇ ವರ್ಷ ವಿಧಿಪೂರ್ವಕವಾಗಿ ವ್ರತವನ್ನು ಹಿಡಿಯುವುದು ಶಿಷ್ಟಾಚಾರವಾಗಿದೆ.

**172. ಶ್ರೀಅನಂತಪದ್ಮನಾಭನ ವ್ರತವನ್ನು ಹಿಡಿದವರು ಉದ್ಯಾಪನೆಯನ್ನು ಮಾಡಬೇಕೋ ಅಥವಾ ಮಾಡಬೇಕಾಗಿಲ್ಲವೋ? ಮಾಡಬೇಕಾದರೆ ಯಾವಾಗ ಮಾಡಬೇಕು?**

ಉ. ಸ್ಮೃತಿಕೌಸ್ತುಭ ಪುಟ-175

ಅಥ ಹೇಮಾದ್ರಿ-ಮದನರತ್ನಾದ್ಯುದಾಹೃತ ಭವಿಷ್ಯೋತ್ತರೇ ಉಕ್ತ ಉದ್ಯಾಪನಪ್ರಯೋಗಃ :- ವ್ರತೇ ಪರಿಪೂರ್ಣೇ ಅಪೂರ್ಣೇ ವಾ ಅಸ್ಯಾಮೇವ ಚತುರ್ದಶ್ಯಾಂ

ಭವಿಷ್ಯೋತ್ತರ ಪುರಾಣಾಂತರ್ಗತ ಹನುಮದ್ವ್ರತಕಲ್ಪ-ಶ್ಲೋಕ 51ಮತ್ತು 56

**ವ್ರತಮೇತತ್ತುಸ್ಕರ್ತವ್ಯಂ ವತ್ಸರಾಣಿ ತ್ರಯೋದಶ।**
**ಕುರ್ಯಾದುದ್ಯಾಪನಂ ಚಾದೌ ಅಂತರಾಲೇಽಂತಿಕೇಽಪಿ ವಾ॥**
**ಉದ್ಯಾಪನಂ ಚ ತತ್ರೈವ ಹೋಮಂ ಸಶ್ರುವಪಾಯಸೈಃ।**

ಶ್ರೀಅನಂತಪದ್ಮನಾಭವ್ರತವನ್ನು ವಿಧಿಪುರಸ್ಸರವಾಗಿ ಹಿಡಿದವರು ಉದ್ಯಾಪನೆ ಮಾಡಬೇಕೆಂದು ಭವಿಷ್ಯೋತ್ತರಪುರಾಣದಲ್ಲಿ ಹೇಳಿದೆ. ಈ ವಿಷಯವನ್ನೇ ಹೇಮಾದ್ರಿ-ಮದನರತ್ನಾದಿ ಗ್ರಂಥಗಳಲ್ಲಿ ಭವಿಷ್ಯೋತ್ತರ ಪುರಾಣವಚನವನ್ನು ಉದಾಹರಿಸಿ ಹೇಳಲಾಗಿದೆ. ಎಂಬ ವಿಷಯವು ಸ್ಮೃತಿ

ಕೌಸ್ತುಭಗ್ರಂಥದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ ಆದ್ದರಿಂದ ಶ್ರೀಅನಂತ ಪದ್ಮನಾಭವ್ರತವನ್ನು ಹಿಡಿದವರು ಉದ್ಯಾಪನೆಯನ್ನು ಮಾಡಬೇಕು.

ಹನುಮದ್ವ್ರತವನ್ನು ಹಿಡಿದವರು 13 ವರ್ಷಗಳ ತನಕ ವ್ರತವನ್ನು ಅನುಷ್ಠಿಸಿ, ಉದ್ಯಾಪನೆಯನ್ನು ಆದಿಯಲ್ಲಾಗಲಿ ಮಧ್ಯದಲ್ಲಾಗಲಿ ಅಥವಾ ಕೊನೆಯಲ್ಲಾಗಲಿ ಮಾಡಬೇಕೆಂದು ಭವಿಷ್ಯೋತ್ತರ ಪುರಾಣಾಂತರ್ಗತ ಹನುಮದ್ವ್ರತಕಲ್ಪದಲ್ಲಿ ವಿಧಾನಮಾಡಲಾಗಿದೆ.

ಅದರಂತೆ 14 ವರ್ಷಗಳ ತನಕ ಅನಂತವ್ರತವನ್ನು ಮಾಡಿ, ವ್ರತದ ಉದ್ಯಾಪನೆಯನ್ನು ಕೂಡ ಆದಿಯಲ್ಲಾಗಲಿ ಮಧ್ಯದಲ್ಲಾಗಲಿ ಅಥವಾ ಅಂತ್ಯದಲ್ಲಾಗಲೀ ಮಾಡಬಹುದು. ಆದರೆ ಈ ವ್ರತವು ಜನ್ಮವ್ರತವೆಂದು ತಿಳಿದು ಕೆಲವರು ಉದ್ಯಾಪನೆಯನ್ನು ಮಾಡಿದಮೇಲೂ ಈ ವ್ರತವನ್ನು ಅನುಷ್ಠಾನ ಮಾಡುತ್ತಾರೆ. ಮತ್ತೆ ಕೆಲವರು ಉದ್ಯಾಪನೆಯನ್ನು ಮಾಡದಲೆ ಜನ್ಮವಿರುವ ತನಕ ಈ ವ್ರತದ ಅನುಷ್ಠಾನವನ್ನು ಮಾಡುತ್ತಾರೆ. ಈ ರೀತಿ ಶಿಷ್ಟಾಚಾರದಲ್ಲಿ ಕಂಡುಬಂದಿದೆ.

**173. ಶ್ರೀ ಅನಂತವ್ರತವನ್ನು ಸ್ತ್ರೀಯರೇ ಆಗಲಿ ಪುರುಷರೇ ಆಗಲಿ ಸಾಮೂಹಿಕವಾಗಿ ಮಾಡಬೇಕೋ ಅಥವಾ ಪ್ರತ್ಯೇಕವಾಗಿ ಮಾಡಬೇಕೊ?**

ಉ. ಅನಂತವ್ರತಕಥೆ-ಶ್ಲೋಕ 49-50

**ದದರ್ಶ ಶೀಲಾ ಸಾ ಸ್ತ್ರೀಣಾಂ ಸಮೂಹಂ ರಕ್ತವಾಸಸಾಮ್ ।**
**ಚತುರ್ದಶ್ಯಾಮರ್ಚಯಂತಂ ಭಕ್ತ್ಯಾ ದೇವಂ ಜನಾರ್ದನಮ್ ॥**

ಶೀಲೆಯು ಶ್ರೀಅನಂತಪದ್ಮನಾಭನನ್ನು ಅರ್ಚಿಸುತ್ತಿರುವ ಸ್ತ್ರೀಯರ ಸಮೂಹವನ್ನು ನೋಡಿದಳು.

**" ಸಾಽಪಿ ಚಕ್ರೇ ವ್ರತಂ ಶೀಲಾ " (ಅನಂತವ್ರತಕಥಾ ಶ್ಲೋ 64)**
**ಶೀಲೆಯು ಶ್ರೀಅನಂತವ್ರತವನ್ನು ಆಚರಿಸಿದಳು**
**(ಅನಂತವ್ರತಕಥೆ-ಶ್ಲೋ-116-117)**
**ಕರಿಷ್ಯತಿ ನರೋ ಯಸ್ತು ಕುರ್ವನ್ ವ್ರತಮಿದಂ ಶುಭಮ್ ।**
**ಸೋಽಚಿರಾತ್ಪಾಪನಿರ್ಮುಕ್ತಃ ಪ್ರಾಪ್ನೋತಿ ಪರಮಾಂ ಗತಿಮ್ ॥**

ಯಾವ ನರನು ಈ ಅನಂತವ್ರತವನ್ನು ಆಚರಿಸುತ್ತಾನೋ ಅವನು ಉತ್ತಮವಾದ ಗತಿಯನ್ನು ಹೊಂದುತ್ತಾನೆ.

ಇದರಿಂದ ಸ್ತ್ರೀಯರೇ ಆಗಲಿ ಪುರುಷರೇ ಆಗಲಿ ಸಾಮೂಹಿಕ

ಸತ್ಯನಾರಾಯಣ ಪೂಜೆಯಂತೆ ಶ್ರೀಅನಂತಪದ್ಮನಾಭಪೂಜೆಯನ್ನು ಸಾಮೂಹಿಕವಾಗಿಯೂ ಅಥವಾ ಪ್ರಪ್ರತ್ಯೇಕವಾಗಿಯೂ ಮಾಡಬಹು ದೆಂದು ತಿಳಿದು ಬರುತ್ತದೆ.

**174. ಶ್ರೀಅನಂತಪದ್ಮನಾಭ ವ್ರತವನ್ನು ಹಿಡಿದ ಮೇಲೆ ಎಷ್ಟುವರ್ಷ ಆ ವ್ರತವನ್ನು ಆಚರಿಸಬೇಕು?**

ಉ. ಅನಂತವ್ರತಕಥೆ - ಶ್ಲೋ-112

**ಚರಾನಂತವ್ರತಂ ಭಕ್ತ್ಯಾ ನವವರ್ಷಾಣಿ ಪಂಚ ಚ ॥**

ಇತ್ಯಾದಿ ಪ್ರಮಾಣಗಳಲ್ಲಿ ಹೇಳಿದಂತೆ, ಶ್ರೀಅನಂತವ್ರತವನ್ನು ಹಿಡಿದ ಮೇಲೆ 14ವರ್ಷ ಆಚರಿಸಬೇಕು. ಆದರೆ ಈ ವ್ರತವನ್ನು ನಿತ್ಯವ್ರತ/ಜನ್ಮವ್ರತ ವೆಂದು ಭಾವಿಸಿ, ಕಾಮನಾದಿಂದ ಆಚರಿಸದಲೆ ಭಗವತ್ಪ್ರೀತ್ಯರ್ಥವಾಗಿ ಜನ್ಮಪರ್ಯಂತ ಶಿಷ್ಟರು ಈಗಲೂ ಆಚರಿಸುತ್ತಿರುವುದು ಗಮನಾರ್ಹ.

**175. ಶ್ರೀ ಅನಂತವ್ರತದ ಆಚರಣೆಯಿಂದ ಬರುವ ಫಲವೇನು?**

**ಉ. ಅನಂತವ್ರತಕಥೆ - ಶ್ಲೋಕ 134-136**

**ಅನಂತ ಉವಾಚ:-**
**ಸ್ವಗೃಹಂ ಗಚ್ಛ ಕೌಂಡಿಣ್ಯ ಮಾ ವಿಲಂಬಂ ಕುರು ದ್ವಿಜ ।**
**ಚರಾನಂತವ್ರತಂ ಭಕ್ತ್ಯಾ ನವ ವರ್ಷಾಣಿ ಪಂಚ ಚ ॥**
**ಸರ್ವಪಾಪವಿಶುದ್ಧಾತ್ಮಾ ಪ್ರಾಪ್ಸ್ಯಸೇ ಸಿದ್ಧಿಮುತ್ತಮಾಮ್ ।**
**ಪುತ್ರಾನ್ ಪೌತ್ರಾನ್ ಸಮುತ್ಪಾದ್ಯ ಭುಕ್ತ್ವಾ ಭೋಗಾನ್ ಯಥೇಪ್ಸಿತಾನ್ ।**
**ಅಂತೇ ಮತ್‌ಸ್ಮರಣಂ ಪ್ರಾಪ್ಯ ಮಾಮುಪೈಷ್ಯಸ್ಯಸಂಶಯಮ್ ।**
**ಅನ್ಯಂ ಚ ವರಂ ದದ್ಮಿ ಸರ್ವಲೋಕೋಪಕಾರಕಮ್ ।**
**ಇದಮಾಖ್ಯಾನವರಂ ಶ್ರುತ್ವಾಽನಂತವ್ರತಾದಿಕಮ್ ।**
**ಕರಿಷ್ಯಂತಿ ನರೋ ಯಸ್ತು ಕುರ್ವನ್ ವ್ರತಮಿದಂ ಶುಭಮ್ ।**
**ಸೋಽಚಿರಾತ್ಪಾಪನಿರ್ಮುಕ್ತಃ ಪ್ರಾಪ್ನೋತಿ ಪರಮಾಂ ಗತಿಮ್ ।**
**ಇತ್ಯುಕ್ತಂ ತೇ ಮಹಾಸರ್ವಂ ವಿಪ್ರ ಗಚ್ಛ ಪುನರ್ಗ್ರಹಮ್ ।**
**ಚರಾನಂತವ್ರತಂ ತತ್ರ ನವ ವರ್ಷಾಣಿ ಪಂಚ ಚ ।**
**ತತಸ್ತುಷ್ಟಃ ಪ್ರದಾಸ್ಯಾಮಿ ನಕ್ಷತ್ರಂ ಸ್ಥಾನಮುತ್ತಮಮ್ ।**
**ಕುಬೇರೇಣ ಚ ಧರ್ಮೇಣ ಪ್ರಾಪ್ತಂ ರಾಜ್ಯಮಕಂಟಕಮ್ ।**
**ಸಗರೇಣ ದಿಲೀಪೇನ ಭರತೇನ ಮಹೀಭೃತಾ ।**

**ಶತ್ರುಸಂಘಂ ರಣೇ ಹತ್ವಾ ರಾಜ್ಯಂ ಚ ವಿಪುಲೀಕೃತಮ್ ।**
**ಅನಂತವ್ರತಧರ್ಮೇಣ ಸಮ್ಯಕ್ ಚೀರ್ಣೇನ ಪಾಂಡವ ।**
**ಕೃತ್ವಾಽನಂತವ್ರತಂ ಶೀಘ್ರಂ ತ್ವದೀಯಂ ರಾಜ್ಯಮಾಪ್ನುಹಿ ।**
**ಶ್ರುತ್ವಾ ವ್ರತಮಿದಂ ಪುಣ್ಯಂ ಶ್ರಾವಯೇದ್ವಾ ಸಮಾಹಿತಃ ।**

ಈ ಮೇಲೆ ಕಾಣಿಸಿದ ಪ್ರಮಾಣಗಳ ಪ್ರಕಾರ ಶ್ರೀಅನಂತವ್ರತಾಚರಣೆಯಿಂದ ಉಂಟಾಗುವ ಫಲವು ಈ ಕೆಳಕಂಡಂತೆ ಇದೆ.
ಅನಂತವ್ರತವನ್ನಾಚರಿಸುವವನು

1. ಸಕಲ ಪಾಪಗಳಿಂದ ಮುಕ್ತನಾಗಿ ಶುದ್ಧಾತ್ಮನಾಗುತ್ತಾನೆ.
2. ಪುತ್ರ-ಪೌತ್ರಾದಿಗಳನ್ನು ಹೊಂದುತ್ತಾನೆ.
3. ಸಿದ್ಧಿಯನ್ನು ಹೊಂದುತ್ತಾನೆ.
4. ಈಪ್ಸಿತವಾದ ಸಕಲ ಭೋಗಗಳನ್ನೂ ಅನುಭವಿಸುತ್ತಾನೆ.
5. ಕೊನೆಯಲ್ಲಿ ಭಗವಂತನ ಸ್ಮರಣೆಯನ್ನು ಹೊಂದಿ ಪರಮಾತ್ಮನನ್ನೇ ಹೊಂದುತ್ತಾನೆ.
6. ಉತ್ತಮವಾದ ಗತಿಯನ್ನು ಹೊಂದುತ್ತಾನೆ.
7. ಕಳೆದುಕೊಂಡಿರುವುದನ್ನು ಪುನಃ ಹೊಂದುತ್ತಾನೆ.
8. ಒಟ್ಟಿನಲ್ಲಿ ಶ್ರೀಅನಂತಪದ್ಮನಾಭನ ಅನುಗ್ರಹವಾಗಿ ಸಕಲ ಪುರುಷಾರ್ಥಗಳನ್ನೂ ಪಡೆಯುತ್ತಾನೆ.

ಶ್ರೀ ಅನಂತವ್ರತವನ್ನಾಚರಿಸಿ ಅನೇಕರು ಫಲವನ್ನು ಪಡೆದಿರುತ್ತಾರೆ.
ಉದಾಹರಣೆ. . . . .

1. ಕುಬೇರ ಮತ್ತು ಧರ್ಮ ಅಕಂಟಕವಾದ ರಾಜ್ಯವನ್ನು ಪಡೆದರು.
2. ಸಗರ-ದಿಲೀಪ-ಭರತ ಮುಂತಾದ ರಾಜರು ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಿ, ರಾಜ್ಯವನ್ನು ವಿಸ್ತರಿಸಿದರು.
3. ಧರ್ಮರಾಜನು ಕಳೆದು ಕೊಂಡಿದ್ದ ರಾಜ್ಯವನ್ನು ಪುನಃ ಪಡೆದನು.
4. ಕೌಂಡಿಣ್ಯನೆಂಬ ಬ್ರಾಹ್ಮಣನು ನಕ್ಷತ್ರಸ್ಥಾನವನ್ನು ಹೊಂದಿದನು.

**176. ಪ್ರತಿವರ್ಷ ಭಾದ್ರಪದ ಶುಕ್ಲ ಚತುರ್ದಶೀದಿನದಂದು ಶ್ರೀಅನಂತ ಪದ್ಮನಾಭನನ್ನು ಪೂಜಿಸಿ, ಅನಂತನ ದಾರವನ್ನು ಮೊದಲು ಬ್ರಾಹ್ಮಣರಿಗೆ ಕೊಟ್ಟು ಆಮೇಲೆ ನಾವು ಧಾರಣ ಮಾಡಬೇಕಲ್ಲವೆ?**

**ಉ. ಚಾತುರ್ಮಾಸ್ಯಮಾಹಾತ್ಮೆ ಅಧ್ಯಾಯ 19 - ಶ್ಲೋಕ - 17 - 18.**

**ಪೌರ್ಣಮಾಸ್ಯಾಂ ತತಃ ಕುರ್ಯಾತ್ಪವಿತ್ರಾಣಾಂ ಸಮರ್ಪಣಮ್ ।**
**ನಾನಾವರ್ಣೈಃ ಪಟ್ಟಸೂತ್ರೈಃ ನಿರ್ಮಿತಾನಿ ಸಮರ್ಪಯೇತ್ ।**
**ಪವಿತ್ರಾಣಿ ತತೋ ದದ್ಯಾತ್ ದಕ್ಷಿಣಾಭಿಃ ಸಹೈವ ತು ।**
**ಬ್ರಾಹ್ಮಣೇಭ್ಯಃ ಸ್ವಯಂ ಚಾಪಿ ಕಂಠೇಽಥವಾ ಕರೇ ಬಿಭೃಯಾತ್।**

ಈ ಮೇಲೆ ಕಾಣಿಸಿದ ಪ್ರಮಾಣದ ಪ್ರಕಾರ ಪ್ರತಿವರ್ಷ ಶ್ರಾವಣ ಶುಕ್ಲ ಹುಣ್ಣಿಮೆ ದಿನದಂದು ದೇವರಿಗೆ ಪವಿತ್ರವನ್ನು ಸಮರ್ಪಿಸಿ, ಬ್ರಾಹ್ಮಣರಿಗೆ ಮೊದಲು ಪವಿತ್ರವನ್ನು ಕೊಟ್ಟು, ಅನಂತರದಲ್ಲಿ ನಾವು ಹೇಗೆ ಪವಿತ್ರವನ್ನು ಧಾರಣ ಮಾಡುತ್ತೇವೋ ಅದರಂತೆ ಅನಂತನದಾರವನ್ನು ಮೊದಲು ಬ್ರಾಹ್ಮಣರಿಗೆ ಕೊಟ್ಟು ಆಮೇಲೆ ನಾವು ಧಾರಣ ಮಾಡಬೇಕು.

**177. ಪ್ರತಿವರ್ಷ ಭಾದ್ರಪದ ಶುಕ್ಲ ಚತುರ್ದಶೀದಿನದಂದು ಶ್ರೀಅನಂತ ಪದ್ಮನಾಭನ ಪೂಜೆಯನ್ನು ಮಾಡಿ ವಾಯನ ದಾನವನ್ನು ಕೊಡಬೇಕಲ್ಲವೆ?**

**ಉ. ಅನಂತಪೂಜಾ ಪದ್ಧತಿಯಲ್ಲಿ**
**"ತತಃ ಬ್ರಾಹ್ಮಣಪೂಜಾಂ ಕೃತ್ವಾ ವಾಯನದಾನಂ ದದ್ಯಾತ್ "**
**ಎಂದು ಹೇಳಿದಂತೆ ಶ್ರೀ ಅನಂತಪದ್ಮನಾಭನ ಪೂಜೆಯನ್ನು ಮಾಡಿ,**
**ಅನಂತಃ ಪ್ರತಿಗೃಹ್ಣಾತಿ ಅನಂತೋ ವೈ ದದಾತಿ ಚ ।**
**ಅನಂತಸ್ತಾರಕೋ ದ್ವಾಭ್ಯಾಂ ಅನಂತಾಯ ನಮೋ ನಮಃ ॥**
ಎಂಬ ಮಂತ್ರವನ್ನುಚ್ಚರಿಸುತ್ತಾ ಶ್ರೀಅನಂತವ್ರತದ ನಿಮಿತ್ತವಾಗಿ ದಕ್ಷಿಣೆ-ತಾಂಬೂಲ ಸಹಿತವಾಗಿ ಬ್ರಾಹ್ಮಣನಿಗೆ ವಾಯನ ದಾನವನ್ನು ಎಲ್ಲರೂ ಕೊಡಬೇಕು.

**178. ಶ್ರೀ ಅನಂತವ್ರತವನ್ನು (ಶ್ರೀಅನಂತಪದ್ಮನಾಭನ ಪೂಜೆಯನ್ನು ಪತಿಯು ಪತ್ನಿಸಹಿತನಾಗಿ ಮಾಡಬೇಕೆ? ಹೇಗೆ?**

**ಉ. ಬ್ರಹ್ಮಾಂಡಪುರಾಣಾಂತರ್ಗತ ಭಾದ್ರಪದ ಮಾಸಮಾಹಾತ್ಮ್ಯೆ ಅಧ್ಯಾಯ 20 ಶ್ಲೋಕ .74-75.**

**1. ಕೌಂಡಿಣ್ಯೋಽಪ್ಯಾಗತೇ ಗೇಹೇ ಚಕಾರಾನಂತಸದ್ವ್ರತಮ್ ।**
**ಶೀಲಯಾ ಸಹ ಧರ್ಮಾತ್ಮಾ. . . .**

**2. ಅನಂತವ್ರತ ಕಥಾ - ಶ್ಲೋಕ - 130 - 133**
**ಕೌಂಡಿಣ್ಯೋಽಪಿ ಕುರು ಶ್ರೇಷ್ಠ ಪುರಮಾಯಾತ್ ಸ್ವಮಾಶ್ರಮಮ್ ।**
**ಶೀಲಯಾ ಸಹ ಕೌಂಡಿಣ್ಯಃ ಚಕಾರ ವ್ರತಮುತ್ತಮಮ್ ।**
**ಆರ್ಯಯಾ ಸಹ ಧರ್ಮಾತ್ಮಾ ವ್ರತಚರ್ಯಾ ಪ್ರಭಾವತಃ।**

**ಪೂರ್ವವತ್ಸರ್ವವಸ್ತೂನಿ ಪ್ರಾಪ ವಿಷ್ಣೋಃ ಪ್ರಸಾದತಃ ।**

ಹಿಂದೆ ಕೌಂಡಿಣ್ಯನೆಂಬ ಬ್ರಾಹ್ಮಣನು ತನ್ನ ಪತ್ನಿ ಶೀಲೆಯೊಡನೆ ಅನಂತ ವ್ರತವನ್ನು ಆಚರಿಸಿದಂತೆ ಈ ಮೇಲೆ ಕಾಣಿಸಿರುವ ಪ್ರಮಾಣಗಳಿಂದ ಕಂಡುಬರುತ್ತದೆ. ಆದ್ದರಿಂದ ಶ್ರೀಅನಂತವ್ರತವನ್ನು ಪತಿಯು ಪತ್ನೀಸಹಿತನಾಗಿ ಮಾಡಬೇಕು. ಆದರೆ ಈಗಿರುವ ಆಚರಣೆಯಲ್ಲಿ ಹೀಗೆ ಕಂಡುಬರುವುದಿಲ್ಲವೆಂಬುದು ಗಮನಾರ್ಹ.

**179. ಅನಂತಚತುರ್ದಶೀದಿನದಂದು ಶ್ರೀಅನಂತಪದ್ಮನಾಭದೇವರ ನೈವೇದ್ಯಕ್ಕೆ ಮೆತ್ತಗಿರುವ ಪಕ್ವಾನ್ನವನ್ನು ಮಾಡುತ್ತಾರೆ. ಸಾಮಾನ್ಯವಾಗಿ ಗಟ್ಟಿಯಾಗಿರುವ ಪಕ್ವಾನ್ನವನ್ನು ಮಾಡುವುದಿಲ್ಲ ಇದಕ್ಕೆ ಕಾರಣವೇನು?**

**ಉ. ಅನಂತಕಥೆ - ಶ್ಲೋಕ - 101**

**ಕೃಪಯಾನಂತದೇವೋऽಪಿ ಪ್ರತ್ಯಕ್ಷಂ ಸಮಜಾಯತ ।**
**ವೃದ್ಧಬ್ರಾಹ್ಮಣರೂಪೇಣ ಇತ ಏಹಿ ಇತ್ಯುಕ್ತ್ವಾ ಚ ತಮ್ ॥**

ಅಂದರೆ ಕೌಂಡಿಣ್ಯನೆಂಬ ಬ್ರಾಹ್ಮಣನಿಗೆ ಶ್ರೀ ಅನಂತಪದ್ಮನಾಭದೇವರು ವೃದ್ಧಬ್ರಾಹ್ಮಣರೂಪದಿಂದ ಪ್ರತ್ಯಕ್ಷನಾಗಿ ಅನಂತವ್ರತವನ್ನು ಮಾಡಲು ಅಪ್ಪಣೆ ಮಾಡಿದನು. ಲೋಕದಲ್ಲಿ ಸಾಮಾನ್ಯವಾಗಿ ವೃದ್ಧರು ಗಟ್ಟಿಯಾದ ಪದಾರ್ಥಕ್ಕಿಂತಲೂ ಮೆತ್ತಗಿರುವ ಪದಾರ್ಥವನ್ನೇ ಅಪೇಕ್ಷಿಸುತ್ತಾರೆ. ಆದ್ದರಿಂದ ಶ್ರೀಅನಂತಪದ್ಮನಾಭದೇವರು ಸಶಕ್ತನಾಗಿದ್ದರೂ ವೃದ್ಧಬ್ರಾಹ್ಮಣ ರೂಪದಿಂದ ಕೌಂಡಿಣ್ಯನೆಂಬ ಬ್ರಾಹ್ಮಣನಿಗೆ ಪ್ರತ್ಯಕ್ಷನಾಗಿ ಅನಂತವ್ರತವನ್ನು ಮಾಡಲು ಅಪ್ಪಣೆ ಮಾಡಿದ ಹಿನ್ನಲೆಯಲ್ಲಿ ಲೋಕರೀತಿಯನ್ನನುಸರಿಸಿ, ಅಂತಹ ಅನಂತಪದ್ಮನಾಭದೇವರ ನೈವೇದ್ಯಕ್ಕೆ ಅನಂತಚತುರ್ದಶೀ ದಿನದಂದು ಮೆತ್ತಗಿರುವ ಕಡುಬು ಮುಂತಾದ ಪಕ್ವಾನ್ನವನ್ನು ಮಾಡುವ ಕ್ರಮವು ರೂಢಿಯಲ್ಲಿ ಬಂದಿರಲಿಕ್ಕೆ ಸಾಕು.

**180. ಅನಂತಚತುರ್ದಶೀದಿನದಂದು ಶ್ರೀಅನಂತಪದ್ಮನಾಭದೇವರ ನೈವೇದ್ಯಕ್ಕೆ ಪಕ್ವಾನ್ನವನ್ನು ಮಾಡಬೇಕು. ನೈವೇದ್ಯ ಆದಮೇಲೆ ಬ್ರಾಹ್ಮಣನಿಗೆ ಎಷ್ಟು ಪಕ್ವಾನ್ನವನ್ನು ಕೊಡಬೇಕು? ನಾವು ಎಷ್ಟು ಪಕ್ವಾನ್ನವನ್ನು ಭಕ್ಷಿಸಬೇಕು?**

**ಉ. 1. ಸ್ಮೃತಿಕೌಸ್ತುಭ - ಪುಟ - 172**

**" ತತಃ ಪ್ರಸ್ಥಸ್ಯ ಪಕ್ವಾನ್ನಂ ಪುಂನಾಮ ಸಘೃತಂ ಚ ತತ್ "**

**2. ಬ್ರಹ್ಮಾಂಡಪುರಾಣಾಂತರ್ಗತ ಭಾದ್ರಪದಮಾಸಮಹಿಮೆ -**

**ಅಧ್ಯಾಯ - 20 ಶ್ಲೋಕ - 33**

**3. ಅನಂತವ್ರತ ಕಥೆ - ಶ್ಲೋಕ - 56**

**" ಶೀಲೇ ಪ್ರಸ್ಥಸ್ಯ ಪಕ್ವಾನ್ನಂ ಪುಂನಾಮ ಘೃತಪಾಚಿತಮ್ ।**
**ಅರ್ಧಂ ವಿಪ್ರಾಯ ದಾತವ್ಯಂ ಅರ್ಧಮಾತ್ಮನಿ ಭೋಜನಮ್ ॥**

ಈ ಮೇಲೆ ಕಾಣಿಸಿರುವ ಪ್ರಮಾಣಗಳಲ್ಲಿ ಹೇಳಿದಂತೆ ಅನಂತ ಚತುರ್ದಶೀದಿನದಂದು ಶ್ರೀ ಅನಂತಪದ್ಮನಾಭ ದೇವರ ನೈವೇದ್ಯಕ್ಕೆ ಒಂದು ಪ್ರಸ್ಥ ಪ್ರಮಾಣದಷ್ಟು ಪಕ್ವಾನ್ನವನ್ನು ಮಾಡಿ ದೇವರಿಗೆ ನಿವೇದಿಸಿ, ಅರ್ಧಪ್ರಮಾಣದಷ್ಟು ಪಕ್ವಾನ್ನವನ್ನು ಬ್ರಾಹ್ಮಣನಿಗೆ ಕೊಟ್ಟು ಇನ್ನುಳಿದ ಅರ್ಧಪ್ರಸ್ಥಪ್ರಮಾಣದಷ್ಟು ಪಕ್ವಾನ್ನವನ್ನು ನಾವು ಭಕ್ಷಿಸಬೇಕು. (ಪ್ರಸ್ಥ=ಪ್ರಾಚೀನ ಕಾಲದ ಒಂದು ಸೇರು=4 ಕುಡವಗಳು)

**181. ಶ್ರೀಅನಂತವ್ರತವನ್ನು ಹಿಡಿದವರು ಪ್ರತಿವರ್ಷ ಅನಂತಚತುರ್ದಶಿಯ ಹಿಂದಿನದಿನ ಹಿಂದಿನ ವರ್ಷ ಧಾರಣ ಮಾಡಿದ್ದ ದಾರವನ್ನು ಧಾರಣೆ ಮಾಡುತ್ತಾರೆ. ಇದರ ಹಿನ್ನೆಲೆ ಏನಿರಬಹುದು?**

ಉ. ಶ್ರೀಅನಂತವ್ರತವನ್ನು ಹಿಡಿದವರು ಆಯಾ ವರ್ಷ ಭಾದ್ರಪದಶುಕ್ಲ ಚತುರ್ದಶೀ ದಿನದಂದು ಶ್ರೀಅನಂತನ ಪೂಜೆಯನ್ನು ಮಾಡಿ ಅನಂತನ ದಾರವನ್ನು ಧಾರಣೆ ಮಾಡಬೇಕು. ಅಂದು ಧಾರಣ ಮಾಡಿದ ಅನಂತನ ದಾರವನ್ನು ಇಡೀ ಆ ವರ್ಷ ಹಾಗೇ ಧಾರಣ ಮಾಡಿದ್ದು ಮುಂದಿನ ವರ್ಷ ಭಾದ್ರಪದ ಶುಕ್ಲ ಚತುರ್ದಶೀ ದಿನದಂದು ಶ್ರೀಅನಂತನ ಪೂಜೆಯನ್ನು ಮಾಡಿ ನೂತನ ದೋರವನ್ನು ಧಾರಣ ಮಾಡಿದ ಮೇಲೇ ಹಿಂದಿನ ವರ್ಷ ಧಾರಣ ಮಾಡಿದ್ದ ಅನಂತನ ದಾರವನ್ನು ವಿಸರ್ಜಿಸಬೇಕು. ಇದು ಕ್ರಮ.

ಆದರೆ ಇಡೀ ವರ್ಷ ಬಿಡದಲೆ ಧಾರಣ ಮಾಡಿದರೆ ಒಂದು ವರ್ಷ ಮುಗಿದ ಮೇಲೆ, ವಿಸರ್ಜನೆಯ ಸಮಯಕ್ಕೆ ಅನಂತನ ದಾರವು ಪೂರ್ಣ ಜೀರ್ಣವಾಗಿ ವಿಸರ್ಜಿಸಲಿಕ್ಕೆ ಬರದಂತೆ ಆಗಬಹುದು. ಅಥವಾ ಕಳೆದು ಹೋಗಬಹುದು, ಇತ್ಯಾದಿ ಕಾರಣಗಳ ಹಿನ್ನೆಲೆಯಲ್ಲಿ ಅನಂತನ ಚತುರ್ದಶೀದಿನದಂದು ಧಾರಣ ಮಾಡಬೇಕಾಗಿರುವ ದಾರವನ್ನು ಅಂದು ಧಾರಣ ಮಾಡಿ ಮಾರನೇ ದಿವಸ ಅದನ್ನು ಸುರಕ್ಷಿತವಾದ ಸ್ಥಳದಲ್ಲಿ ಇಟ್ಟಿದ್ದು, ಮುಂದಿನ ವರ್ಷ ಅನಂತನ ಚತುರ್ದಶಿಯ ಹಿಂದಿನ ದಿನ ಅದನ್ನು ಮತ್ತೆ ಧಾರಣ ಮಾಡುವುದರ ಮೂಲಕ ಇಡೀ ಆ ವರ್ಷಪೂರ್ತಿ ಧಾರಣೆ ಮಾಡಿರುವಂತೆ ಅನುಸಂಧಾನ ಮಾಡಿ ಮಾರನೇದಿನ ಅಂದರೆ ಅನಂತನ

ಚತುರ್ದಶೀದಿನದಂದು ಶ್ರೀಅನಂತನಪೂಜೆಯನ್ನು ಮಾಡಿ ನೂತನ ದೋರವನ್ನು ಧಾರಣ ಮಾಡಿದ ಮೇಲೆ ಈ ಪೂರ್ವದಲ್ಲಿ ಧಾರಣ ಮಾಡಿದ್ದ ಅನಂತನ ದಾರವನ್ನು ವಿಸರ್ಜಿಸುವ ಕ್ರಮವು ರೂಢಿಯಲ್ಲಿ ಬಂದಿರಲಿಕ್ಕೆ ಸಾಕು. ಈ ಉಪಪತ್ತಿಯು ಎಲ್ಲರ ವಿಷಯದಲ್ಲೂ ಸಮಾನ.

**182. ಪ್ರತಿವರ್ಷ ಅನಂತ ಚತುರ್ದಶೀದಿನದಂದು ಯಾವ ಮಂತ್ರವನ್ನು ಹೇಳಿ ಅನಂತನ ದಾರವನ್ನು ಧಾರಣ ಮಾಡಬೇಕು ಮತ್ತು ವಿಸರ್ಜಿಸಬೇಕು?**

ಉ. **ಪ್ರತಿವರ್ಷ ಭಾದ್ರಪದಶುಕ್ಲ ಅನಂತಚತುರ್ದಶೀ ದಿನದಂದು ಶ್ರೀಅನಂತನ ಪೂಜೆಯನ್ನು ಮಾಡಿ,**

**" ಅನಂತಸಂಸಾರಮಹಾಸಮುದ್ರಮಗ್ನಂ ಸಮಭ್ಯುದ್ಧರ ವಾಸುದೇವ ।**
**ಅನಂತರೂಪಿನ್ ವಿನಿಯೋಜಯಸ್ವ ಹ್ಯನಂತಸೂತ್ರಾಯ ನಮೋ ನಮಸ್ತೇ "॥**
**ಎಂಬ ಮಂತ್ರವನ್ನು ಹೇಳಿ ಅನಂತನ ದಾರಕ್ಕೆ ನಮಸ್ಕರಿಸಿ,**
**"ಸಂಸಾರಗಹ್ವರಗುಹಾಸು ಸುಖಂ ವಿಹರ್ತುಂ**
**ವಾಂಛಂತಿ ಯೇ ಕುರುಕುಲೋದ್ಭವಶುದ್ಧಸತ್ವಾಃ ।**
**ಸಂಪೂಜ್ಯ ಚಕ್ರಿಭುವನೇಶಮನಂತರೂಪಂ**
**ಬಧ್ನಾಮಿ ದಕ್ಷಿಣಕರೇ ವರದೋರಕಂ ತೇ ॥**

ಎಂಬ ಮಂತ್ರವನ್ನು ಹೇಳಿ ಅನಂತನ ದಾರವನ್ನು ಧಾರಣ ಮಾಡಬೇಕು.

**183. ಸಂನ್ಯಾಸಿಗಳು - ವಿಧುರರು ಮುಂತಾದವರು, ಶ್ರೀ ಅನಂತನ ಒಂಟಿ ದಾರವನ್ನು ಮಾತ್ರ ಧಾರಣಮಾಡಬೇಕೋ ಅಥವಾ ಒಂದು ಜೊತೆಯನ್ನು ಧಾರಣ ಮಾಡಬೇಕೊ?.**

ಉ. ಪತಿಯು ಒಂದು ಜೊತೆ ಅನಂತನ ದಾರದಲ್ಲಿ ಒಂದನ್ನು ತಾನು ಧಾರಣ ಮಾಡಿ, ಇನ್ನೊಂದನ್ನು ಪತ್ನಿಗೆ ಧಾರಣ ಮಾಡಲು ಕೊಡುವುದು ರೂಢಿಯಲ್ಲಿದೆ. ಆದರೆ ಸಂನ್ಯಾಸಿಗಳು-ವಿಧುರರು ಇವರುಗಳು ಶ್ರೀಅನಂತನ ಎರಡೂ ದಾರಗಳನ್ನು ತಾವೇ ಧಾರಣ ಮಾಡಬೇಕು. ಆದರೆ ಅವಿವಾಹಿತರು - ಬಾಲಕರು ಮುಂತಾದವುರುಗಳಿಗೆ ಧಾರಣ ಮಾಡಲು ಶ್ರೀಅನಂತನ ದಾರವನ್ನು ಕೊಡುವಾಗ (ಒಂಟಿ) ಒಂದೇ ಕೊಡಬೇಕು. ಹಾಗೆ ಕೊಡುವುದೇ ರೂಢಿಯಲ್ಲಿ ಬಂದಿದೆ.

**184. ಪತಿಯು ಆಜ್ಞೆ ಇಲ್ಲದೇ ಪತ್ನಿಯು ಶ್ರೀಅನಂತನ ವ್ರತವನ್ನು ಆಚರಿಸಬಹುದೆ?**

ಉ. ಪುರುಷಾರ್ಥಚಿಂತಾಮಣಿ - ಪುಟ - ೩೦೨
" ಭರ್ತುರನುಜ್ಞೈವ ಸ್ತ್ರೀಣಾಂ ವ್ರತಾದ್ಯಧಿಕಾರೇಣ
ಭರ್ತುಃ ಕಾರ್ಯವ್ಯಾಪೃತತ್ವವಶೇನ " . . . . . ಅಂದರೆ
ಪತಿಯ ಆಜ್ಞೆ ಇಲ್ಲದಲೇ ಪತ್ನಿಗೆ ಯಾವುದೇ ವ್ರತಾದಿಗಳನ್ನು ಮಾಡಲು ಅಧಿಕಾರವಿಲ್ಲ.

**185. ಶ್ರೀಅನಂತನ ಚತುರ್ದಶೀ ದಿನದಂದು ಪುರುಷರು ಪುಷ್ಪಸಹಿತವಾಗಿ ಶ್ರೀ ಅನಂತನ ದಾರವನ್ನು ತಮ್ಮ ಬಲಗೈಯಲ್ಲಿ ಕಟ್ಟಿಕೊಳ್ಳುತ್ತಾರೆ. ಈ ಕ್ರಮವು ಯಾವ ಅಭಿಪ್ರಾಯದ ಹಿನ್ನೆಲೆಯಲ್ಲಿ ರೂಢಿಯಲ್ಲಿ ಬಂದಿದೆ?**

ಉ. ಭಾಗವತ - ೧೧-೬-೪೭
ತ್ವಯೋಪಭುಕ್ತಸ್ರಗ್ಗಂಧವಾಸೋಽಲಂಕಾರಚರ್ಚಿತಾಃ।
ಉಚ್ಛಿಷ್ಟಭೋಜನೇ ದಾಸಾಃ ತವ ಮಾಯಾಂ ಜಯೇಮಹಿ ॥

ಭಗವಂತನಿಗೆ ಸಮರ್ಪಿತವಾದ ವಸ್ತುಗಳೆಲ್ಲವೂ ನಮಗೆ ಗ್ರಾಹ್ಯವಾದವುಗಳು. ಅವುಗಳು ಅವನಿಂದ ಉಪಭಕ್ತವಾದವುಗಳು ಮತ್ತು ಅವುಗಳು ಅವನ ಪ್ರಸಾದರೂಪವಾದ ವಸ್ತುಗಳು. ನಾವು ಭಗವಂತನಿಂದ ಉಪಭುಕ್ತವಾದ ತುಳಸಿ ಬಿಡಿಹೂವು-ಹೂವಿನ ಮಾಲೆ -ಗಂಧ-ವಸ್ತ್ರ ಮುಂತಾದ ಶೋಭೆಯನ್ನು ತಂದುಕೊಡುವ ವಸ್ತುಗಳಿಂದ ಅಲಂಕೃತರಾಗಬೇಕು, ಎಂದು ಈ ಮೇಲೆ ಕಾಣಿಸಿದ ಭಾಗವತವಚನದಿಂದ ತಿಳಿದುಬರುತ್ತದೆ.

ಪ್ರಕೃತ ಶ್ರೀಅನಂತಚತುರ್ದಶೀ ದಿನದಂದು ಪೂಜಾದಿಗಳು ಮುಗಿದ ಮೇಲೆ ಹಿರಿಯರು ನಾವು ಧಾರಣ ಮಾಡಲು (ಕಟ್ಟಿಕೊಳ್ಳಲು) ಅನಂತನ ದಾರವನ್ನು ಮತ್ತು ಅದರ ಜೊತೆಯಲ್ಲಿ ಭಗವಂತನಿಂದ ಉಪಭುಕ್ತವಾದ ಪುಷ್ಪವನ್ನೂ ಪ್ರಸಾದರೂಪದಲ್ಲಿ ಕೊಡುವ ಸಂಪ್ರದಾಯ ಉಂಟು. ಪುಷ್ಪವನ್ನು ಸ್ತ್ರೀಯರು ತಮ್ಮ ತಲೆಯಲ್ಲಿ ಮುಡಿದುಕೊಳ್ಳುವುದರ ಮೂಲಕ ಭಗವಂತನಿಂದ ಉಪಭುಕ್ತವಾದ ಮತ್ತು ಶೋಭೆಯನ್ನು ತಂದುಕೊಡುವ ಪುಷ್ಪದಿಂದ ಅಲಂಕೃತರಾಗುತ್ತಾರೆ.

ಇದರಂತೆ ಪುರುಷರೂ ಕೂಡ ಪುಷ್ಪವನ್ನು ಅನಂತನ ದಾರದ ಜೊತೆಯಲ್ಲಿ ತಮ್ಮ ಬಲಗೈಯಲ್ಲಿ ಕಟ್ಟಿಕೊಳ್ಳುವುದರ ಮೂಲಕ ಭಗವಂತನಿಂದ ಉಪಭುಕ್ತವಾದ ಮತ್ತು ಶೋಭೆಯನ್ನು ತಂದಕೊಡುವ ಪುಷ್ಪದಿಂದ

ಅಲಂಕೃತರಾಗುತ್ತಾರೆ. ಆದ್ದರಿಂದ ಭಗವಂತನಿಂದ ಉಪಭುಕ್ತವಾದ ಮತ್ತು ಶೋಭೆಯನ್ನು ತಂದುಕೊಡುವ ವಸ್ತುಗಳ ಪೈಕಿ ಪುಷ್ಪದಿಂದಲೂ ಅಲಂಕೃತರಾಗಬೇಕೆಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ, ಪುರುಷರು ಪುಷ್ಪಸಹಿತವಾಗಿ ಅನಂತನ ದಾರವನ್ನು ತಮ್ಮ ಬಲಗೈಯಲ್ಲಿ ಕಟ್ಟಿಕೊಳ್ಳುವ ಕ್ರಮವು ರೂಢಿಯಲ್ಲಿ ಬಂದಿರಲಿಕ್ಕೆ ಸಾಕು.

**186. ಅನಂತನ ಚತುರ್ದಶೀದಿನದಂದು ಸ್ತ್ರೀಯರು ತಮ್ಮ ತಮ್ಮ ಪತಿಯ ಹಸ್ತದಿಂದಲೇ ಅನಂತನ ದಾರವನ್ನು ಪಡೆದು, ಧಾರಣ ಮಾಡುವ ಕ್ರಮವು ಯಾವ ಹಿನ್ನೆಲೆಯಲ್ಲಿ ರೂಢಿಯಲ್ಲಿ ಬಂದಿದೆ. ಒಂದು ಜೊತೆ ಅನಂತನ ದಾರದಲ್ಲಿ ಒಂದು ದಾರವನ್ನು ಮಾತ್ರ ಪತಿಯು ತನ್ನ ಪತ್ನಿಗೆ ಧಾರಣ ಮಾಡಲು ಕೊಡಲು ಕಾರಣವೇನು? ಅದರಲ್ಲೂ ಎರಡು ಕುಚ್ಚುಗಳು ಇರುವ ಅನಂತನ ದಾರವನ್ನೇ ಕೊಡಲು ಕಾರಣವೇನು? ಎರಡು ಗುಂಡುಗಳಿರುವ ಅನಂತನ ದಾರವನ್ನೇ ಪುರುಷರು ಧಾರಣ ಮಾಡಲು ಕಾರಣವೇನು?**

ಉ. "ದಂಪತ್ಯೋಃ ಸಹಾಧಿಕಾರಃ" ಎಂದು ಹೇಳಿದಂತೆ ಯಾವುದೇ ವ್ರತಾದಿಗಳಲ್ಲಿ ದಂಪತಿಗಳಿಬ್ಬರಿಗೂ ಅಧಿಕಾರಉಂಟು. ಪ್ರಕೃತ ಅನಂತವ್ರತದಲ್ಲೂ ಕೂಡ ದಂಪತಿಗಳಿಬ್ಬರಿಗೂ ಅಧಿಕಾರ ಉಂಟು. ಅಂದಮೇಲೆ ಪ್ರತಿವರ್ಷ ಶ್ರೀ ಅನಂತಚತುರ್ದಶೀದಿನದಂದು ಪೂಜಾದಿಗಳು ಮುಗಿದ ಮೇಲೆ ದಂಪತಿಗಳಿಬ್ಬರೂ ಶ್ರೀ ಅನಂತನ ದಾರವನ್ನು ಧಾರಣ ಮಾಡಲೇ ಬೇಕು. ಆದರೆ " ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂದು ಹೇಳಿದಂತೆ ಸ್ತ್ರೀಯರಿಗೆ ವ್ರತಾದಿಗಳಲ್ಲಿ ಸ್ವಾತಂತ್ರ್ಯೇಣ ಅಧಿಕಾರವಿಲ್ಲ. ಆದ್ದರಿಂದ ಪತಿಯ ಮೂಲಕವೇ ಪತ್ನಿಗೆ ವ್ರತಾದಿಗಳಲ್ಲಿ ಅಧಿಕಾರ. ಇದರ ಸಂಕೇತವಾಗಿಯೇ ಪತಿಯ ಮೂಲಕ ಪತ್ನಿಯು ಶ್ರೀಅನಂತನದಾರವನ್ನು ಪಡೆದು ಧಾರಣ ಮಾಡುತ್ತಾರೆ.

ಆದ್ದರಿಂದ ಒಟ್ಟಿನಲ್ಲಿ ಹೇಳುವುದಾದರೆ ತನ್ನ ಮೂಲಕವೇ ತನ್ನ ಪತ್ನಿಗೆ ವ್ರತಾದಿಗಳಲ್ಲಿ ಅಧಿಕಾರ ಮತ್ತು ಅನುಗ್ರಹ ಎಂಬ ಶಾಸ್ತ್ರೀಯ ಪ್ರಮೇಯದ ಹಿನ್ನೆಲೆಯಲ್ಲಿ ಅವತ್ತಿನಿಂದ ಇವತ್ತಿನ ವರೆಗೂ ಶಿಷ್ಟರೆಲ್ಲರೂ ಅನಂತನ ಚತುರ್ದಶೀದಿನದಂದು ತಮ್ಮ - ತಮ್ಮ ಪತ್ನಿಯರಿಗೆ ತಾವೇ ತಮ್ಮ ಹಸ್ತದಿಂದ ಅನಂತನ ದಾರವನ್ನು ಕೊಡುವ ಕ್ರಮವು ರೂಢಿಯಲ್ಲಿದೆ ಎಂದು ಹೇಳಿದರೆ

ತಪ್ಪಾಗಲಿಕ್ಕಿಲ್ಲವೆಂದು ತೋರುತ್ತದೆ.

ಒಂದು ಜೊತೆ ಅನಂತನ ದಾರದಲ್ಲಿ ಪತಿಯು ಒಂದು ದಾರವನ್ನು ಧಾರಣ ಮಾಡಿ ಇನ್ನೊಂದು ದಾರವನ್ನು ಅರ್ಧಾಂಗಿಯಾದ ಕಾರಣ ತನ್ನ ಪತ್ನಿಗೆ ಧಾರಣ ಮಾಡಲು ಕೊಡುತ್ತಾನೆ.

ಒಂದು ಜೊತೆ ಅನಂತನ ದಾರದಲ್ಲಿ ಒಂದು ದಾರವು ಒಂದೊಂದು ಬದಿಯಲ್ಲಿ ಒಂದೊಂದು ಗುಂಡಿನಂತೆ ಎರಡೂ ಬದಿಗಳು ಸೇರಿ ಒಟ್ಟು ಎರಡು ಗುಂಡುಗಳುಳ್ಳದ್ದು ಆಗಿರುತ್ತದೆ. ಒಂಟಿ ದಾರವು ಕೈಯಲ್ಲಿ ಕಟ್ಟಿಕೊಳ್ಳುವುದರ ಸಲುವಾಗಿಯೇ. ಅದಕ್ಕೆ ತಕ್ಕಂತೆ ನಿರ್ಮಿತವಾಗಿರುತ್ತದೆ. ಲಾಗಾಯಿತು ಬಂದಿರುವ ಶಿಷ್ಟಾಚಾರದಂತೆ ಪುರುಷರು ಅನಂತನ ದಾರವನ್ನು ತಮ್ಮ ಬಲಗೈಯಲ್ಲೇ ಧಾರಣ ಮಾಡುತ್ತಾರೆ. ಆದ್ದರಿಂದ ಕೈಯಲ್ಲಿ ಧಾರಣ ಮಾಡಲು ಯೋಗ್ಯವಾದ ಈ ಒಂಟಿ ದಾರವನ್ನೇ ಪತಿಯು ತನ್ನ ಬಲಗೈಯಲ್ಲಿ ಧಾರಣ ಮಾಡುತ್ತಾನೆ.

ಒಂದು ಜೊತೆ ಅನಂತನ ದಾರದಲ್ಲಿ ಉಳಿದ ಇನ್ನೊಂದು ದಾರವು, ಒಂದೊಂದು ಬದಿಯಲ್ಲಿ ಒಂದೊಂದು ಕುಚ್ಚಿನಂತೆ ಎರಡೂ ಬದಿಗಳು ಸೇರಿ ಒಟ್ಟು ಎರಡು ಕುಚ್ಚುಗಳುಳ್ಳದ್ದು ಆಗಿರುತ್ತದೆ. ಈ ಒಂಟಿದಾರವು ಕಂಠದಲ್ಲಿ ಧಾರಣ ಮಾಡುವುದರ ಸಲುವಾಗಿಯೇ. ಅದಕ್ಕೆ ತಕ್ಕಂತೆ ನಿರ್ಮಿತವಾಗಿರುತ್ತದೆ. ಲಾಗಾಯಿತು ಬಂದಿರುವ ಆಚಾರದಂತೆ ಸ್ತ್ರೀಯರೆಲ್ಲರೂ ಧಾರಣ ಮಾಡುತ್ತಾರೆ. ಆದ್ದರಿಂದ ಪತಿಯು ಕಂಠದಲ್ಲಿ ಧಾರಣ ಮಾಡಲು ಯೋಗ್ಯವಾದ ಒಂಟಿ ದಾರವನ್ನೇ ತನ್ನ ಪತ್ನಿಗೆ ಕಂಠದಲ್ಲಿ ಧಾರಣ ಮಾಡಲು ಕೊಡುತ್ತಾನೆ. ಕ್ರಮವು ಹೀಗಿದ್ದರೂ ಇದಕ್ಕೆ ವಿರುದ್ಧವಾದ ಯಾವುದೇ ತರಹದ ವಾದವೇ ಆಗಲಿ ಅಥವಾ ಆಚರಣೆಯೇ ಆಗಲಿ ಶಿಷ್ಟಾಚಾರವನ್ನು ಕೂಡ ಪ್ರಮಾಣವೆಂದು ಪ್ರಾಜ್ಞರು ಒಪ್ಪಿರುವುದರಿಂದ, ಅದಕ್ಕೆ ವಿರುದ್ಧವಾಗುವುದರಿಂದ ಉಪೇಕ್ಷಣೀಯವೇ ಆಗಿರುತ್ತದೆ.

**187. ಅನಂತನ ದಾರವನ್ನು ಹೇಗೆ ತಯಾರಿಸಬೇಕು?**

ಉ. **ಸ್ಮೃತಿಕೌಸ್ತುಭ - ಪುಟ 172**

**"ಸೂತ್ರೈ ಆತ್ಮಮಿತೈಃ ಶ್ಲಕ್ಷ್ಣೈಃ ಚತುರ್ದಶಭಿರಾವೃತಮ್ ।**
**ಚತುರ್ದಶಗ್ರಂಥಿಭಿಸ್ತು ಸವ್ಯವೃತ್ತೈಃ ಸುನಿರ್ಮಿತೈಃ ॥**
**ಕುಂಕುಮಾದಿಭಿಃ ಅಕ್ತಂ ಚ ಗಂಧಾದ್ಯೈರರ್ಚಯೇಚ್ಛುಭೈಃ ॥**

ಎಂದು ಹೇಳಿದಂತೆ ಅನಂತನ ದಾರವು:-

1. ಕೆಂಪು ಬಣ್ಣವುಳ್ಳದ್ದಾಗಿರಬೇಕು (ಕುಂಕುಮಾದಿಗಳಿಂದ ಯುಕ್ತವಾಗಿರಬೇಕು)
2. 14 ಗ್ರಂಥಿಗಳಿಂದ (ಗಂಟುಗಳಿಂದ) ಕೂಡಿದ್ದಾಗಿರಬೇಕು.
3. ಮೃದುವಾಗಿರುವ ಮತ್ತು 14ಸಲ ಸುತ್ತುವರಿದ ಎಳೆವುಳ್ಳದ್ದಾಗಿರಬೇಕು.
4. ತನ್ನ ಒಂದು ಅಳತೆಗೆ ಒಳಪಟ್ಟದ್ದಾಗಿರಬೇಕು.
5. ಬಲಗಡೆ ಗುಂಡಾಗಿರಬೇಕು.

ಈ ಮೇಲೆ ಕಾಣಿಸಿರುವಂತೆ ಅನಂತನ ದಾರವನ್ನು ತಯಾರಿಸಬೇಕು.

**188. ಅನಂತನ ದಾರವನ್ನು ಪುರುಷರು ಮತ್ತು ಸ್ತ್ರೀಯರು ತಮ್ಮ ದೇಹದ ಯಾವ ಅವಯವದಲ್ಲಿ ಧಾರಣ ಮಾಡಬೇಕು? ಪುರುಷರಲ್ಲಿ ಕೆಲವರು ಬಲಭುಜದಲ್ಲೂ ಮತ್ತೆ ಕೆಲವರು ಬಲ ಮೊಳಗೈಯಲ್ಲೂ ಅನಂತನ ದಾರವನ್ನು ಧಾರಣ ಮಾಡುತ್ತಾರೆ. ಇದಕ್ಕೆ ಪ್ರಮಾಣವೇನು? ಬಾಲಕರು-ವಿಧವೆಯರು -ಸಕೇಶಿಗಳು-ಅವಿವಾಹಿತ ಗಂಡು ಹುಡುಗರು-ಅವಿವಾಹಿತ ಹೆಣ್ಣು ಮಕ್ಕಳು ಇವರುಗಳು ಅನಂತನ ದಾರವನ್ನು ತಮ್ಮ ದೇಹದ ಯಾವ ಅವಯವದಲ್ಲಿ ಧಾರಣ ಮಾಡಬೇಕು?**

**ಉ. ಬ್ರಹ್ಮಾಂಡ ಪುರಾಣಾಂತರ್ಗತ ಭಾದ್ರಪದಮಾಸ ಮಹಿಮೆ - ಅಧ್ಯಾಯ - 20 - ಶ್ಲೋಕ -36-40**
**" ಚತುರ್ದಶಗ್ರಂಥಿಯುತಂ ವಾಮೇ ಕರತಲೇ ನ್ಯಸೇತ್।**
**ಸಾಽಪಿ ಶ್ರುತ್ವಾ ವ್ರತಂ ಚಕ್ರೇ ಕರೇ ಬಧ್ವಾ ಸುದೋರಕಮ್॥**
**"ಶೀಲಾಯಾಃ ಹಸ್ತಮೂಲೇ ತು ದೃಷ್ಟ್ವಾಬದ್ಧಂ ಸುದೋರಕಮ್।**

**2. ಸ್ಮೃತಿ ಕೌಸ್ತುಭೇ ಪುಟ - 169 -170-172**
**" ಅನಂತಸಂಸಾರ ಇತಿ ಪುಮಾನ್ ದಕ್ಷಿಣಹಸ್ತೇ ಬಧ್ನೀಯಾತ್।**
**ಸ್ತ್ರೀ ತು ವಾಮೇ ಇತಿ ಕ್ರಮಃ।**

**3. ಅನಂತಕಥಾ - ಶ್ಲೋಕ-62-64-65-70-71**
**"ಸಂಸಾರಗಹ್ವರಗುಹಾಸು ..... ಬಧ್ನಂತಿ ದಕ್ಷಿಣಕರೇ ವರದೋರಕಂ ತೇ।**

**4. ವರಾಹಪುರಾಣಾಂತರ್ಗತ ಚಾತುರ್ಮಾಸ್ಯಮಾಹಾತ್ಮ್ಯೇ ಅಧ್ಯಾಯ 3 ಶ್ಲೋಕ - 49 (ಕರಶಬ್ದಾರ್ಥಕಥನ) ಕರ್ಣಂ ಪ್ರೋಕ್ತಂ ಕರೌ ಆಕೂರ್ಪಕೌ ಸ್ಮೃತೌ॥**

ಅಂದರೆ ಕಿವಿಗಳ ವರೆಗಿನ ಭಾಗ ಮುಖ - ಮೊಳಕೈ ವರೆಗಿನ ಭಾಗ ಕರ.

5. **ಹನುಮದ್ವ್ರತ ಕಲ್ಪ - ಶ್ಲೋಕ 24 ಮತ್ತು 68**
**ಕದಾಚಿದಪಿ ಪಾಂಚಾಲ್ಯಾಃ ಕಂಠಸ್ಥಂ ವ್ರತದೋರಕಮ್ । ದೃಷ್ಟ್ವಾ.....**
**ಧಾರಯೇದ್ಯಃ । ಕಂಠಮೂಲೇ ದಕ್ಷಿಣೇಽಪ್ಯಥವಾ ಕರೇ**

6. **ಚಾತುರ್ಮಾಸ್ಯಮಾಹಾತ್ಮ್ಯೆ -ಅಧ್ಯಾಯ 19 ಶ್ಲೋ- 17-18**
**"ಪೌರ್ಣಮಾಸ್ಯಾಂ ತತಃ ಕುರ್ಯಾತ್ ಪವಿತ್ರಾಣಾಂ ಸಮರ್ಪಣಂ।**
**ಸ್ವಯಂ ಚಾಪಿ ಭಕ್ತ್ಯಾ ಕಂಠೇಽಥವಾ ಕರೇ ಬಿಭೃಯಾತ್।**

ಈ ಮೇಲೆ ಕಾಣಿಸಿದ ಪ್ರಮಾಣಗಳನ್ನು ಪರಿಶೀಲಿಸಿದಾಗ ಅನಂತನ ದಾರವನ್ನು ಕಟ್ಟಿಕೊಳ್ಳಲು ಕರವು/ಬಲಕರವು ವಿಹಿತವಾಗಿದೆ. ಇದರಂತೆ ಹನುಮದ್ವ್ರತದ ದಾರವನ್ನು ಮತ್ತು ಪವಿತ್ರವನ್ನು ಧಾರಣ ಮಾಡಲು ಕಂಠವೂ ಹೇಗೆ ವಿಹಿತವಾಗಿದೆಯೋ ಅದರಂತೆ ಅನಂತನ ದಾರವನ್ನು ಧಾರಣ ಮಾಡಲು ಕಂಠವೂ ವಿಹಿತವಾಗಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲವೆಂದು ತೋರುತ್ತದೆ.

ಅನಂತನ ದಾರವನ್ನು ಧಾರಣ ಮಾಡಲು ಈ ಮೇಲೆ ಕಾಣಿಸಿರುವ ವಾಕ್ಯಗಳಲ್ಲಿ ಕಂಠವು ಯದ್ಯಪಿ ಹೇಳದಿದ್ದರೂ ಸ್ತ್ರೀಯರೇ ಮೊದಲಾದವರು ಲಾಗಾಯಿತು ಅನಂತನ ದಾರವನ್ನು ಕಂಠದಲ್ಲಿ ಧಾರಣ ಮಾಡುವ ಶಿಷ್ಟಾಚಾರವು ಲೋಕದಲ್ಲಿ ಕಂಡುಬರುತ್ತದೆ. ಆಚಾರವೂ ಕೂಡ ಪ್ರಮಾಣವಾದಕಾರಣ ಆಚಾರಮೂಲಕವಾದ ಕಂಠವೂ ಕೂಡ ಅನಂತನ ದಾರವನ್ನು ಧಾರಣ ಮಾಡಲು ವಿಹಿತವಾದದ್ದು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲವೆಂದು ತೋರುತ್ತದೆ.

ಹಸ್ತವು ಪ್ರಮಾಣಮೂಲಕವಾದದ್ದಾದರೆ, ಕಂಠವು ಆಚಾರಮೂಲಕ ವಾದದ್ದು. ಆದ್ದರಿಂದ ಒಟ್ಟಿನಲ್ಲಿ ಅನಂತನ ದಾರವನ್ನು ಧಾರಣಮಾಡಲು ಹಸ್ತ-ಕಂಠ ಇವೆರಡೂ ವಿಹಿತವಾದವುಗಳೇ ಆಗಿರುತ್ತವೆ. ಇವೆರಡರ ಪೈಕಿ ಬಲಗೈಯಲ್ಲಿ /ಬಲ ಭುಜದಲ್ಲಿ ಪುರುಷರು ಲಾಗಾಯಿತು ಅನಂತನ ದಾರವನ್ನು ಧಾರಣ ಮಾಡುತ್ತಿದ್ದಾರಾದ್ದರಿಂದ ಪುರುಷರು ಬಲ ಭುಜದಲ್ಲೇ ಧಾರಣ ಮಾಡಬೇಕು. ಸ್ತ್ರೀಯರಾದರೂ ಲಾಗಾಯಿತು ಕಂಠದಲ್ಲಿ ಧಾರಣ ಮಾಡುವ ಆಚಾರವು ಲೋಕದಲ್ಲಿ ಕಂಡು ಬಂದಿರುವುದರಿಂದ ಸ್ತ್ರೀಯರು ಕಂಠದಲ್ಲಿ ಧಾರಣ ಮಾಡಬೇಕು. ಬಾಲಕರು-ವಿಧವೆಯರು- ಸಕೇಶಿಗಳು-

ಅವಿವಾಹಿತ ಗಂಡುಹುಡುಗರು ಅವಿವಾಹಿತ ಹೆಣ್ಣುಮಕ್ಕಳು ಇವರುಗಳು ಕಂಠದಲ್ಲಿ ಧಾರಣ ಮಾಡಬೇಕು. ಲಾಗಾಯಿತು ಬಂದಿರುವ ಆಚಾರವೂ ಕೂಡ ಅದರಂತೆ ಇದೆ.

ಇನ್ನು ಸಂನ್ಯಾಸಿಗಳು ಮತ್ತು ವಿಧುರರು ಇವರುಗಳು ಒಂಟಿ ಅನಂತನ ದಾರವನ್ನು ಕಂಠದಲ್ಲೂ ಧಾರಣ ಮಾಡಬೇಕು. ಲಾಗಾಯಿತು ಬಂದಿರುವ ಆಚಾರವೂ ಕೂಡ ಅದರಂತೆ ಇದೆ.

ಇನ್ನು ಸಂನ್ಯಾಸಿಗಳು ಮತ್ತು ವಿಧುರರು ಇವರುಗಳು ಒಂಟಿ ಅನಂತನ ದಾರವನ್ನು ಕಂಠದಲ್ಲೂ ಧಾರಣ ಮಾಡಬೇಕು. ಲಾಗಾಯಿತು ಬಂದಿರುವ ಶಿಷ್ಟಾಚಾರವೂ ಕೂಡ ಅದರಂತೆ ಇದೆ.

ಇನ್ನು ಈ ಮೇಲೆ ಕಾಣಿಸಿರುವ ವರಾಹ ಪುರಾಣಾಂತರ್ಗತವಾದ ಚಾತುರ್ಮಾಸ್ಯಮಾಹಾತ್ಮ್ಯೆಯಲ್ಲಿ ಹೇಳಿದಂತೆ ಮೊಳಕೈವರೆಗಿನ ಭಾಗವು ಕರವೆಂದು ಕರೆಸಿಕೊಳ್ಳಲ್ಪಡುತ್ತದೆ. ಈ ರೀತಿಯಾದ ಕರಶಬ್ದಾರ್ಥದ ಹಿನ್ನೆಲೆಯಲ್ಲಿ ಕೆಲ ಪುರುಷರು ತಮ್ಮ ಬಲಭುಜದಲ್ಲೂ ಮತ್ತು ಕೆಲ ಪುರುಷರು ತಮ್ಮ ಬಲ ಮೊಳಕೈಯಲ್ಲೂ ಶ್ರೀಅನಂತನ ದಾರವನ್ನು ಧಾರಣ ಮಾಡುವ ಕ್ರಮವು ರೂಢಿಯಲ್ಲಿ ಬಂದಿರಲಿಕ್ಕೆ ಸಾಕು.

# ಆಚಾರ-ವಿಚಾರ

**189. ಸ್ನಾನದಲ್ಲಿ ಅವಾಂತರಭೇದಗಳು ಯಾವು?**

ಉ. ಯಥಾವಿಧಿ ಸ್ನಾನಂ ಕುರ್ಯಾತ್ - ಈ ವಾಕ್ಯದಲ್ಲಿ ಶಾಸ್ತ್ರೋಕ್ತ ರೀತಿಯಿಂದ ಸ್ನಾನವನ್ನು ಮಾಡಲೇಬೇಕು ಎಂದು ಆಜ್ಞಾಪಿಸಿದ್ದಾರೆ.

ಇಲ್ಲಿರುವ 'ಸ್ನಾನ' ಎಂಬ ಪದವು ಶಾಸ್ತ್ರಪ್ರಸಿದ್ಧವಾದ ಎಲ್ಲಾ ಸ್ನಾನಗಳನ್ನೂ ತಿಳಿಸುತ್ತದೆ. ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ಸ್ನಾನವನ್ನು ಮಾಡಬೇಕೆಂದು ಶಾಸ್ತ್ರವು ತಿಳಿಸುತ್ತದೆಯೋ, ಆಯಾ ಸಂದರ್ಭದಲ್ಲಿ ಅದಕ್ಕೆ ಯೋಗ್ಯವಾದ ಎಲ್ಲಾ ಸ್ನಾನಗಳನ್ನೂ ಮಾಡಬೇಕೆಂದು ಈ ಪದದಿಂದ ಶ್ರೀಮಧ್ವಾಚಾರ್ಯರು ತಿಳಿಸಿರುತ್ತಾರೆ. ಸ್ನಾನದಲ್ಲಿರುವ ಅವಾಂತರಭೇದವು ಕೆಳಗಿನ ಪ್ರಮಾಣದಿಂದ ಸ್ಪಷ್ಟವಾಗುತ್ತದೆ.

ಸ್ನಾನಂ ತು ದ್ವಿವಿಧಂ ಪ್ರೋಕ್ತಂ ಗೌಣಮುಖ್ಯಪ್ರಭೇದತಃ ।
ತಯೋಸ್ತು ವಾರುಣಂ ಮುಖ್ಯಂ ತತ್ಪುನಃ ಷಡ್ವಿಧಂ ಭವೇತ್ ॥

ನಿತ್ಯಂ ನೈಮಿತ್ತಿಕಂ ಕಾಮ್ಯಂ ಕ್ರಿಯಾಂಗಂ ಕಾಲಕರ್ಮಣಾಮ್।
ಕ್ರಿಯಾಸ್ನಾನಂ ತಥಾ ಪುಷ್ಯಂ ಷೋಡಾಸ್ನಾನಂ ಪ್ರಕೀರ್ತಿತಮ್ ॥
(ಶಂಖವಚನ)

ಸ್ನಾನವು ಗೌಣಸ್ನಾನ ಮುಖ್ಯಸ್ನಾನ ಎಂದು ಎರಡು ವಿಧವಾಗಿದೆ. ಇವುಗಳಲ್ಲಿ ವಾರುಣಸ್ನಾನ ಅಂದರೆ ನೀರನಲ್ಲಿ ಮುಳುಗಿ ಮಾಡುವ ಸ್ನಾನವು ಮುಖ್ಯಸ್ನಾನವೆನಿಸುತ್ತದೆ. ಈ ವಾರುಣಸ್ನಾನವು (1) ನಿತ್ಯಸ್ನಾನ (2)ನೈಮಿತ್ತಿಕಸ್ನಾನ (3) ಕಾಮ್ಯಸ್ನಾನ (4) ಕಾಲಾಂಗಸ್ನಾನ (5) ಕರ್ಮಾಂಗಸ್ನಾನ (6) ಕ್ರಿಯಾಸ್ನಾನ ಎಂದು ಆರು ವಿಧವಾಗಿದೆ. ಈ ಆರು ವಿಧವಾದ ಸ್ನಾನಗಳಲ್ಲಿ ಪ್ರಾತಃ ಸ್ನಾನವು ನಿತ್ಯವಾದುದರಿಂದ ಅದನ್ನು ಶ್ರೀಮಧ್ವಾಚಾರ್ಯರು ವಿಸ್ತಾರವಾಗಿ ಹೇಳಿರುವರು. ಈ ವಾರುಣಸ್ನಾನ ವನ್ನು ಮಾಡಲು ಅಶಕ್ತರಾದವರು ಗೌಣಸ್ನಾನಗಳನ್ನು ಮಾಡಬೇಕು. ಈ ಗೌಣಸ್ನಾನಗಳೆ ಕೆಳಗಿನ ಪ್ರಮಾಣಗಳು ತಿಳಿಸುತ್ತವೆ.

**190. ನಾವು ನದಿಯಲ್ಲಿ ಸ್ನಾನ ಮಾಡುವಾಗ ಮೃತ್ತಿಕಾಸ್ನಾನಕ್ಕೆ ಬೇಕಾದ ಮೃತ್ತಿಕೆಯನ್ನು ಎಲ್ಲಿಂದ ತೆಗೆದುಕೊಳ್ಳಬೇಕು? ಎಲ್ಲಿಂದ ತೆಗೆದು ಕೊಳ್ಳ ಬಾರದು?**

ಉ. **(ಕೃ ಸ್ಮೃ. ಆ.ಪ್ರ. ಪು. ೩೪)**

**"ದಕ್ಷಃ - ಮೃತ್ತಿಕಾಃ ಸಪ್ತ ನ ಗ್ರಾಹ್ಯಾಃ ವಲ್ಮೀಕೇ ಮೂಷಿಕಸ್ಥಲೇ**
**ಅಂತರ್ಜಲೇಷು ಸ್ಥಾನೇ ಚ ವೃಕ್ಷಮೂಲೇ ಸುರಾಲಯೇ ॥**
**ಪರಸ್ನಾನಾವಶಿಷ್ಟೇ ಚ ಶ್ರೇಯಃಕಾಮ್ಯೈಃ ಸದಾ ಬುಧೈಃ ॥ಇತಿ॥**
**ಶೌನಕಃ - ನದೀತೀರೇ ಶುಚೌ ದೇಶೇ ಆಹರೇತ್ ಮೃತ್ತಿಕಾಂಕುಶಾನ್ ॥**

ಎಂದು ಹೇಳಿದಂತೆ ಮೃತ್ತಿಕಾಸ್ನಾನಕ್ಕೆ ಬೇಕಾದ ಮೃತ್ತಿಕೆಯನ್ನು ಹುತ್ತ-ಇಲಿ ಇರುವ ಸ್ಥಳ-ಅಂತರ್ಜಲ - ವಸತಿಸ್ಥಳ-ಗಿಡದಬುಡ-ಗುಡಿ ಮತ್ತು ಇನ್ನೊಬ್ಬರು ಸ್ನಾನಮಾಡಿ ಮಿಕ್ಕಿದ್ದು ಇವುಗಳಿಂದ ತೆಗೆದುಕೊಳ್ಳಬಾರದು. ಆದರೆ ನದೀತೀರದಲ್ಲಿ ಶುದ್ಧವಾದ ಸ್ಥಳದಿಂದ ಮೃತ್ತಿಕೆಯನ್ನು ತೆಗೆದುಕೊಳ್ಳಬೇಕು.

**191. ಪ್ರತಿನಿತ್ಯ ಸಂಧ್ಯಾವಂದನೆಯು ಸಂದರ್ಭದಲ್ಲಿ ಅರ್ಘ್ಯವನ್ನು ಕೊಡುವುದರಿಂದ ಮಂದೇಹ ರಾಕ್ಷಸರು ಸಾಯುತ್ತಾರೆ ಎಂದು ಹಿರಿಯರು**

**ಹೇಳುತ್ತಾರೆ. ಇದರಿಂದ ನಮಗೆ ಜೀವಹತ್ಯಾ ದೋಷವು ಬರುವುದಿಲ್ಲವೆ?**

ಉ. **(ಸ್ಮೃತಿಮುಕ್ತಾವಳಿ ಕಾ.ನಿ.ಪ್ರ. ಸಂಸ್ಕೃತ ಮೂಲ ಪುಟ ೭೯-೮೦ ಮತ್ತು ಆಹ್ನಿಕಕೌಸ್ತುಭ ಪುಟ೨೨)**

**"ತರ್ಹಿ ಸಂಧ್ಯಾಯಾಂ ದೀಕ್ಷಿತಸ್ಯ ಜೀವಹತ್ಯಾದೋಷಃ ಸ್ಯಾದಿತಿ ಚೇನ್ನ। ತನ್ನಿವೃತ್ಯರ್ಥಮೇವ ಪ್ರದಕ್ಷಿಣಕರಣಾತ್। ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ ಪಾಪ್ಮಾನಮವಧೂನ್ವಂತಿ । ಉದ್ಯಂತಮಸ್ತಂ ಯಂತಮಾದಿತ್ಯಮ ಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ಸಕಲಂ ಭದ್ರಮಶ್ನುತೇ ॥ಇತಿ॥**

ಎಂಬೀ ಮುಂತಾದ ಪ್ರಮಾಣಗಳು ಹೇಳಿದಂತೆ ನಾವು ಪ್ರತಿನಿತ್ಯ ಸಂಧ್ಯಾವಂದನೆಯ ಸಂದರ್ಭದಲ್ಲಿ ಅರ್ಘ್ಯವನ್ನು ಕೊಡುವುದರಿಂದ ಮಂದೇಹ ರಾಕ್ಷಸರು ಸಾಯುತ್ತಾರೆ. ಆ ದೇಹನಿವೃತ್ತಿ ಗೋಸ್ಕರವಾಗಿ ನಾವು ಅರ್ಘ್ಯವನ್ನು ಕೊಟ್ಟ ಮೇಲೆ ನಮ್ಮ ಕೈಯಲ್ಲಿ (ಬಲಗೈಯಲ್ಲಿ) ನೀರನ್ನು ಹಾಕಿ ಮಂತ್ರಪೂರ್ವಕವಾಗಿ ಆತ್ಮಪ್ರದಕ್ಷಿಣೆಯನ್ನು ಮಾಡುತ್ತೇವೆ. ಇದರಿಂದ ದೋಷ ನಿವೃತ್ತಿ ಯಾಗುತ್ತದೆಂದು ವೇದವೇ ಹೇಳುತ್ತದೆ.

**192.ನಾವು ಮಾಡುವ ಜಪದಲ್ಲಿ ಸಿದ್ಧಿ ಆಗಬೇಕಾದರೆ ಏನಿರಬೇಕು?**

ಉ. **(ಸ್ಮೃತ್ಯರ್ಥಸಾಗರ)**

**"ಮನಃಪ್ರಹರ್ಷಣಂ ಶೌಚಂ ಮೌನಂ ಮಂತ್ರಾರ್ಥಚಿಂತನಮ್।**
**ಅವ್ಯಗ್ರತ್ವಮನಾಲಸ್ಯಂ ಜಪಸಂಪತ್ತಿಹೇತವಃ॥**

ಎಂದು ಹೇಳಿದಂತೆ ಮನಸ್ಸಿನ ಪ್ರಸನ್ನತೆ-ಶೌಚ-ಮೌನ-ಮಂತ್ರಾರ್ಥಚಿಂತನ/ನೆ- ಆಕುಲತೆ ಇಲ್ಲದಿರುವಿಕೆ ಹಾಗೂ ಆಲಸ್ಯ ಇಲ್ಲದಿರುವಿಗೆ ಈ ಆರು ಜಪದಲ್ಲಿ ಸಿದ್ಧಿಯನ್ನು ಗಳಿಸಿಕೊಡುವಂತಹುಗಳು. ಆದ್ದರಿಂದ ಜಪದಲ್ಲಿ ಸಿದ್ಧಿಯಾಗಬೇಕಾದರೆ ಈ ಆರೂ ಇರಬೇಕು.

**193.ಜಪ ಎಂದರೇನು?**

ಉ. **(ಆಗ್ನೇಯ ಪುರಾಣ)**

**ಜಕಾರೋ ಜನ್ಮವಿಚ್ಛೇದಃ ಪಕಾರಃ ಪಾಪನಾಶಕಃ।**
**ತಸ್ಮಾಜ್ಜಪ ಇತಿ ಪ್ರೋಕ್ತಃ ಜನ್ಮಪಾಪವಿನಾಶಕಃ॥**

ಎಂದು ಹೇಳಿದಂತೆ, ಜ ಎಂದರೆ ಜನನ ಮರಣಾದಿ ಸಂಸಾರದಿಂದ ಬಿಡುಗಡೆ ಮಾಡಿಸುವುದು ಎಂದರ್ಥ ಪ ಎಂದರೆ ಪಾಪವನ್ನು ಪರಿಹರಿಸುವುದು

ಎಂದರ್ಥ. ಹೀಗೆ ಜನನ ಮರಣಾದಿಗಳನ್ನು ತಪ್ಪಿಸಿ ಪಾಪ ಪರಿಹಾರ ಮಾಡುವ ಭಗವಂತನ ಧ್ಯಾನಕ್ಕೆ ಜಪ ಎಂದು ಕರೆಯುತ್ತಾರೆ.

**194. ಕಲ್ಲಿನ ಮೇಲೆ ತೆಯ್ದ ಗಂಧವನ್ನು ಹಚ್ಚಿಕೊಳ್ಳಬಹುದೆ?**

ಉ. **(ಚಾಣಕ್ಯನೀತಿ ಅಧ್ಯಾಯ ೧೭, ಶ್ಲೋ ೧೨)**

**" ನಾಪಿತಸ್ಯ ಗೃಹೇ ಕ್ಷೌರಂ ಪಾಷಾಣೇ ಗಂಧಲೇಪನಮ್ ।**
**ಆತ್ಮರೂಪಂ ಜಲೇ ಪಶ್ಯನ್ ಶಕ್ರೋಽಪಿ ಚ್ಯವತೇ ಶ್ರಿಯಃ ॥**

ಎಂದು ಹೇಳಿದಂತೆ ಹಜಾಮನ ಮನೆಯಲ್ಲಿಯೇ ಕ್ಷೌರವನ್ನು ಮಾಡಿಸಿಕೊಳ್ಳುವುದು ಕಲ್ಲಿನ ಮೇಲೆ ತೇಯ್ದ ಗಂಧವನ್ನು ಹಚ್ಚಿಕೊಳ್ಳುವುದು - ಮತ್ತು ತನ್ನ ಸ್ವರೂಪವನ್ನು ನೀರಿನಲ್ಲಿ ನೋಡಿಕೊಳ್ಳುವುದು ಹೀಗೆ ಮಾಡಿದಲ್ಲಿ ಅವನು ಸಾಕ್ಷಾತ್ ಇಂದ್ರನಾದರೂ ಐಶ್ವರ್ಯಹೀನ ನಾಗುತ್ತಾನೆ. ಆದ್ದರಿಂದ ಕಲ್ಲಿನ ಮೇಲೆ ಗಂಧವನ್ನು ತೇಯಬಾರದು. ಅದಕ್ಕಾಗಿ ವಿಹಿತವಾಗಿರುವ ಸಾಣೆಕಲ್ಲಿನ ಮೇಲೆ ತೇಯಬೇಕು.

**195. ತಲೆಯ ಮೇಲೆ ಎಣ್ಣೆ ಯನ್ನು ಹಚ್ಚಿ ಕೊಂಡಿದ್ದಾಗ ಹಲ್ಲನ್ನು ಉಜ್ಜಬಹುದೇ?**

ಉ. **(ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀ ಕೃತ ಪುಟ ೬)**

**" ನ ಕುರ್ಯಾತ್ ದಂತಕಾಷ್ಠಂ ಚ ತೈಲೇ ಶಿರಸಿ ಚ ಸ್ಥಿತೇ "।**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ತಲೆಯ ಮೇಲೆ ಎಣ್ಣೆಯನ್ನು ಹಚ್ಚಿ ಕೊಂಡಾಗ ಹಲ್ಲನ್ನು ಉಜ್ಜಬಾರದು.

**196. ಯಾವ ದಿಕ್ಕಿಗೆ ಅಭಿಮುಖವಾಗಿ ಹಲ್ಲನ್ನು ಉಜ್ಜಬೇಕು?**

ಉ. **( ಸದಾಚಾರಸ್ಮೃತಿ ವ್ಯಾಖ್ಯಾ ಆಹ್ನಿಕ ಕೌಸ್ತುಭ - ವಂಶಪಲ್ಲೀ ಕೃತ ಪುಟ ೬)**

**ಸ್ಮೃತಿ : -**

**ಪ್ರಾಙ್ಮುಖಸ್ಯ ಧೃತಿಃ ಸೌಖ್ಯಂ ಶರೀರಾರೋಗ್ಯಮೇವ ಚ ।**
**ದಕ್ಷಿಣೇನ ತಥಾ ಕಷ್ಟಂ ಪಶ್ಚಿಮೇನ ಪರಾಜಯಃ ॥**
**ಉತ್ತರೇಣ ಗವಾಂ ನಾಶಃ ಸ್ತ್ರೀಣಾಂ ಪರಿಜನಸ್ಯ ಚ ।**
**ಪೂರ್ವೋತ್ತರೇ ತು ದಿಗ್ಭಾಗೇ ಸರ್ವಾನ್ಕಾಮಾನವಾಪ್ನುಯಾತ್ ॥ ಇತಿ ॥**

ಉ. ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪೂರ್ವದಿಕ್ಕಿಗೆ ಅಭಿಮುಖವಾಗಿ ಹಲ್ಲನ್ನು ಉಜ್ಜಿದರೆ ಧೈರ್ಯಸುಖ ಮತ್ತು ಶರೀರಾರೋಗ್ಯ ಇವುಗಳು ಉಂಟಾಗುತ್ತವೆ. ದಕ್ಷಿಣ ದಿಕ್ಕಿಗೆ ಅಭಿಮುಖವಾಗಿ ಹಲ್ಲನ್ನು

ಉಜ್ಜಿದರೆ ಕಷ್ಟವು ಪ್ರಾಪ್ತವಾಗುತ್ತದೆ. ಪಶ್ಚಿಮ ದಿಕ್ಕಿಗೆ ಅಭಿಮುಖವಾಗಿ ಹಲ್ಲನ್ನು ಉಜ್ಜಿದರೆ ಸೋಲು ಉಂಟಾಗುತ್ತದೆ. ಉತ್ತರ ದಿಕ್ಕಿಗೆ ಅಭಿಮುಖವಾಗಿ ಹಲ್ಲನ್ನು ಉಜ್ಜಿದರೆ ಗೋವುಗಳ - ಸ್ತ್ರೀಯರ ಹಲ್ಲನ್ನು ಸೇವಕರುಗಳ ನಾಶವಾಗುತ್ತದೆ. ಈಶಾನ್ಯ ದಿಕ್ಕಿಗೆ ಅಭಿಮುಖವಾಗಿ ಹಲ್ಲನ್ನು ಉಜ್ಜಿದರೆ ಸರ್ವ‌ಇಷ್ಟಾರ್ಥವನ್ನು ಹೊಂದುತ್ತಾರೆ. ಆದಕಾರಣ ಈಶಾನ್ಯ ದಿಕ್ಕಿಗೆ ಅಭಿಮುಖವಾಗಿ ಹಲ್ಲನ್ನು ಉಜ್ಜಬೇಕು.

**197. ನಾವು ಪ್ರತನಿತ್ಯ ಭೋಜನಕ್ಕೆ ಕುಳಿತಾಗ ಎಲೆಯ ಸುತ್ತಲೂ ನೀರಿನಿಂದ ಪರಿಷೇಚನವನ್ನು ಮಾಡುತ್ತೇವೆ. ಇದರ ಹಿನ್ನೆಲೆ ಏನು?**

ಉ. ನಮ್ಮ ಸಂಸ್ಕೃತಿಯಲ್ಲಿ ಭೋಜನವನ್ನು ಪ್ರಾಣಿಗಳ ಶರೀರದಲ್ಲಿ ವೈಶ್ವಾನರ ಎಂಬ ಹೆಸರಿನಿಂದ ನೆಲೆಸಿರುವ ಭಗವಂತನ ಯಜ್ಞವನ್ನಾಗಿ ಪರಿಗಣಿಸ ಲಾಗಿದೆ. ಪ್ರಾಣಿಗಳು ಭೋಗಿಸುವಾಗ ಭಗವಂತನು ಭೋಕ್ತಾರನಾಗಿಯೂ, ಭೋಜ್ಯನಾಗಿಯೂ ಪಾಲ್ಗೊಂಡಿರುವನು, ಭೋಕ್ತೃವಿನಲ್ಲಿ ಪ್ರದ್ಯುಮ್ನ ಹಾಗೂ ಸಂಕರ್ಷಣರೂಪದಿಂದಲೂ, ಭೋಜ್ಯಪದಾರ್ಥಗಳಲ್ಲಿ ನಾರಾಯಣ ಹಾಗೂ ಅನಿರುದ್ಧರೂಪದಿಂದಲೂ ಇರುವ ಭಗವಂತನು ಭೋಕ್ತೃ ಮತ್ತು ಭೋಜ್ಯಗಳು ತಮ್ಮ ತಮ್ಮ ಪಾತ್ರವನ್ನು ನಿರ್ವಹಿಸುವಂತೆ ನಿಯಂತ್ರಿ ಸುತ್ತಿರುವನು. ಆಕಾಶ ನಿಯಾಮಕನಾದ ವಾಸುದೇವನು ಉದರದೊಳಗೆ ಅವಕಾಶ ದೊರಕುವಂತೆ ಅನುಗ್ರಹಿಸುತ್ತಿರುತ್ತಾನೆ.

ಭೋಜನವನ್ನು ಮಾಡುವಾಗ ಈ ಅನುಸಂಧಾನವನ್ನು ತಂದುಕೊಂಡರೆ ಭೋಜನವು ಯಜ್ಞದ ಮೌಲ್ಯವನ್ನು ಪಡೆಯುತ್ತದೆ. ಇಂತಹ ಅನುಸಂಧಾನವನ್ನು ತಂದುಕೊಳ್ಳುವುದಕ್ಕಾಗಿಯೇ ಭೋಜನಕ್ಕಿಂತ ಮೊದಲು ಸಂಸ್ಕಾರ ಒಂದನ್ನು ನಮ್ಮ ಸಂಸ್ಕೃತಿಯಲ್ಲಿ ವಿಧಿಸಲಾಗಿದೆ.

ಓಂಭೂರ್ಭುವಃಸ್ವಃ ಎಂದು ಪ್ರಣವ ಸಹಿತ ವ್ಯಾಹೃತಿಯನ್ನು ಪಠಿಸುತ್ತಾ ಆಹಾರ ಪದಾರ್ಥದ ಮೇಲೆ ಪವಿತ್ರವಾದ ನೀರನ್ನು ಚಿಮುಕಿಸುವುದರ ಮೂಲಕ ಆ ಭೋಜ್ಯ-ಪದಾರ್ಥದಲ್ಲಿ ನಾರಾಯಣ ಎನಿಸುವ ಭಗವದ್ರೂಪವನ್ನು ಆವಾಹಿಸುವೆವು. ಸತ್ಯ ಎನಿಸಿರುವ ನಾರಾಯಣ ರೂಪವನ್ನೇ ಋತ ಎನಿಸುವ ಅನಿರುದ್ಧ ರೂಪದಿಂದ ಸುತ್ತುವರಿಸುತ್ತೇವೆ. ಸತ್ಯ ಎನಿಸುವ ನಿನ್ನನ್ನು ಋತ ಎನಿಸುವ ನಿನ್ನ ಮತ್ತೊಂದು ರೂಪದಿಂದ

ಸುತ್ತುವರಿಸುತ್ತಿದ್ದೇನೆ. ಸತ್ಯಂ ತ್ವಾ ಋತೇನ ಪರಿಷಿಂಚಾಮಿ ಎನ್ನುತ್ತ ಈ ಅನುಸಂಧಾನದ ಘೋಷಣೆಗಾಗಿ ಆಹಾರ ಪದಾರ್ಥದ ಸುತ್ತಲೂ ನೀರಿನ ಬಿಂದುಗಳನ್ನು ಸುರಿಸುವೆವು. ರಾತ್ರಿ ಹೊತ್ತು ಋತು ಎನಿಸುವ ಭಗವದ್ರೂಪ ಆಹಾರ ಪದಾರ್ಥದಲ್ಲಿದ್ದು ಸತ್ಯ ರೂಪವು ಸುತ್ತಲಿರುವುದರಿಂದ "ಋತಂ ತ್ವಾ ಸತ್ಯೇನ ಪರಿಷಿಂಚಾಮಿ" ಎನ್ನುತ್ತ ನೀರಿನಿಂದ ಸುತ್ತು ಕಟ್ಟುವೆವು. ಅಂತೂ ನಾರಾಯಣ ಮತ್ತು ಅನಿರುದ್ಧ ಭಗವದ್ರೂಪಗಳು ಸತ್ಯ ಹಾಗೂ ಋತ ಹೆಸರುಗಳಿಂದ ಕ್ರಮವಾಗ ಭೋಜ್ಯ ಪದಾರ್ಥಗಳಲ್ಲಿದ್ದು ತರ್ಪಕವಾಗು ವಂತೆಯು ಪದಾರ್ಥಗಳ ಸುತ್ತಲೂ ಕಾವಲಿದ್ದು ದುಷ್ಟ ಶಕ್ತಿಗಳ ಆಕ್ರಮಣ ದಿಂದ ಅಪವಿತ್ರ ಗಳಾಗದಂತೆಯೂ ನೋಡಿಕೊಳ್ಳುವುದರ ಮೂಲಕ ಅನುಗ್ರಹಿಸುವುವು. ಹೀಗೆ ಭೋಜ್ಯ ಪದಾರ್ಥಗಳಲ್ಲಿದ್ದು ಅನುಗ್ರಹಿಸುವ ಭಗವಂತನೇ ಸಂಕರ್ಷಣ ಹಾಗೂ ಪ್ರದ್ಯುಮ್ನರೂಪಗಳಿಂದ ಭೋಕ್ತೃವಿನಲ್ಲೂ ಇರುವನೆಂಬ ಅನುಸಂಧಾನಕ್ಕಾಗಿಯೇ ಪ್ರಾಣಿಗಳ ಹೃದಯಗುಹೆಯಲ್ಲಿ ಮುಖ್ಯವಾಗಿ ಸಂಚರಿಸುವವನು ಹಾಗೂ ಭೋಗಿಸುವವನು. ನೀನೇ ಯಜ್ಞ ಭೋಕ್ತೃ ಪರಮ-ಪುರುಷ ಆಗಿರುವಿ ಎಂಬ ಅರ್ಥದ "ಅಂತಶ್ಚರತಿ ಭೂತೇಷು" ಇತ್ಯಾದಿಯಾಗಿ ಮಂತ್ರವನ್ನು ಪಠಿಸುತ್ತಾ ಆಹಾರ ಪದಾರ್ಥದಲ್ಲಿ ಆವಾಹಿಸಿದ ನಾರಾಯಣ ಅನಿರುದ್ಧ ಭಗವದ್ರೂಪಗಳ ಎದುರು ಪ್ರಾರ್ಥಿಸುವೆವು. ಗಾಯತ್ರಿಯ ಮೂಲಕ ಪ್ರಾರ್ಥಿಸುವ ಪದ್ಧತಿಯೂ ಇದೆ.

ಮುಂದೆ ಶುದ್ಧ ಜಲವನ್ನು ಅಂಗೈಯಲ್ಲಿ ಹಿಡಿದುಕೊಂಡು ಅದರ ಶುದ್ಧಿ ಯನ್ನು ಎತ್ತಿ ಸಾರುವುದಕ್ಕಾಗಿಯೇ ಎಂಬಂತೆ ಅಮೃತ ಎಂಬುದಾಗಿ ಸಂಬೋಧಿಸಿ, ನೀನು ಮುಂದೆ ಆಹುತಿಯಾಗಿ ಸ್ವೀಕರಿಸುವ ಆಹಾರ ಪದಾರ್ಥಗಳ ಕೆಳಭಾಗದಲ್ಲಿ ಹಾಸುವ ಬಟ್ಟೆಯಾಗು ಉಪಸ್ತರಣಮಸಿ ಎಂದು ಪ್ರಾರ್ಥಿಸಿಕೊಳ್ಳುತ್ತಾ ನೀರನ್ನು ತೆಗೆದುಕೊಳ್ಳುವೆವು. ಉಂಡ ಆಹಾರವನ್ನು ಪಚನ ಮಾಡುವ ವೈಶ್ವಾನರ ಭಗವಂತನಿಗೆ ಸಹಕರಿಸಿ, ಸೇವೆ ಸಲ್ಲಿಸುವ ವಾಸುದೇವನ ಪ್ರಾಣಾದಿರೂಪಗಳಿಗಾಗಿ ಐದು ಆಹುತಿಗಳನ್ನು ತೆಗೆದುಕೊಂಡು ಮುಂದೆ ತುತ್ತು ತುತ್ತಿಗೆ ಗೋವಿಂದನನ್ನು ನೆನೆಯುತ್ತಾ ಭೋಜನ ಯಜ್ಞವನ್ನು ನೆರವೇರಿಸುವೆವು. ಕೊನೆಯಲ್ಲಿ ನೀರನ್ನು ಅಂಗೈಯಲ್ಲಿ ಹಿಡಿದುಕೊಂಡು ಅಮೃತ ಎಂದೇ ಸಂಬೋಧಿಸಿ, ಉಂಡ ಆಹಾರಕ್ಕೆ ಮುಚ್ಚಳ

ಆಗುವಂತೆ ಪ್ರಾರ್ಥಿಸುತ್ತೇವೆ - ಪಿಧಾನಮಸಿ ಎಂಬುದಾಗಿ.

ಹೀಗೆ ಮೇಲ್ನೋಟಕ್ಕೆ ಭೋಗವೆನಿಸಿರುವ ಭೋಜನಕ್ಕೂ ಯಜ್ಞದ ಮಟ್ಟವನ್ನು ತಂದುಕೊಡಬಲ್ಲ ಈ ಸಂಸ್ಕಾರವನ್ನು ಯಾವುದೋ ಗೌಣವಾದ ಬಾಹ್ಯ ಕ್ರಿಯೆಯೊಂದಕ್ಕಷ್ಟೇ ಪ್ರಾಶಸ್ತ್ಯ ಕೊಟ್ಟು ಸುತ್ತು ಕಟ್ಟುವುದು ಎಂದೇ ವ್ಯವಹರಿಸುತ್ತಾ ಎಷ್ಟು ಹಗುರವಾಗಿಸಿದ್ದೇವೆ. ಇದರ ಉದ್ದೇಶವೇನು ಎಂದು ವಿಚಾರಿಸುವ ಜಿಜ್ಞಾಸುಗಳಿಗೆ ಇರುವೆ ಮೊದಲಾದ ಕೀಟಗಳು ಆಹಾರ ಪದಾರ್ಥಗಳಲ್ಲಿ ಸೇರಿಕೊಳ್ಳದಂತೆ ಎಂದು ಕ್ಷುಲ್ಲಕ ಉದ್ದೇಶವನ್ನು ತೋರಿಸಿಕೊಟ್ಟು ಇದರ ಕುರಿತು ಇನ್ನಷ್ಟೂ ಅಶ್ರದ್ಧೆಯನ್ನು ಹುಟ್ಟಿಸುತ್ತಿರುತ್ತೇವೆ.

**198. ಮಲ-ಮೂತ್ರ ವಿಸರ್ಜನೆಯನ್ನು ಮಾಡುವಾಗ ಕೈಯಲ್ಲಿ ನೀರಿನ ಪಾತ್ರೆಯನ್ನು ಹಿಡಿದುಕೊಂಡಿರಬಹುದೆ?**

**ಉ. ಗೃಹೀತ್ವೋದಕಂಪಾತ್ರಂ ಯಃ ಕುರ್ಯಾನ್ಮೂತ್ರಪುರೀಷಕೇ ।**
**ತತ್ತೋಯಂ ಮೂತ್ರತುಲ್ಯಂ ಸ್ಯಾತ್ ದ್ವಿಜಃ ಚಾಂಧ್ರಾಯಣಂ ಚರೇತ್॥**
**ಇತಿ ವ್ಯಾಸಸ್ಮೃತಿಃ।**

**ಮಲ ಮೂತ್ರಮಾಡುವಾಗ ಕರದಲ್ಲಿ ಜಲವಿರೆ।**
**ಮಲಕೆ ಸಮಾನ ಅದು ಶುದ್ಧವಲ್ಲ ವಿಲಸಿತ ಕರ್ಮವಾಚರಿಸಿ ಹರಿಯ ನೆನೆಯೆ ಒಲಿವ ಪುರಂದರವಿಠಲ**

ಎಂದು ವ್ಯಾಸಸ್ಮೃತಿಯಲ್ಲಿ ಮತ್ತು ಪುರಂದರೋಪನಿಷತ್ತಿನಲ್ಲಿ ಹೇಳಿದಂತೆ, ಮಲ ಮೂತ್ರ ವಿಸರ್ಜನೆಯನ್ನು ಮಾಡುವಾಗ ನಮ್ಮ ಕೈಯಲ್ಲಿ ನೀರಿನ ಪಾತ್ರೆ ಇರಕೂಡದು. ಇದ್ದರೇ ಆ ನೀರು ಮೂತ್ರಕ್ಕೆ ಸಮಾನವಾಗುತ್ತದೆ. ಪುರಂದರೋಪನಿಷತ್ತಿನ ಪ್ರಕಾರ ಆ ನೀರು ಮಲಕ್ಕೆ ಸಮಾನವಾಗುತ್ತದೆ.

**199. ನಾವು ಆಚಮನವನ್ನು ಮಾಡುವಾಗ ನಮ್ಮ ಹಸ್ತ ಗೋವಿನ ಕಿವಿಯ ಆಕಾರದಲ್ಲಿರಬೇಕೆಂದು ಕೆಲವರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

**ಉ. ಗೋಕರ್ಣಾಕೃತಿಹಸ್ತೇನ ಫೇನಬುದ್ಬುದವರ್ಜಿತಮ್।**
**ಮಾಷಮಗ್ನಪ್ರಮಾಣಸ್ಯ ಹ್ಯನ್ಯೂನಾಧಿಕಂ ಚ ಯತ್ ॥**
**ಪುರಂದರೋಪನಿಷತ್**
**ಆಕಟ ಕಿವಿಗೆ ಎಣೆ ಅಂಗೈ ಹಳ್ಳವಾಗಿರಬೇಕು**

**ಉದ್ದು ಮುಣುಗುವಂತೆ ಇರಬೇಕು**
**ನೀರು ಸಾಕಾಗದೇ ಹೆಚ್ಚು ಕಡಿಮೆ ಸಾಕೆಂಬುಷ್ಟುಕುಡಿದರೆ**
**ಸಾಕಾರ ಪುರಂದರವಿಠ್ಠಲ ಮದ್ಯಸಮ ಮಾಡುವ ॥**

ಎಂದು ಈ ಮೇಲೆ ಕಾಣಿಸಿದ ಪ್ರಮಾಣಗಳಲ್ಲಿ ಹೇಳಿದಂತೆ ನಾವು ಆಚಮನವನ್ನು ಮಾಡುವಾಗ ನಮ್ಮ ಹಸ್ತ ಗೋವಿನ ಕಿವಿಯ ಆಕಾರದಂತೆ ಇರಬೇಕು. ಒಂದು ಉದ್ದಿನ ಕಾಳು ಮುಣುಗುವಷ್ಟು ಪ್ರಮಾಣದ ನೀರಿನಿಂದ ಆಚಮನವನ್ನು ಮಾಡಬೇಕು. ಅದಕ್ಕೆಂತಲೂ ಹೆಚ್ಚು ಕಡಿಮೆ ನೀರಿನಿಂದ ಆಚಮನವನ್ನು ಮಾಡಬಾರದು. ಹಾಗೆ ಮಾಡಿದರೆ ಅದು ಮದ್ಯಕ್ಕೆ ಸಮವಾಗುತ್ತದೆ.

**200. ಗೃಹಸ್ಥಾಶ್ರಮಿಯು ಎರಡು ಯಜ್ಞೋಪವೀತವನ್ನು ಧರಿಸಬೇಕೆಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಮೂರು ಎಂದು, ಇನ್ನು ಕೆಲವರು ನಾಲ್ಕು ಎಂದು ಹೇಳುತ್ತಾರೆ. ಇದರ ಬಗ್ಗೆ ಶಾಸ್ತ್ರ ಏನು ಹೇಳುತ್ತದೆಂಬುದನ್ನು ತಿಳಿಸುವಿರಾ?**

ಉ. **ಯಜ್ಞೋಪವಿತೇ ದ್ವೇ ಧಾರ್ಯೇ ಶ್ರೌತೇ ಸ್ಮಾರ್ತೇ ಚ ಕರ್ಮಣಿ ।**
**ವಸ್ತ್ರಾಭಾವೇ ತೃತೀಯಂ ತು ಗೃಹಸ್ಥೋ ಧಾರಯೇತ್ ದ್ವಿಜಃ ॥**
**ಚತುರ್ಥಂ ಉತ್ತರೀಯಾರ್ಥಂ ಆಯುಷ್ಕಾಮೋ ಬಹೂನ್ಯಪಿ ।**
**ಗೃಹಸ್ಥಸ್ಯ ತ್ರಿದಂ ಪ್ರೋಕ್ತಂ ಏಕಂ ವೈ ಬ್ರಹ್ಮಚಾರಿಣಃ ॥**

ಎಂದು ಸ್ಮೃತ್ಯರ್ಥಸಾಗರದಲ್ಲಿ ಹೇಳಿದ್ದಾರೆ. ಅದರ ಪ್ರಕಾರ ಶ್ರೌತ - ಸ್ಮಾರ್ತ ಕರ್ಮಾನುಷ್ಠಾನದ ಸಲುವಾಗಿ ಎರಡು ಯಜ್ಞೋಪವೀತಗಳನ್ನು ಧಾರಣ ಮಾಡಬೇಕು. ಮೈಮೇಲೆ ವಸ್ತ್ರವೇ ಇಲ್ಲದ ಸಂದರ್ಭವು ಒದಗುವುದಾದರೆ ಹೀಗಾಗಬಾರದು. ಅದಕ್ಕಾಗಿ ಒಂದು ಉತ್ತರೀಯದ ಬದಲಾಗಿ ಅಂದರೆ ಹೊದ್ದುಕೊಳ್ಳುವ ಪಂಚೆ ಸಲುವಾಗಿ ಮತ್ತೊಂದು, ಹೀಗೆ ನಾಲ್ಕು ಯಜ್ಞೋಪವೀತಗಳನ್ನು ಧರಿಸಬೇಕು. ಆಯುಷ್ಕಾಮನಾದವನು ಇನ್ನೂ ಹೆಚ್ಚು ಯಜ್ಞೋಪವೀತಗಳನ್ನು ಧರಿಸಬಹುದು. ಇದು ಗೃಹಸ್ಥಾಶ್ರಮಿಗೆ. ಬ್ರಹ್ಮಚಾರಿಯು ಒಂದೇ ಒಂದು ಯಜ್ಞೋಪವೀತವನ್ನಷ್ಟೇ ಧರಿಸಬೇಕು.

**201. ನಾವು ಪ್ರತಿನಿತ್ಯ ಭೋಜನ ಮಾಡುವಾಗ ತುಪ್ಪವನ್ನು ಎಲೆಯಲ್ಲಿ ಉಳಿಸಬಾರದೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಕಾರಣ ಮತ್ತು**

**ಪ್ರಮಾಣವೇನು?**

ಉ. ತುಪ್ಪಕ್ಕೆ ಲಕ್ಷ್ಮೀದೇವಿಯು ಅಭಿಮಾನಿದೇವತೆ. ತುಪ್ಪದಲ್ಲಿ ಲಕ್ಷ್ಮೀದೇವಿಯು ವಿಶೇಷವಾಗಿ ಸನ್ನಿಹಿತಳಾಗಿದ್ದಾಳೆ. ಶ್ರೀವಾದಿರಾಜರು ತಮ್ಮ "ಶ್ರೀಶಗುಣ ದರ್ಪಣ'' ದಲ್ಲಿ ಲಕ್ಷ್ಮೀದೇವಿಯನ್ನು "ಘೃತಪ್ರತೀಕಾ'' ಅಂದರೆ ತುಪ್ಪವೇ ಪ್ರತಿಮೆಯಾಗಿ ಉಳ್ಳವಳೆಂದೇ ಉಲ್ಲೇಖಿಸಿರುವರು. ತುಪ್ಪ ಲಕ್ಷ್ಮೀದೇವಿಯ ಪ್ರತೀಕವಾಗಿರುವುದರಿಂದಲೇ, ಭಗವಂತನು ತುಳಸೀದಳವನ್ನು ಹಾಕದ ನೈವೇದ್ಯವನ್ನು ಹೇಗೆ ಸ್ವೀಕರಿಸುವುದಿಲ್ಲವೋ ಹಾಗೆಯೇ ತುಪ್ಪದಿಂದ ಸಿಂಪಡಿಸದ (ಅಭಿಗಾರವನ್ನು ಮಾಡದ) ಭಕ್ಷ್ಯಭೋಜ್ಯಾದಿಗಳನ್ನೂ ಸ್ವೀಕರಿಸುವುದಿಲ್ಲ. ತುಪ್ಪವನ್ನು ಭಗವಂತನಿಗೆ ಸಮರ್ಪಿಸುವಾಗ ಅದಕ್ಕೆ ಮತ್ತೆ ತುಳಸೀದಳವನ್ನು ಹಾಕುವ ಅವಶ್ಯಕತೆ ಇಲ್ಲವೆಂದು ಹೇಳಲಾಗಿದೆ. ಭೋಜನದಲ್ಲಿ ಉಳಿದ ಪದಾರ್ಥಗಳ ಶೇಷವನ್ನು ಉಳಿಸಬೇಕಾದರೂ ತಪ್ಪವನ್ನು ಎಂಜಲೆಲೆಯಲ್ಲಿ ಉಳಿಸಿ ಲಕ್ಷ್ಮೀದೇವಿಗೆ ಅವಮಾನಿಸಬಾರದೆಂದು "ನಿಃಶೇಷಂ ಘೃತಪಾಯಸಂ'' ಎಂಬೀ ಮುಂತಾದ ಪ್ರಮಾಣಗಳಿಂದ ಪಾಯಸದಂತೆ ಲಕ್ಷ್ಮೀದೇವಿ ಸನ್ನಿಧಾನಕ್ಕೆ ಪಾತ್ರವಾದ ತುಪ್ಪವನ್ನು ನಿಃಶೇಷವಾಗಿ ಸ್ವೀಕರಿಸಬೇಕು. ಎಲೆಯಲ್ಲಿ ತುಪ್ಪದ ಶೇಷವನ್ನು ಉಳಿಸಿ ಊಟ ಮಾಡಬಾರದೆಂದು ಶಾಸ್ತ್ರದಲ್ಲಿ ಎಚ್ಚರಿಸಲಾಗಿದೆ.

**202. ಬೊಗಸೆಯಿಂದ ನೀರು ಕುಡಿಯಬಾರದೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **"ನ ಕುರ್ವಿತ ವೃಥಾ ಚೇಷ್ಟಾಂ ನ ವಾರ್ಯಂಜಲಿನಾ ಪಿಬೇತ್ ।"**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ (ಮನುಸ್ಮೃತಿ ಅಧ್ಯಾಯ4) ಬೊಗಸೆಯಿಂದ ನೀರನ್ನು ಕುಡಿಯಬಾರದು. ಮನುಸ್ಮೃತಿಯಲ್ಲಿ ಮನು ಋಷಿಗಳು ಬೊಗಸೆಯಿಂದ ನೀರು ಕುಡಿಯುವುದನ್ನು ನಿಷೇಧಿಸಿರುತ್ತಾರೆ.

**203. ಇನ್ನೊಬ್ಬರು ಧರಿಸಿದ ಚಪ್ಪಲಿಗಳನ್ನು ಮತ್ತು ಬಟ್ಟೆಗಳನ್ನು ಮತ್ತೊಬ್ಬರು ಧರಿಸಬಹುದೆ?**

ಉ. **"ಉಪಾನಹೌ ಚ ವಾಸಶ್ಚ ಧೃತಮನ್ಯೈರ್ನ ಧಾರಯೇತ್ ।"**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಒಬ್ಬರು ಧರಿಸಿದ ಚಪ್ಪಲಿಗಳನ್ನು ಬಟ್ಟೆಗಳನ್ನು ಮತ್ತೊಬ್ಬರು ಧರಿಸಬಾರದು (ಮನುಸ್ಮೃತಿ

**204. ಯಾವುದಾದರೊಂದು ಕರ್ಮದಲ್ಲಿ ದಿಕ್ಕನ್ನು ಹೇಳದಿದ್ದಲ್ಲಿ ಯಾವ ಅಭಿಮುಖವಾಗಿ ಕುಳಿತು ಕರ್ಮವನ್ನು ಅನುಷ್ಠಿಸಬೇಕು?**

ಉ. **"ಯತ್ರ ದಿಙ್ನಿಯಮೋ ನಾಸ್ತಿ ಜಪಹೋಮಾದಿಕರ್ಮಸು । ತಿಸ್ರಸ್ತತ್ರ ದಿಶಃ ಪ್ರೋಕ್ತಾಃ ಐಂದ್ರೀಸೋಮ್ಯಾಪರಾಜಿತಾ ॥"** ಎಂದು ಹೇಳಿದಂತೆ ಕೆಲವೊಂದು ಜಪ ಹೋಮಾದಿ ಕರ್ಮಗಳಲ್ಲಿ ಹೇಳದಿದ್ದಲ್ಲಿ ಪೂರ್ವ-ಉತ್ತರ ಮತ್ತು ಈಶಾನ್ಯ ಈ ಮೂರು ದಿಕ್ಕು ಯಾವುದಾದರೊಂದು ದಿಕ್ಕಿಗೆ ಅಭಿಮುಖವಾಗಿ ಕುಳಿತು ಕರ್ ಅನುಷ್ಠಿಸಬೇಕು. (ಛಾಂದೋಗ್ಯ ಪರಿಶಿಷ್ಟ)

**205. ಗಂಗಾದಿ ಪವಿತ್ರ ತೀರ್ಥಗಳಲ್ಲಿ ಮಾತಾಪಿತೃಗಳನ್ನು ಉ ಸ್ನಾನಮಾಡುವಾಗ ಹೇಗೆ ಸ್ನಾನ ಮಾಡಬೇಕು?**

ಉ. "ಪೈಠೀನಸಿಃ - ತೀರ್ಥೋದಕೇ ಪ್ರತಿಕೃತಿಂ ಕೃತ್ವಾ ಕುಶಮಯ ಮಜ್ಜಯೇತು ಸಮುದ್ದಿಶ್ಯ ಹ್ಯಷ್ಟಭಾಗಂ ಲಭೇತ ಸಃ॥(ಕೃ.ಸ್ಮ.ಆ.ಪ್ರ. ಎಂದು ಹೇಳಿದಂತೇ ಮಾತಾಪಿತೃಗಳ ಕುಶಮಯವಾದ ಪ್ರತಿಕೃ (ಮೂರ್ತಿಯನ್ನು) ಮಾಡಿ ಅದರ ಸಹಿತವಾಗಿ ಅವರಗಳನ ಮಾಡಿಕೊಂಡು ಸ್ನಾನ ಮಾಡಬೇಕು.

**206. ಹೊಸದಾದ ಬಾವಿ-ಕೆರೆ ಮುಂತಾದ ಜಲಾಶಯಗಳ ನೀರನ್ ದಿನಗಳ ತನಕ ಬಳಸಬಾರದು? (ಕೃ.ಸ್ಮ.ಕಾ.ನಿ.ಪ್ರ.ಪು-159-16**

ಉ. **"ದಶಾಹೇನೈವ ಶುದ್ಧ್ಯೇತ ಭೂಮಿಷ್ಠಂ ಚ ನವೋದಕಮ್।** ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಹೊಸದಾದ ಮುಂತಾದವುಗಳ ನೀರು ಹತ್ತು ದಿನಗಳ ನಂತರ ಶುದ್ಧವಾಗುತ್ತದೆ. ತನಕ ನೀರನ್ನು ಬಳಸಬಾರದು (ಕುಡಿಯಬಾರದು) ೧೦ ದಿನಗಳ ನೀರನ್ನು ಬಳಸಬಹುದು.(ಕುಡಿಯಬಹುದು)

**207. ಶಿಖಾ/ಶಿ ಇಲ್ಲದಲೇ ಯಾವ ಕರ್ಮವನ್ನು ಮಾಡಿದರ ವ್ಯರ್ಥವೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣ ಸ್ಮೃತ್ಯರ್ಥಸಾಗರೇ:-**

ಉ. **" ಸದಾ ಯಜ್ಞೋಪವೀತೀ ಸ್ಯಾತ್ತಥಾ ಬದ್ಧಶಿಖಃ ಸದಾ ।**
**ತದ್ದೀನೋ ಯದ್ವಿಜಃ ಕುರ್ಯಾತ್ತತ್ಸರ್ವಂ ನಿಷ್ಫಲಂ ಭವೇತ್ ॥**
ಎಂದು ಹೇಳಿದಂತೆ - ಬ್ರಾಹ್ಮಣನಾದವನ್ನು ಸರ್ವದಾ ಯಜ್ಞೋಪವೀತವನ್ನು ಧರಿಸಿಕೊಂಡಿರಬೇಕು. ಶಿಖಾ/ಖೆ ವನ್ನು/ ಯನ್ನು ಸದಾ ಕಟ್ಟಿಕೊಂಡಿರ ಬೇಕು. ಇವೆರಡು ಇಲ್ಲದೇ ಮಾಡುವ ಕರ್ಮವೆಲ್ಲ ನಿಷ್ಫಲವೆನಿಸುವುದು.

**208. ಎಲ್ಲೆಲ್ಲಿ ಎಷ್ಟೆಷ್ಟು ಆಚಾರ ಎಂಬುದರ ಬಗ್ಗೆ ಶಾಸ್ತ್ರ ಏನು ಹೇಳುತ್ತದೆ? ಎಂಬುದನ್ನು ದಯವಿಟ್ಟು ತಿಳಿಸುವಿರಾ?**

ಉ. **ಸ್ವಗ್ರಾಮೇ ಪೂರ್ಣಆಚಾರಶ್ಚಾನ್ಯಗ್ರಾಮೇ ತದರ್ಧಕಮ್ ।**
**ಪಟ್ಟಣೇ ಪಾದಮಾಚಾರಃ ಪಥಿ ಶೂದ್ರವದಾಚರೇತ್ ॥**
ಎಂಬ ಪ್ರಮಾಣದಲ್ಲಿ ಹೇಳಿದಂತೆ ತನ್ನ ಗ್ರಾಮದಲ್ಲಿರುವಾಗ ಆಚಾರಗಳನ್ನು ಪೂರ್ಣವಾಗಿ ಪಾಲಿಸಬೇಕು. ಇತರ ಗ್ರಾಮುಗಳಿಗೆ ಹೋದಾಗ ಅಲ್ಲಿ ಅನುಕೂಲತೇ ಇಲ್ಲದಿದ್ದಲ್ಲಿ ಅರ್ಧಪ್ರಮಾಣದಲ್ಲಾದರೂ ಆಚಾರಗಳನ್ನು ಪಾಲಿಸಬೇಕು. ಪಟ್ಟಣದಲ್ಲಿದ್ದಾಗ ಆಚಾರ ಪಾಲಿಸಲು ಅಷ್ಟೊಂದು ಅನುಕೂಲತೆಯಿಲ್ಲದಿದ್ದರೆ ಕಾಲು ಪ್ರಮಾಣದಲ್ಲಾದರೂ ಆಚಾರಗಳನ್ನು ಪಾಲಿಸಬೇಕು. ಪ್ರಯಾಣ ಮಾಡುವಾಗ ದಾರಿಯಲ್ಲಿ ಆಚಾರ ಪಾಲಿಸಲು ಏನೂ ಅನುಕುಲತೆ ಯಿಲ್ಲದಿದ್ದರೆ ಶೂದ್ರನಂತೆ ಆಚರಿಸಬೇಕು.

**209. ಮೈಮೇಲೆ ಪಂಚೆಯನ್ನು ಹೊದ್ದುಕೊಳ್ಳದೇ ಸಂಧ್ಯಾವಂದನೆ ಮುಂತಾದ ಕರ್ಮಗಳನ್ನು ಆಚರಿಸಬಾರದೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು? ಸ್ಮೃತರ್ಥಸಾಗರೇ:-**

ಉ. **ಉತ್ತರೀಯಂ ಸದಾ ಧಾರ್ಯಂ ತದ್ವಿನಾ ನಾಚರೇತ್ ಕ್ರಿಯಾಮ್ ।**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ - ಗೃಹಸ್ಥನು ಯಾವಾಗಲೂ ಉತ್ತರೀಯವನ್ನು ಧರಿಸಿಕೊಂಡಿರಬೇಕು. ಅದಿಲ್ಲದೇ ಅಂದರೆ ಮೈಮೇಲೆ ಪಂಚೆಯನ್ನು ಹೊದ್ದುಕೊಳ್ಳದಲೇ ಯಾವ ಕರ್ಮವನ್ನು ಆಚರಿಸಬಾರದು.

**210. ನೂಲಿನ ಪಂಚೆ-ರೆಷ್ಮೆ ಮಡಿ ಮುಂತಾದವುಗಳು ಮಡಿಯಲ್ಲಿ ಒಮ್ಮೆ ನೀರಿನಲ್ಲಿ ತೋಯಿಸಿ ಒಣಗಿಸಿದ ಮೇಲೆ ಎಷ್ಟು ದಿನಗಳತನಕ ಮಡಿಗೆ**

ಬರುತ್ತವೆ?

ಉ. (ಸ್ಮೃತಿ ಮಾಣಿಕ್ಯ ಸಂಗ್ರಹ -ಪುಟ35)

**ಕಾಲಭೇದೇನ ವಸ್ತ್ರಶುದ್ಧಿ:**

**ಕಾರ್ಪಾಸಂ ಏಕರಾತ್ರಂ ತು. ದಶರಾತ್ರಂ ತು ಪಟ್ಟಜಮ್ ।**

**ದಶಲೀ ಸಪ್ತರಾತ್ರಂ ತು ಅವಿಕಂ ತು ಸದಾ ಶುಚಿಃ ॥**

ಎಂಬ ಪ್ರಮಾಣದಲ್ಲಿ ಹೇಳಿದಂತೆ, ನೂಲಿನ ಬಟ್ಟೆಯು ಒಂದು ದಿನ, ರೇಷ್ಮೆ ವಸ್ತ್ರವು ಹತ್ತುದಿನ-ನಾರು ಮಡಿ ಏಳು ದಿನಗಳ ತನಕ ಶುದ್ಧವೆನಿಸುತ್ತವೆ, ಮತ್ತು ಮಡಿಗೆ ಬರುತ್ತವೆ. ಆದರೆ ಧಾವಳಿಯು ಯಾವಾಗಲೂ ಶುದ್ಧ. ಅಂದರೆ ನೂಲಿನ ಪಂಚೆ-ರೇಷ್ಮೆಮಡಿ-ನಾರು ಮಡಿ ಇವುಗಳನ್ನು ಮಡಿಯಲ್ಲಿ ಒಮ್ಮೆನೀರಿನಲ್ಲಿ ತೋಯಿಸಿ, ಒಣಗಿಸಿ ಅವುಗಳನ್ನ ಧಾರಣ ಮಾಡಿ ಮಡಿಯ ಕೆಲಸವನ್ನು ಅಂದರೆ ದೇವರ ಪೂಜೆ ಮುಂತಾದವುಗಳನ್ನು ಮುಗಿಸಿ, ತೀರ್ಥಾದಿಗಳನ್ನು ತೆಗೆದು ಕೊಳ್ಳದಲೆ ಮತ್ತು ಭೋಜನಾದಿಗಳನ್ನು ಮಾಡದಲೆ ತೀರ್ಥಾದಿಗಳನ್ನು ತೆಗೆದುಕೊಳ್ಳುವುದುಕ್ಕಿಂತ ಪೂರ್ವದಲ್ಲೇ ಇವುಗಳನ್ನು ಮಡಿಯಲ್ಲಿ ಕಕ್ಷಪಾಲ (ಕೃಷ್ಣಾಜಿನ ಚೀಲ) ದಲ್ಲಿ ಹಾಕಿ ಶುದ್ಧವಾದ ಸ್ಥಳದಲ್ಲಿಟ್ಟರೆ, ನೂಲಿನ ಪಂಚೆಯು ಒಂದು ದಿನದ ತನಕ-ರೇಷ್ಮೆ ಮಡಿ ಹತ್ತು ದಿನಗಳ ತನಕ - ನಾರಿನ ಮಾಡಿಯು ಏಳು ದಿನಗಳ ತನಕ ಶುದ್ಧವೆನಿಸಿ, ಮತ್ತೆ ಅವುಗಳನ್ನು ತೋಯಿಸದಲೆ=ಪುನಃ ನೀರಿನಲ್ಲಿ ಹಾಕದಲೆ ಮಡಿಯಲ್ಲಿ ಸ್ನಾನ ಮಾಡಿದ ಮೇಲೆ ಮಡಿಯಲ್ಲಿ ಅವುಗಳನ್ನು ಧಾರಣೆ ಮಾಡಿ ದೇವರ ಪೂಜೆ ಮುಂತಾದವುಗಳನ್ನು ಮಾಡಲು ಬರುತ್ತದೆ. ಆದರೆ ಈ ಕಾಲಾವಧಿಯು ಮುಗಿದ ಮೇಲೆ ಅವುಗಳನ್ನು ಮತ್ತೆ ಮಡಿಯಲ್ಲಿ ನೀರಿನಲ್ಲಿ ತೋಯಿಸಿ ಒಣಗಿಸಿದರೇನೇ ಅವುಗಳು ಮಡಿ ಕೆಲಸಕ್ಕೆ ಬರುತ್ತವೆ. ಇಲ್ಲದಿದ್ದರೆ ಬರುವುದಿಲ್ಲ. ಆದರೆ ಧಾವಳಿಯನ್ನು ನೀರಿನಲ್ಲಿ ತೋಯಿಸಬಾರದು. ಅದು ಸರ್ವದಾ ಶುದ್ಧವಾದದ್ದು. 'ಊರ್ಣಾ ವಾತೇನ ಶುದ್ಧ್ಯತಿ' ಎಂದು ಹೇಳಿದಂತೆ ಧಾವಳಿಯು ಗಾಳಿಯಿಂದಲೇ ಶುದ್ಧವಾಗುತ್ತದೆ(ಊರ್ಣಾ=ಉಣ್ಣೆ-ಉಣ್ಣೆಯಿಂದ ತಯಾರಿಸಿದ ಧಾವಳಿ, ಶುಚಿಃ = ಪವಿತ್ರವಾದದ್ದು = ಶುದ್ಧವಾದದ್ದು - ದೋಷವಿಲ್ಲದ್ದು, ಮೈಲಿಗೆ ಅಲ್ಲದ್ದು.)

**211. ಪ್ರಾತಃಕಾಲದಲ್ಲಿ ಮತ್ತು ಮಧ್ಯಾಹ್ನ ಸ್ನಾನವಾದ ಮೇಲೆ ವಸ್ತ್ರವನ್ನು ಯಾವಾಗ ಹಿಂಡಬೇಕು?**

ಉ. **(ಸ್ಮೃತಿಮುಕ್ತಾವಳಿ ಆಹ್ನಿಕ ಪ್ರಕರಣ ಪುಟ-46-47)**

**ಅಥ ವಸ್ತ್ರನಿಷ್ಪೀಡನಮ್ :- ತದುಕ್ತಂ ಚತುರ್ವಿಂಶತಿಮತೇ:-**
**ಸ್ನಾನಾದನಂತರಂ ತಾವತ್ ತಾರ್ಪಯೇತ್ಪಿತೃದೇವತಾಃ।**
**ಉತ್ತೀರ್ಯ ಪೀಡಯೇದ್ವಸ್ತ್ರಂ ಸಂಧ್ಯಾಕರ್ಮತತಃ ಪರಮ್॥**
**ಇತಿ ತರ್ಪಣಾತ್ ಪೂರ್ವಂ ವಸ್ತ್ರನಿಷ್ಪೀಡನೇ ದೋಷಮಾಹ ಯಾಜ್ಞವಲ್ಕ್ಯಃ**
**ನಿಷ್ಪೀಡಯತಿ ಯೋ ವಸ್ತ್ರಂ ಸ್ನಾನವಸ್ತ್ರಮತರ್ಕಿತಮ್।**
**ನಿರಾಶಾಃ ಪಿತರೋ ಯಾಂತಿ ಶಾಪಂ ದತ್ವಾ ಸುದಾರುಣಮ್।ಇತಿ।**
**ತಸ್ಮಾತ್ ಪ್ರಾತಃಸ್ನಾನಾಂಗತರ್ಪಣಾನಂತರಮೇವ ವಸ್ತ್ರನಿಷ್ಪೀಡನಮ್।**
**ಮಧ್ಯಾಹ್ನೇ ಬ್ರಹ್ಮಯಜ್ಞತರ್ಪಣಾನಂತರಮೇವ। ತದುಕ್ತಂ ಸಂಗ್ರಹೇ :-**
**ವಸ್ತ್ರನಿಷ್ಪೀಡನಂ ಕುರ್ಯಾತ್ ಪ್ರಾತಃ ಸ್ನಾನಾದನಂತರಮ್। ಮಧ್ಯಾಹ್ನೇ ತರ್ಪಣಾದೂರ್ಧ್ವಂ ಪಿತೃತೀರ್ಥೇನ ಪೀಡಯೇತ್ ಇತಿ।**

ಎಂದು ಹೇಳಿದಂತೆ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ, ಸ್ನಾನಾಂಗತರ್ಪಣ ವನ್ನು ಕೊಟ್ಟಮೇಲೆ ವಸ್ತ್ರವನ್ನು ಹಿಂಡಬೇಕು. ಮಧ್ಯಾಹ್ನ ಕಾಲದಲ್ಲಿ ಬ್ರಹ್ಮಯಜ್ಞತರ್ಪಣಾನಂತರದಲ್ಲಿ ವಸ್ತ್ರವನ್ನು ಹಿಂಡಬೇಕು. ತರ್ಪಣಕ್ಕಿಂತ ಪೂರ್ವದಲ್ಲಿ ವಸ್ತ್ರವನ್ನು ಹಿಂಡಿದರೆ, ಪಿತೃಗಳು ನಿರಾಶೆ ಗೊಂಡು ಶಾಪವನ್ನು ಕೊಟ್ಟು ಹೊರಟು ಹೋಗುತ್ತಾರೆ.

**212. ಉಟ್ಟುಕೊಳ್ಳುವ ವಸ್ತ್ರವನ್ನು ಮಾತ್ರ ಧಾರಣೆಮಾಡಿ, ಮೈಮೇಲೆ ಉತ್ತರೀಯವನ್ನು ಧಾರಣ ಮಾಡದಲೆ ಭೋಜನಾದಿಗಳನ್ನು ಮಾಡಬಾರ ದೆಂದು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **(ಸ್ಮೃತಿ ಮುಕ್ತಾವಳಿ ಆಹ್ನಿಕಪ್ರಕರಣ ಪುಟ-49)**

**ಗೋಭಿಲೋಽಪಿ:-**

ಏಕವಸ್ತ್ರೋ ನ ಭುಂಜೀತ ನ ಕುರ್ಯಾದ್ದೇವತಾರ್ಚನಮ್। ಇತ್ಯಾದಿ
ಅಂದರೆ ಒಂದೇ ವಸ್ತ್ರವನ್ನು ಧಾರಣಮಾಡಿ ಭೋಜನವನ್ನು ಮಾಡಬಾರದು ಮತ್ತು ದೇವತಾರ್ಚನೆಯನ್ನು ಮಾಡಬಾರದು.

**213. ಎಲ್ಲಾವರ್ಣದವರು ಒಂದೇ ಬಣ್ಣದ ವಸ್ತ್ರವನ್ನು ಧಾರಣ ಮಾಡವುದು ಶಾಸ್ತ್ರ ಸಮ್ಮತವೇ?**

**ಉ. (ಸ್ಮೃತಿ ಮುಕ್ತಾವಳಿ - ಆಹ್ನಿಕಪ್ರಕರಣ ಪುಟ-49)**
**ವರ್ಣಭೇದೇನ ವಸ್ತ್ರಭೇದಮಾಹ ಭೃಗುಃ:-**
**ಬ್ರಾಹ್ಮಣಸ್ಯ ಸಿತಂ ವಸ್ತ್ರಂ ನೃಪತೇಃ ರಕ್ತಮುಲ್ಬಣಮ್ ।**
**ಪೀತಂ ವೈಶ್ಯಸ್ಯ ಶೂದ್ರಸ್ಯ ನೀಲಂ ಮಲವದಿಷ್ಯತೇ ॥**
ಎಂದು ಭೃಗು ಋಷಿಗಳು ಹೇಳಿದಂತೆ, ಬ್ರಾಹ್ಮಣನು ಬಿಳಿ ಬಣ್ಣದ ಬಟ್ಟೆಯನ್ನು ಕ್ಷತ್ರಿಯನು ಉತ್ಕಟವಾದ ಕೆಂಪು ಬಣ್ಣದ ಬಟ್ಟೆಯನ್ನು - ವೈಶ್ಯನು ಹಳದಿ ಬಣ್ಣದ ಬಟ್ಟೆಯನ್ನು ಶೂದ್ರನು ಕಪ್ಪು ಬಣ್ಣದ ಬಟ್ಟೆಯನ್ನು ಧಾರಣ ಮಾಡಬೇಕು. ಆದ್ದರಿಂದ ಎಲ್ಲಾ ವರ್ಣದವರು ಒಂದೇ ಬಣ್ಣದ ವಸ್ತ್ರವನ್ನು ಧಾರಣಮಾಡುವುದು ಶಾಸ್ತ್ರಸಮ್ಮತವಲ್ಲ.

**214. ಯಜ್ಞೋಪವೀತವನ್ನು ಧಾರಣ ಮಾಡುವಾಗ ಹೇಳಬೇಕಾದ ಮಂತ್ರವು ನಮ್ಮ ನಮ್ಮ ಗೃಹ್ಯಸೂಕ್ತಗಳಲ್ಲಿ ಉಕ್ತವಾಗಿದ್ದು ಆ ಮಂತ್ರವು ನಮಗೆ ಗೊತ್ತಿಲ್ಲದಿದ್ದರೆ ಏನುಮಾಡಬೇಕು.**

**ಉ. (ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ - ಕಾಲನಿರ್ಣಯ ಪ್ರಕರಣ ಪುಟ 121-2)**
**ಭಾರದ್ವಾಜ: ವಿಶೇಷಮಾಹ:-**
**ಅಜ್ಞಾತಾ : ಯದಿ ವಾ ಮಂತ್ರಾಃ ಸ್ವಸ್ವಗೃಹ್ಯೇಷು ಚೋದಿತಾಃ ।**
**ಉಪವೀತಿಪ್ರಮುಖ್ಯಾನಾಂ ತೇಷಾಂ ವೈ ಧಾರಣೇ ದ್ವಿಜಃ ।**
**ಕೇವಲಂ ಪ್ರಣವೋ ವಾಽಪಿ ವ್ಯಾಹೃತಿತ್ರಯಂ ತು ವಾ ।**
**ಸ್ಯಾತಾಂ ವಿಪ್ರಾದಿವರ್ಣೇಷು ದ್ವಾವೇತೌ ಸರ್ವಶಾಖಿನಾಮ್ ॥**
ಎಂದು ಭಾರದ್ವಾಜ ಋಷಿಗಳು ಹೇಳಿದಂತೆ ಯಜ್ಞೋಪವೀತವನ್ನು ಧಾರಣ ಮಾಡುವಾಗ ಹೇಳಬೇಕಾದ ಮಂತ್ರವು ನಮ್ಮ ನಮ್ಮ ಗೃಹ್ಯಸೂಕ್ತಗಳಲ್ಲಿ ಉಕ್ತವಾಗಿದ್ದು ಆ ಮಂತ್ರವು ನಮಗೆ ಗೊತ್ತಿಲ್ಲದಿದ್ದರೆ ಕೇವಲ ಪ್ರಣವವನ್ನು (ಓಂಕಾರವನ್ನು) ಉಚ್ಚರಿಸಬೇಕು. ಅಥವಾ " ಭೂಃ ಭುವಃ ಸ್ವಃ " ಎಂಬ ವ್ಯಾಹೃತಿಗಳನ್ನುಚ್ಚರಿಸಿ ಯಜ್ಞೋಪವೀತವನ್ನು ಧಾರಣ ಮಾಡಬಹುದು.

**215. ಬದನೇಕಾಯಿಯನ್ನು ತಿನ್ನಬಾರದೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಕಾರಣವೇನು?**

ಉ. **(ಕೃಷ್ಣಾಚಾರ್ಯಸ್ಮೃತಿಮುಕ್ತಾವಳಿ ಆಹ್ನಿಕ ಪ್ರಕರಣ ಪುಟ 281)**
**ವೃಂತಾಕಕಟಕಾಲಿಂಗಬಿಲ್ವೌದುಂಬರಭಿಸ್ಸಟಾಃ।**
**ಯಸ್ಯೋದರೇ ಪ್ರವರ್ತಂತೇ ತಸ್ಯ ದೂರತರೋ ಹರಿಃ ॥**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಬದನೇಕಾಯಿ ಹೊತ್ತಿದ ಅನ್ನ ಮುಂತಾದವುಗಳು ನಿಷಿದ್ಧವಾಗಿದ್ದು ಅವುಗಳನ್ನು ಸೇವಿಸಿದರೆ ಶ್ರೀಹರಿಯು ನಮ್ಮಿಂದ ದೂರನಾಗುತ್ತಾನೆ. ಆದ್ದರಿಂದ ಬದನೇಕಾಯಿ ಮುಂತಾದ ನಿಷಿದ್ಧ ವಸ್ತುಗಳನ್ನು ಸೇವಿಸಬಾರದು.

**216. ಅಕ್ಷತೆ - ಅಂಗಾರಧಾರಣೆ ಶಾಸ್ತ್ರ ಸಮ್ಮತವೇ?**

ಉ. **"ಅಂಗಾರಂ ಪರತೋ ಗ್ರಾಹ್ಯಂ ಅಕ್ಷತೋಪರಿ ಧಾರಯೇತ್।**
**ಶಾಂತಾಂಗಾರಂ ಲಲಾಟಾಗ್ರೇ ಧಾರಯೇದ್ವಿಷ್ಣುತತ್ಪರಃ ॥**
ಎಂಬುದಾಗಿ ಸಂಗ್ರಹ ಎಂಬ ಗ್ರಂಥದಲ್ಲಿ ಹೇಳಿದಂತೆ ಹಣೆಯಮೇಲೆ ಮೊದಲು ಅಕ್ಷತೆಯನ್ನುಧರಿಸಿ, ಅನಂತರ ಹಣೆಯಲ್ಲಿ ಮಾತ್ರ ಅಂಗಾರವನ್ನು ಧರಿಸುವುದು ನಮ್ಮ ಶ್ರೀಮಠದ ಸಂಪ್ರದಾಯವಾಗಿರುತ್ತದೆ. ಒಟ್ಟಿನಲ್ಲಿ ಅಕ್ಷತೆ ಮತ್ತು ಅಂಗಾರವನ್ನು ಧರಿಸುವುದು ಶಾಸ್ತ್ರಸಮ್ಮತವೇ ಆಗಿರುತ್ತದೆ.

**217. ಪ್ರತಿನಿತ್ಯ ಮಧ್ಯಾಹ್ನ ಎಷ್ಟು ಗಂಟೆಗೆ ಭೋಜನ ಮಾಡಬೇಕು? ಇದರ ಬಗ್ಗೆ ಶಾಸ್ತ್ರ ಏನು ಹೇಳುತ್ತದೆ?**
**ದಿವಸಸ್ಯ ತು ಪಂಚಮೇ ಭಾಗೇ ಭೋಜನಮಾಚರೇತ್;**
ಎಂದು ಕಾತ್ಯಾಯನರು ಹೇಳಿದ್ದಾರೆ. ಇದರ ಪ್ರಕಾರ 'ಉದಾಹರಣೆಗೆ ಹಗಲಿನ ೧೨ ಘಂಟೆಗಳನ್ನು ಎಂಟು ಭಾಗ ಮಾಡಿದಾಗ, ಒಂದೊಂದು ಭಾಗವು ೧ ಘಂಟೆ ೩೦ ನಿಮಿಷ ಅಂದರೆ 1 1/2 ಘಂಟೆ ಅವಧಿವುಳ್ಳದ್ದು ಆಗುತ್ತದೆ.
'ಉದಾಹರಣೆಗೆ ಬೆಳಿಗ್ಗೆ 6 ಘಂಟೆಗೆ ಸೂರ್ಯೋದಯವಾದಾಗ
ಒಂದನೇ ಭಾಗ - 6 ರಿಂದ 7 ½
ಎರಡನೇ ಭಾಗ - 7 ½ ರಿಂದ 9 ತನಕ
ಮೂರನೇ ಭಾಗ - 9 ರಿಂದ 10 ½ ತನಕ
ನಾಲ್ಕನೇ ಭಾಗ - 10 ½ ರಿಂದ 12 ತನಕ
ಐದನೇ ಭಾಗ - 12 ರಿಂದ 1 ½ ತನಕ
ಆರನೇ ಭಾಗ - 1 ½ ರಿಂದ 3 ತನಕ

ಏಳನೇ ಭಾಗ - 3 ರಿಂದ 4 ½ ತನಕ

ಎಂಟನೇ ಭಾಗ - 4 ½ ರಿಂದ 6 ತನಕ

ವಾಗುತ್ತದೆ. ಶ್ರೀಕಾತ್ಯಾಯನ ಋಷಿಗಳು ಹಗಲಿನ ಐದನೇ ಭಾಗದಲ್ಲಿ ಭೋಜನಮಾಡಬೇಕೆಂದು ಹೇಳಿರುವುದರಿಂದ ಈ ಮೇಲೆ ಕಾಣಿಸಿದ ಪ್ರಕಾರ ಐದನೇ ಭಾಗ 12 ರಿಂದ ಪ್ರಾರಂಭವಾಗಿ 1½ ಘಂಟೆಗೆ ಮುಗಿಯುತ್ತದೆ. ಆದಕಾರಣ ಪ್ರತಿನಿತ್ಯ ಮಧ್ಯಾಹ್ನ 12 ಘಂಟೆಯಿಂದ 1½ ಘಂಟೆ ಒಳಗಾಗಿ ಭೋಜನವನ್ನು ಮಾಡಬೇಕು. ಹಗಲಿನ ಪ್ರಮಾಣವು 12 ತಾಸುಗಳಕ್ಕಿಂತ ಸ್ವಲ್ಪ ಹೆಚ್ಚು ಕಡಿಮೆ ಆದಲ್ಲಿ ಅದಕ್ಕೆ ತಕ್ಕಂತೆ ಪ್ರತಿನಿತ್ಯ ಮಧ್ಯಾಹ್ನದ ಭೋಜನದ ಸಮಯದಲ್ಲಿ ಸ್ವಲ್ಪ ವ್ಯತ್ಯಾಸವಿರುತ್ತದೆ. 12 ರಿಂದ 1½ ಘಂಟೆ ಒಳಗಾಗಿ ಭೋಜನ ಮಾಡಬೇಕೆನ್ನುವುದು ಹಗಲಿನ ಪ್ರಮಾಣ 12 ತಾಸುಗಳು ಇದ್ದಾಗಮಾತ್ರ ಎಂಬುದನ್ನು ತಿಳಿಯಬೇಕು.

**218. ಬಾಯಿಂದ ಬೆಂಕಿಯನ್ನು ಊದಬಹುದೆ?**

**'. (ಕೃ. ಸ್ಮೃ. ಕಾ.ಪ್ರ. ಪು ೧೬೪-೧೬೫)**

**ಬ್ರಾಹ್ಮಣಾನಾಂ ಪ್ರವಾಸಿತ್ವಂ ಮುಖಾಗ್ನಿದಮನಕ್ರಿಯಾ।**

**ಬಲಾತ್ಕಾರಾದಿದುಷ್ಟಸ್ತ್ರೀಸಂಗ್ರಹೋ ವಿಧಿಚೋದಿತಃ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಬ್ರಾಹ್ಮಣನು ಕಲಿಯುಗದಲ್ಲಿ ಯಾವಾಗಲೂ ಪ್ರವಾಸ ಮಾಡುತ್ತಿರಬಾರದು. ಇದರಂತೆ ಬಾಯಿಯಿಂದ ಅಗ್ನಿಯನ್ನು ಊದುವುದೂ ಕಲಿಯುಗದಲ್ಲಿ ನಿಷಿದ್ಧವು. ಇದರಂತೆ ಕಲಿಯುಗದಲ್ಲಿ ಬಲಾತ್ಕಾರದಿಂದ ದುಷ್ಟ ಸ್ತ್ರೀಸಂಗ್ರಹವೂ ನಿಷಿದ್ಧ.

**219. ಪ್ರಾತಃಕಾಲದಲ್ಲಿ ಅಭ್ಯಂಜನವನ್ನು ಮಾಡಿಕೊಳ್ಳಬಹುದೆ?**

**ಉ. (ಕೃ.ಸ್ಮೃ. ಆ.ಪ್ರ.ಪು. ೧೯೧-೧೯೨)**

**ಶೌನಕಃ- ಸುರಯಾ ಲಿಪ್ತದೇಹೋಽಪಿ ಪ್ರಾಯಶ್ಚಿತ್ತೀಯತೇ ದ್ವಿಜಃ।**

**ಪ್ರಾತರಭ್ಯಕ್ತದೇಹಸ್ಯ ನಿಷ್ಕೃತಿರ್ನೈವ ವಿದ್ಯತೇ॥ಇತಿ।**

**ಅಯಂ ವಿಷಯಃ ನರಕಚತುರ್ದಶೀವ್ಯತಿರಿಕ್ತವಿಷಯಃ।**

**ಪ್ರಾತಃಕಾಲೇ ಪಿತೃದಿನೇ ದಶಮ್ಯಾದಿದಿನತ್ರಯೇ।**

**ಕ್ಷೌರಾಭ್ಯಂಗಂ ನ ಕುರ್ವೀತ ಸುರಾಪಾನಸಮಂ ಭವೇತ್॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಹಗಲನ್ನು ಪ್ರಾತಃಕಾಲ -

ಸಂಗವಕಾಲ-ಮಧ್ಯಾಹ್ನಕಾಲ-ಅಪರಾಹ್ನಕಾಲ ಹಾಗೂ ಸಾಯಂಕಾಲ ವೆಂದು ೫ ಭಾಗ ಮಾಡಿದಾಗ ಮೊದಲನೇ ಭಾಗವಾದ ಪ್ರಾತಃಕಾಲದಲ್ಲಿ ಕ್ಷೌರವನ್ನು ಮಾಡಿಸಿಕೊಳ್ಳಬಾರದು ಮತ್ತು ಅಭ್ಯಂಜನವನ್ನು ಮಾಡಿಕೊಳ್ಳಬಾರದು. ಹಾಗೆ ಮಾಡಿಕೊಂಡರೆ ಅದಕ್ಕೆ ಪ್ರಾಯಶ್ಚಿತ್ತವೇ ಇರುವುದಿಲ್ಲ. ಈ ನಿಷೇಧವು ನರಕಚತುರ್ದಶೀ ವ್ಯತಿರಿಕ್ತ ವಿಷಯಕ ವಾದದ್ದೆಂದು ತಿಳಿಯಬೇಕು.

**220. ತೀರ್ಥ(ವಿಷ್ಣುಪಾದೋದಕ) ಮತ್ತು ಶ್ರೀರಾಯರ ಪಾದೋದಕಗಳ ಪ್ರಾಶನವು ಶಾಸ್ತ್ರಸಮ್ಮತವೇ? ಮತ್ತು ಅವುಗಳ ಪ್ರಾಶನ ಕ್ರಮವು ಹೇಗೆ?**

ಉ. **ವಿಷ್ಣೋಃ ಪಾದೋದಕಂ ದೇವಿ ! ಶಿರಸಾ ಧಾರಯೇತ್ಪಿಬನ್ ।**
**ಯೋ ಧರೇದ್ವಸುಧೇ ! ನಿತ್ಯಂ ಸ ಯಾತಿ ಪರಮಾಂ ಗತಿಮ್ ॥**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ತೀರ್ಥಪ್ರಾಶನವು (ವಿಷ್ಣುಪಾದೋದಕ ಪ್ರಾಶನವು) ಶಾಸ್ತ್ರ ಸಮ್ಮತವೇ ಆಗಿರುತ್ತದೆ ಇದರಂತೆ
**ಮಹಾಭಾಗವತಾನಾಂ ಚ ಪಿಬೇತ್ಪಾದೋದಕಂ ತು ಯಃ ।**
**ಶಿರಸಾ ಧಾರಯೇದ್ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಮಹಾಭಾಗವತರ ಪಾದೋದಕ ಪ್ರಾಶನವೂ ಶಾಸ್ತ್ರಸಮ್ಮತವೇ ಆಗಿರುತ್ತದೆ.

**221. ಗ್ರಹಣ-ಗೋಕುಲಾಷ್ಟಮೀ-ವಿವಾಹಾದಿ ಸಂದರ್ಭಗಳಲ್ಲಿ ರಾತ್ರಿ ಎಷ್ಟು ಗಂಟೆಯ ತನಕ ಭೋಜನ ಮಾಡಲು ಅವಕಾಶ ಉಂಟು?**

ಉ. **(ಸ್ಮೃ. ಕಾ.ಪ್ರ.ಪು.೩೪೯)**
**“ಅತ್ರ ನಿಶೀಥಭೋಜನೇ ಘಟಿಕಾನಿಯಮಃ ಅಭಿಹಿತಃ ಅನಂತ ಸಂಹಿತಾಯಾಮ್ :-**
**“ದಶಸಪ್ತಘಟೀ ಯಾವತ್ ರಾತ್ರೌ ಭೋಜನಮಿಷ್ಯತೇ ।**
**ಸ್ಥಾಲೀಪಾಕೇ ವಿವಾಹೇ ಚ ಗ್ರಹಣೇ ಚಾಷ್ಟಮೀವ್ರತೇ ”**
ಎಂದು ಪ್ರಮಾಣದಲ್ಲಿ ಹೇಳಿದಂತೆ ಸ್ಥಾಲೀಪಾಕ - ವಿವಾಹ - ಗ್ರಹಣ ಮತ್ತು ಅಷ್ಟಮೀವ್ರತಗಳಲ್ಲಿ ೧೭ ಘಳಿಗೆಯವರೆಗೂ ಭೋಜನಕ್ಕೆ ಅವಕಾಶವಿದೆ. ಉದಾಹರಣೆಗೆ ಸೂರ್ಯಾಸ್ತ ೬ ಘಂಟೆಗೆ ಎಂದು ಇಟ್ಟುಕೊಂಡರೆ ರಾತ್ರಿ ೧೨ ಘಂ. ೪೮ನಿ. ವರೆಗೆ ಭೋಜನಕ್ಕೆ

ಅವಕಾಶವಿದೆ ಎಂದು ತಿಳಿಯಬೇಕು. ಒಟ್ಟಿನಲ್ಲಿ ಹೇಳುವುದಾದರೆ ಗ್ರಹಣ-ಗೋಕುಲಾಷ್ಟಮೀ-ವಿವಾಹಾದಿ ಸಂದರ್ಭಗಳಲ್ಲಿ ಅಂದು ಸೂರ್ಯಾಸ್ತವಾದನಂತರ, ೬ ತಾಸು ೪೮ ನಿಮಿಷಗಳ ತನಕ ಭೋಜನಕ್ಕೆ ಅವಕಾಶ ಉಂಟು.

**222. ಯಜುರ್ವೇದಿಗಳು ಸ್ನಾನ-ದಾನ-ಶ್ರಾದ್ಧ-ಹಾಗೂ ಸ್ನಾನ ಕಾಲದಲ್ಲಿ ವಸ್ತ್ರವನ್ನು ಟೊಂಕಕ್ಕೆ ಸುತ್ತಬೇಕೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **(ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀ ಕೃತ ಪುಟ೨೦)**
**ಸ್ನಾನೇ ದಾನೇ ತಥಾ ಶ್ರಾದ್ಧೇ ಸ್ವಾಧ್ಯಾಯೇ ದೇವತಾರ್ಚನೇ।**
**ಬದ್ಧೀಯಾದಂಬರೇ ಕಟ್ಯಾಂ ಯಾಜುಷೋ ಬಹ್ವೃಚಂ ವಿನಾ ॥**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಯಜುರ್ವೇದಿಗಳು ಸ್ನಾನ-ದಾನ-ಶ್ರಾದ್ಧ-ಸ್ವಶಾಖಾಧ್ಯಯನ (ವೇದಾಧ್ಯಯನ) ಹಾಗೂ ದೇವರ ಪೂಜಾ ಇವುಗಳನ್ನು ಮಾಡುವಾಗ ಟೊಂಕದಲ್ಲಿ ವಸ್ತ್ರವನ್ನು ಸುತ್ತಿಕೊಳ್ಳಬೇಕು.

**223. ಉಟ್ಟುಕೊಳ್ಳುವ ವಸ್ತ್ರವನ್ನು ಹೊದ್ದುಕೊಳ್ಳುವುದು ಹೊದ್ದುಕೊಳ್ಳುವ ವಸ್ತ್ರವನ್ನು ಉಟ್ಟುಕೊಳ್ಳುವುದು ಶಾಸ್ತ್ರಸಮ್ಮತವೆ?**

ಉ. **(ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀಕೃತಪುಟ ೧೪)**
**ಸಂಪ್ರಾಹ ನಿಯಮಂ ವ್ಯಾಸೋ ಮುನಿರ್ ವಸ್ತ್ರಸ್ಯ ಧಾರಣೇ।**
**ನೋತ್ತರೀಯಮಧಃ ಕುರ್ಯಾತ್ ನೋಪರ್ಯಧಸ್ಥಮಂಬರಮ್ ॥**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಉಟ್ಟುಕೊಳ್ಳುವ ವಸ್ತ್ರವನ್ನು ಹೊದ್ದುಕೊಳ್ಳಬಾರದು. ಹೊದ್ದುಕೊಳ್ಳುವ ವಸ್ತ್ರವನ್ನು ಉಟ್ಟುಕೊಳ್ಳ ಬಾರದು.

**224.ಹಲ್ಲಿನಿಂದ ಉಗುರನ್ನು ಕತ್ತರಿಸಬಾರದೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. " ನ ಛಿಂದ್ಯಾತ್ ನಖಲೋಮಾನಿ ದಂತೈಃ ನೋತ್ಪಾಟಯೇತ್ ನಖಮ್।
ಎಂದು ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಹಲ್ಲುಗಳಿಂದ ಉಗುರನ್ನು ಕತ್ತರಿಸಬಾರದು (ಕಿತ್ತಬಾರದು).

**225.ಕುಡಿದುಳಿದ ನೀರನ್ನು ಪುನಃ ಕುಡಿಯಬಹುದೆ?**

ಉ. (ಚಾಣಕ್ಯ ನೀತಿ ಅಧ್ಯಾಯ ೧೭, ಶ್ಲೋ. ೧೦)
"ಪಾದಶೇಷಂ ಪೀತಶೇಷಂ ಸಂಧ್ಯಾಶೇಷಂ ತಥೈವ ಚ ।
ಶ್ವಾನಮೂತ್ರಸಮಂ ತೋಯಂ ಪೀತ್ವಾ ಚಾಂದ್ರಾಯಣಂ ಚರೇತ್ ॥"
ಎಂದು ಹೇಳಿದಂತೆ ಕಾಲುಗಳನ್ನು ತೊಳೆದನಂತರ ಉಳಿದನೀರು-ಕುಡಿದುಳಿದ ನೀರು ಹಾಗೂ ಸಂಧ್ಯಾವಂದನೆಯನ್ನು ಮಾಡಿದ ನಂತರ ಉಳಿದ ನೀರು -ಇವು ನಾಯಿಯ ಮೂತ್ರಕ್ಕೆ ಸಮಾನವಾದುದು. ಅದನ್ನು ಕುಡಿಯಬಾರದು. ಕುಡಿದಲ್ಲಿ ಪ್ರಾಯಶ್ಚಿತ್ತರೂಪದಲ್ಲಿ ಚಾಂದ್ರಾಯಣ ವ್ರತವನ್ನು ಮಾಡಬೇಕಾತ್ತದೆ.

226. ಮುತ್ತುಗದ ಎಲೆಯ ಮೇಲೆ ಊಟ ಮಾಡಬಾರದೆಂದು ಕೆಲವರು ಹೇಳುತ್ತಾರೆ? ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಉ. "ಅಗ್ರಾಹ್ಯಂ ಪರ್ಣಂ ತತ್ರೈವ :-
ಪಲಾಶಪದ್ಮಪತ್ರೇಷು ಗೃಹೀ ಯತ್ನೇನ ವರ್ಜಯೇತ್ ।
ಯತೀನಾಂ ಚ ವನಸ್ಥಾನಾಂ ಪಿತೃಣಾಂ ಚ ಶುಭಪ್ರದಮ್ ॥"
(ಕೃ.ಸ್ಮೃ.ಆ.ಪ್ರ.ಪು. ೩೦೨)
ಎಂದು ಹೇಳಿದಂತೆ ಮುತ್ತುಗದ ಎಲೆ ಮತ್ತು ಕಮಲದ ಎಲೆಯ ಮೇಲೆ ಗೃಹಸ್ಥಾಶ್ರಮಿಯು ಊಟ ಮಾಡಬಾರದು. ಆದರೆ ಮುತ್ತುಗದ ಎಲೆ ಮತ್ತು ಕಮಲದ ಎಲೆಯ ಮೇಲೆ ಯತಿಗಳು ಮತ್ತು ವಾನಪ್ರಸ್ಥಾಶ್ರಮಿಗಳು ಊಟ ಮಾಡುವುದು ಶುಭಪ್ರದ.

227. ಪ್ರತಿನಿತ್ಯದಲ್ಲಿ ತಣ್ಣೀರಿನಿಂದ ಸ್ನಾನಮಾಡಲು ಅಶಕ್ತನಾದವನು ಬಿಸಿನೀರಿನಿಂದ ಸ್ನಾನಮಾಡಬಹುದೆ? ಮಾಡಬಹುದಾದರೆ ಹೇಗೆ ಮಾಡಬೇಕು?

ಉ. (ಕೃ.ಸ್ಮೃ.ಕಾ.ಪ್ರ.ಪು. ಮೂಲ ಪು. ೧೯೭ - ೯೮)
"ಉಷ್ಣೋದಕೇ ವಿಶೇಷಮಾಹ ವ್ಯಾಸಃ -
೧) ಶೀತಾಸ್ವಪ್ಸು ನಿಷಿಚ್ಯೋಷ್ಣಾಃ ಮಂತ್ರಸಂಭಾರಸಂಭೃತಾಃ ।
ಗೇಹೇಽಪಿ ಶಸ್ಯತೇ ಸ್ನಾನಂ ತದ್‌ಹೀನಂ ಅಫಲಂ ಬಹಿರಿತಿ ॥
೨) ಅಥ ಶೀತಜಲಾಶಕ್ತೌ ಕುರ್ಯಾದೇವೋಷ್ಣವಾರಿಣಾ ।
ಶೀತಾಸ್ವಪ್ಸು ನಿಷಿಚ್ಯೋಷ್ಣಂ ವಾರಿ ಪಶ್ಚಾಚ್ಚ ಶೀತಲಮ್ ॥
(ವಂಶಪಲ್ಲೀ ಆಚಾರ್ಯಕೃತ ಸದಾಚಾರಸ್ಮೃತಿವ್ಯಾಖ್ಯಾನೇ ಆಹ್ನಿಕ ಕೌಸ್ತುಭೇ ಮುದ್ರಿತೇ ಪುಸ್ತಕೇ ಪು-೧೦).

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪ್ರತಿನಿತ್ಯದಲ್ಲಿ ತಣ್ಣೀರಿನಿಂದ ಸ್ನಾನ ಮಾಡಲಶಕ್ತನಾದವನು ಮನೆಯಲ್ಲಿ ಬಿಸಿನೀರಿನಿಂದ ಸ್ನಾನ ಮಾಡಬಹುದು. ಆದರೆ ಬಿಸಿ ನೀರಿನಿಂದ ಸ್ನಾನ ಮಾಡುವುದಾದರೆ ಗಂಗಾಳದಲ್ಲಿ ಮೊದಲು ಸ್ವಲ್ಪ ತಣ್ಣೀರನ್ನು ಹಾಕಿ ಆಮೇಲೆ ಬಿಸಿನೀರನ್ನು ತೋಡಿಕೊಂಡು ಆಮೇಲೆ ಪುನಃ ಸ್ವಲ್ಪ ತಣ್ಣೀರನ್ನು ಬೆರೆಸಿ (ಹಾಕಿ) ನಂತರದಲ್ಲಿ ಸ್ನಾನ ಮಾಡಬೇಕು. ಹೀಗೆಂದು ವ್ಯಾಸ ಸ್ಮೃತಿ ಮುಂತಾದವುಗಳಲ್ಲಿ ಹೇಳಿರುತ್ತಾರೆ.

**228. ಒದ್ದೆ ಬಟ್ಟೆಯನ್ನು ಏಳು ಸಲ ಝಾಡಿಸಿದರೆ ಒಣಗಿದ ವಸ್ತ್ರವಾಗುತ್ತದೆ ಎಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

**ಉ. (ಛಲಾರಿ ಸ್ಮೃತಿಸಾಗರ ನಿರಂಕ ಪುಟ ೮೯)**

**ಸಂಝಾಟನಾತ್ ಸಪ್ತವಾರಂ ಶುಷ್ಕಸ್ಸ್ಯಾದ್ರ್ರಃ ಪಟೋ ಭವೇತ್।**

**ಇತಿ ಹಾರೀತಸ್ಮೃತೇಃ ಝಾಟನಾಶಬ್ದೇವ ಹಸ್ತಾಭ್ಯಾಂ ವಸ್ತ್ರ ಸಂಚಾಲನಮುಚ್ಯತೇ॥**

ಎಂದು ಹಾರೀತ ಸ್ಮೃತಿಯಲ್ಲಿ ಹೇಳಿದಂತೆ ಒಣಗಿದ ವಸ್ತ್ರವನ್ನು ಧರಿಸಿಯೇ ಸಂಧ್ಯಾದಿ ಕರ್ಮಗಳನ್ನು ಅನುಷ್ಠಿಸಬೇಕು. ಒಂದು ವೇಳೆ ಒಣಗಿದ ವಸ್ತ್ರವು ಇಲ್ಲದಿದ್ದಾಗ ಒದ್ದೆ ಬಟ್ಟೆಯನ್ನು ಏಳು ಸಲ ಝಾಡಿಸಿದರೆ ಅದು ಒಣಗಿದ ಬಟ್ಟೆ ಎಂದು ಅನ್ನಿಸಿಕೊಳ್ಳುತ್ತದೆ. ಆಮೇಲೆ ಅದನ್ನು ಧರಿಸಿ, ಸಂಧ್ಯಾದಿ ಕರ್ಮಗಳನ್ನು ಆಚರಿಸಬಹುದು.

**229. ಪ್ರತಿನಿತ್ಯದಲ್ಲೂ ಯಾರು-ಯಾರು ಎಷ್ಟೆಷ್ಟು ತುತ್ತುಗಳನ್ನು ಭೋಜನ ಮಾಡಬೇಕು?**

**ಉ. ಗ್ರಾಸಾನಾಂ ಪರಿಮಾಣಂ ಚ ವಶಿಷ್ಠಃ ಸಮ್ಯಗಬ್ರವೀತ್ । ಅಷ್ಟೌ ಗ್ರಾಸಾಃ ಮುನೇರ್ಭಕ್ಷ್ಯಾಃ ವಾನಪ್ರಸ್ಥಸ್ಯ ಷೋಡಶ । ದ್ವಾತ್ರಿಂಶತ್ತು ಗೃಹಸ್ಥಸ್ಯ ಹ್ಯಮಿತಂ ಬ್ರಹ್ಮಚಾರಿಣಾಮ್ ॥ ಇತಿ ॥**

ಭೋಜನದ ಸಮಯದಲ್ಲಿ ಎಷ್ಟು ತುತ್ತುಗಳನ್ನು ಸ್ವೀಕರಿಸಬೇಕು ಎಂಬ ವಿಷಯಕ್ಕೆ ವಶಿಷ್ಠ ಋಷಿಗಳು ಹೀಗೆ ಹೇಳುತ್ತಾರೆ :-

ಸಂನ್ಯಾಸಿಗಳು - 8 ತುತ್ತುಗಳನ್ನು
ವಾನಪ್ರಸ್ಥಾಶ್ರಮಿಗಳು - 16 ,,
ಗೃಹಸ್ಥಾಶ್ರಮಿಗಳು - 32 ,,

ಬ್ರಹ್ಮಚಾರಿಗಳು - ಅಮಿತವಾದ ತುತ್ತುಗಳನ್ನು ಸ್ವೀಕರಿಸಬೇಕು. "ಯಥೇಚ್ಛಂ ಬ್ರಹ್ಮಚಾರಿಣಾಂ'' ಎಂದು ಹೇಳಿದಂತೆ ಬ್ರಹ್ಮಚಾರಿಗಳು ತಮಗೆ ಇಷ್ಟಬಂದಷ್ಟು ತುತ್ತುಗಳನ್ನು ಸ್ವೀಕರಿಸಬಹುದು.

**ಅಮಿತಮಿತ್ಯನೇನ ಅತ್ಯಶನಮಿತಿ ನಾಶಂಕನೀಯಮ್ । ತಸ್ಯ ನಿಷಿದ್ಧತ್ವಾತ್ । ತಥಾ ಚ ಮನುಃ :-**
**ನ ಚೈವಾತ್ಯಶನಂ ಕುರ್ಯಾತ್ ನ ಚೋಚ್ಛಿಷ್ಟಂ ಕ್ವಚಿದ್ವ್ರಜೇತ್ ।**
**ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಮ್ ॥**
**ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ ಪರಿವರ್ಜಯೇತ್ ॥ ಇತಿ ॥**
ಮನುಸ್ಮೃತಿ ಅಧ್ಯಾಯ 2, ಶ್ಲೋ 56-57.
ವಶಿಷ್ಠರು ಹೇಳಿದಪ್ರಕಾರ "ಅಮಿತಂ ಬ್ರಹ್ಮಚಾರಿಣಾಂ'' ಎಂಬಲ್ಲಿ ಅಮಿತಂ ಎಂದರೆ ಇಷ್ಟೇ ತುತ್ತುಗಳು ಎಂಬ ನಿಯಮವಿಲ್ಲ ಎಂದು ಅರ್ಥ. ಆದರೆ ಬ್ರಹ್ಮಚಾರಿಗಳು ಅಮಿತವಾಗಿ ಭೋಜನ ಮಾಡಬಹುದು ಎಂದು ಅರ್ಥವಲ್ಲ. ಅತಿ ಭೋಜನವು ನಿಷಿದ್ಧವಾಗಿದೆ. ಈ ವಿಷಯದಲ್ಲಿ ಮನು ಋಷಿಗಳ ಅಭಿಪ್ರಾಯವು ಹೀಗಿದೆ. ಅತಿ ಭೋಜನವು ಆರೋಗ್ಯಕ್ಕೆ ಹಾನಿಕರ, ಸ್ವರ್ಗಾದಿ ಪುಣ್ಯಲೊಕಪ್ರಾಪ್ತಿಗೂ ವಿಘ್ನಕಾರಿ, ಪುಣ್ಯವಿಘಾತಕವೂ ಲೋಕನಿಂದಿತವೂ ಆಗಿದೆ. ಆದಕಾರಣ ಅತಿಭೋಜನವನ್ನು ವಿಸರ್ಜಿಸ ಬೇಕು.

**230.ನಾವು ಪ್ರತಿನಿತ್ಯ ಗಾಯತ್ರೀ ಮಂತ್ರವನ್ನು ಹೇಗೆ ಜಪಿಸಬೇಕು?**

ಉ. **ಪ್ರಾತರ್ನಾಭೌ ಕರೇ ಕೃತ್ವಾ ಮಧ್ಯಾಹ್ನೇ ಹೃದಿ ಸಂಸ್ಥಿತಾ ।**
**ಸಾಯಾಹ್ನೇ ನಾಸಿಕಂ ಪ್ರೋಕ್ತಂ ಇತ್ಯೇತೇ ಜಪಲಕ್ಷಣಮ್ ॥ ಇತಿ**
**ಸಂಧ್ಯಾಭಾಷೇ**
**ಪುರಂದರೋಪನಿಷತ್**
**ಉದಯ ಕಾಲದ ಜಪ ನಾಭಿಗೆ ಸರಿಯಾಗಿ**
**ಹೃದಯಕ್ಕೆ ಸರಿಯಾಗಿ ಮಧ್ಯಾಹ್ನದಿ**
**ವದನಕ್ಕೆ ಸಮನಾಗಿ ಸಾಯಂಕಾಲಕ್ಕೆ ನಿತ್ಯ**
**ಪದುಮನಾಭ ತಂದೆ ಪುರಂದರವಿಠಲಗೆ**
**ಇದೆ ಗಾಯತ್ರಿಯಿಂದ ಜಪಿಸಬೇಕೋ ॥**

ಎಂದು ಹೇಳಿದಂತೆ ಪ್ರತಿನಿತ್ಯ ನಾವು ತ್ರಿಕಾಲದಲ್ಲೂ ಸಂಧ್ಯಾವಂದೆಯನ್ನು ಮಾಡುವಾಗ ಪ್ರಾತಃಕಾಲದಲ್ಲಿ ನಾಭಿಗೆ ಸರಿಯಾಗಿ ನಮ್ಮ ಕೈಯನ್ನು ಇಟ್ಟುಕೊಂಡು ಮಧ್ಯಾಹ್ನದಲ್ಲಿ ಹೃದಯಕ್ಕೆ ಸರಿಯಾಗಿ ನಮ್ಮ ಕೈಯನ್ನು ಇಟ್ಟುಕೊಂಡು ಸಾಯಂಕಾಲದಲ್ಲಿ ಮೂಗಿಗೆ ಸರಿಯಾಗಿ ನಮ್ಮ ಕೈಯನ್ನು ಇಟ್ಟುಕೊಂಡು ಗಾಯತ್ರಿಮಂತ್ರವನ್ನು ಜಪಿಸಬೇಕು.

**231.ಊರ್ಧ್ವಪುಂಡ್ರವನ್ನು ಧರಿಸದೇ ಸಂಧ್ಯಾವಂಧನಾದಿಕರ್ಮಗಳನ್ನು ಮಾಡಬಹದೆ?**

**ಉ. ಊರ್ಧ್ವಪುಂಡ್ರವಿಹೀನಂ ಯತ್ಸಂಧ್ಯಾಕರ್ಮಾದಿಕಂ ಚರೇತ್। ತತ್ಸರ್ವಂ ರಾಕ್ಷಸೈರ್ನೀತಂ ಜಪಹೋಮಾದಿಕಂ ತಥಾ॥ ಊರ್ಧ್ವಪುಂಡ್ರವಿಹೀನಸ್ತು ಕರ್ಮ ಯತ್ಕಿಂಚಿದಾಚರೇತ್। ತತ್ಸರ್ವಂ ನಿಷ್ಫಲಂ ಯಾತಿ ಇಷ್ಟಾಪೂರ್ತಾ ಅಪಿದ್ವಿಜಾಃ॥**

ಎಂದು ಹೇಳಿದಂತೆ ಊರ್ಧ್ವಪುಂಡ್ರವನ್ನು ಧಾರಣ ಮಾಡದಲೆ (ನಾಮಧಾರಣೆಯನ್ನು ಮಾಡದಲೆ) ಸಂಧ್ಯಾವಂದನಾದಿ ಕರ್ಮಗಳನ್ನು ಮಾಡಿದರೆ ಅವುಗಳನ್ನು ರಾಕ್ಷಸರು ತೆಗೆದುಕೊಂಡು ಹೋಗುತ್ತಾರೆ. ಅಷ್ಟೇ ಅಲ್ಲದೇ ಅವೆಲ್ಲವೂ ವ್ಯರ್ಥವಾಗುತ್ತವೆ. ಆದ್ದರಿಂದ ನಾಮವನ್ನು ಧಾರಣ ಮಾಡಿಯೇ ಸಂಧ್ಯಾವಂದನಾದಿ ಕರ್ಮಗಳನ್ನು ಅನುಷ್ಠಾನ ಮಾಡಬೇಕು.

**232. ಹಣೆಯಲ್ಲಿ ನಾಮ-ಅಕ್ಷತೆ-ಅಂಗಾರಗಳನ್ನು ಕನ್ನಡಿಯಲ್ಲಿ ನೋಡಿ ಹಚ್ಚಿಕೊಳ್ಳಬಹುದೆ?**

**ಉ. ವೀಕ್ಷ್ಯಾದರ್ಶೇ ಜಲೇ ವಾಽಥ ಯೋ ವಿದಧ್ಯಾತ್ಪ್ರಯತ್ನತಃ । ಊರ್ಧ್ವಪುಂಡ್ರಂ ಮಹಾಭಾಗ ಸ ಯಾತಿ ಪರಮಾಂ ಗತಿಮ್ ॥**

ಎಂದು ಹೇಳಿದಂತೆ ಹಣೆಯಲ್ಲಿ ನಾಮ-ಅಕ್ಷತೆ-ಅಂಗಾರಾದಿಗಳನ್ನು ಕನ್ನಡಿಯಲ್ಲಿ ನೋಡಿ ಹಚ್ಚಿಕೊಳ್ಳಬಹುದು. ಒಂದುವೇಳೆ ಆ ಸಮಯದಲ್ಲಿ ಕನ್ನಡಿಯು ಸಿಗದಿದ್ದರೆ, ನೀರಿನಲ್ಲಿ ನೋಡಿಯಾದರೂ ಹಚ್ಚಿಕೊಳ್ಳಬಹುದು. ಕನ್ನಡಿಯನ್ನು ನೋಡಿ ಹಚ್ಚಿಕೊಳ್ಳುವುದು ಗೃಹಸ್ಥಾಶ್ರಮಿಗಳಿಗೆ ಶಾಸ್ತ್ರವಿಹಿತವಾಗಿದೆ. ಆದರೆ ಬ್ರಹ್ಮಚಾರಿಗಳಿಗೆ ನಿಷಿದ್ಧವಾದದ್ದು. ಆದಕಾರಣ ಬ್ರಹ್ಮಚಾರಿಗಳು ಕನ್ನಡಿಯನ್ನು ನೋಡಿ ಹಣೆಯಲ್ಲಿ ನಾಮ-ಅಕ್ಷತೆ-ಅಂಗಾರಾದಿಗಳನ್ನು ಹಚ್ಚಿಕೊಳ್ಳಬಾರದು.

**233.ನಾವು ಪ್ರತಿನಿತ್ಯ ಹಚ್ಚುವ 12 ನಾಮಗಳನ್ನೂ ಸಚ್ಛಿದ್ರವಾಗಿ ಧಾರಣ ಮಾಡಬೇಕೂ? ಅಥವಾ ಹಣೆಯಲ್ಲಿ ಮಾತ್ರ ಸಚ್ಛಿದ್ರವಾಗಿ ಧಾರಣ ಮಾಡಬೇಕೂ?**

**ಉ. ಕೃಷ್ಣಾಚಾರ್ಯಸ್ಮೃತಿಮುಕ್ತಾವಳಿ - ಆಹ್ನಿಕಪ್ರಕರಣ ಪಸ್ತುತಸ್ತು ಸರ್ವಪುಂಡ್ರಾನಾಂ ಸಚ್ಛಿದ್ರತ್ವೇನ ಧಾರಣಂ। ಶಿಷ್ಟಾಚಾರ ವಿರುದ್ಧತ್ವಾತ್ ತ್ಯಾಜ್ಯಮ್। ಶ್ರೀಮದಾಚಾರ್ಯಚರಣ ಕಾಲಪ್ರಭೃತಿ ಏತತ್ಕಾಲ ಪರ್ಯಂತಂ ಸ್ಥಿತೈಃ ಸಂಪ್ರದಾಯಜ್ಞೈಃ ಉಡುಪೀ ಶ್ರೀಕೃಷ್ಣಪೂಜಕೈಃ ಅಷ್ಟ(ಮಠ)ಶ್ರೀಪಾದೈಃ ಘಟ್ಟೋಪರಿಸ್ಥಿತೈಃ ರಘೂತ್ತಮಶ್ರೀಪಾದಮಠಸ್ಥೈಃ - ಶ್ರೀಪಾದೈಃ ವಿಜಯೀಂದ್ರತೀರ್ಥಶ್ರೀಪಾದಮಠಸಂಪ್ರದಾಯಸ್ಥೈಃ ಶ್ರೀಪಾದೈಃ - ಶ್ರೀಪಾದರಾಯಮಠಸ್ಥೈಃ ಶ್ರೀಪಾದೈಃ ವ್ಯಾಸರಾಯತೀರ್ಥ ಶ್ರೀಪಾದಸಂಪ್ರದಾಯಸ್ಥೈಃ ಇತಃಪೂರ್ವಂ ವಿದ್ಯಮಾನೈಃ ಶ್ರೀಪಾದೈಃ ಲಲಾಟೇತರಪುಂಡ್ರಾನಾಂ ಅಚ್ಛಿದ್ರತ್ವೇನ ಧಾರಣಾತ್। ಏತಚ್ಚ ಸಂಪ್ರದಾಯಪರಂಪರಾ ಜ್ಞಾಯತೇ। ಆಚಾರಶ್ಚೈವ ಸಾಧೂನಾಂ ಸ್ಮೃತಿಶೀಲೇ ಚ ತದ್ವಿದಾಮ್। ಇತ್ಯಾದಿವಚನಾತ್ ಆಚಾರಸ್ಯಾಪಿ ಅಸಾಧಾರಣತ್ವೇನ ಜ್ಞಾಪನಾತ್।**

ಎಂದು ಕೃಷ್ಣಾಚಾರ್ಯ ಸ್ಮೃತಿಮುಕ್ತಾವಳಿ ಆಹ್ನಿಕ ಪ್ರಕರಣದಲ್ಲಿ ಹೇಳಿದಂತೆ, ಹನ್ನೆರಡೂ ನಾಮಗಳನ್ನು ಸಚ್ಛಿದ್ರವಾಗಿ ಧಾರಣ ಮಾಡುವುದು ಶಿಷ್ಟಾಚಾರ ವಿರುದ್ಧವಾದ್ದರಿಂದ ತ್ಯಾಜ್ಯವಾದದ್ದು. ಶ್ರೀಮದಾಚಾರ್ಯರಿಂದ ಇಲ್ಲಿಯ ವರೆಗಿನ ಜ್ಞಾನಿಗಳೆಲ್ಲರೂ ಹಣೆಯಲ್ಲಿ ಹಚ್ಚುವ ನಾಮವನ್ನು ಮಾತ್ರ ಸಚ್ಛಿದ್ರವಾಗಿ ಧಾರಣ ಮಾಡಿ ಬಾಕಿ ನಾಮಗಳನ್ನು ಅಚ್ಛಿದ್ರವಾಗಿ ಧಾರಣ ಮಾಡುತ್ತಾ ಬಂದಿದ್ದಾರೆ. ಉಡುಪಿಯಲ್ಲಿ ಶ್ರೀಕೃಷ್ಣಾರ್ಚಕರಾದ ಅಷ್ಟಮಠಾಧಿಪತಿಗಳು ಘಟ್ಟದ ಮೇಲಿರುವ ರಘೂತ್ತಮ ಶ್ರೀಪಾದ ಮಠದ ಅಧಿಪತಿಗಳಾದ ಯತಿಗಳು - ಶ್ರೀವಿಜಯೀಂದ್ರಶ್ರೀಪಾದ ಮಠದ ಯತಿಗಳು ವ್ಯಾಸರಾಜಮಠದ ಯತಿಗಳು ಮತ್ತು ಈ ಮಠದ ಸಂಪ್ರದಾಯಸ್ಥರು ಹಣೆಯಮೇಲೆ ಬಿಟ್ಟು ಬೇರೆ ಯಾವ ನಾಮಗಳನ್ನೂ = ಪುಂಡ್ರಗಳನ್ನೂ ಸಚ್ಛಿದ್ರವಾಗಿ ಧರಿಸಿಲ್ಲ. ಸಜ್ಜನರ ಆಚಾರವೂ ಒಂದು ಪ್ರಮಾಣವೇ ಆಗಿರುತ್ತದೆ. ಆದ್ದರಿಂದ ಸಜ್ಜನರ ಆಚಾರವು

ಪ್ರಮಾಣಕ್ಕಿಂತಲೂ ಪ್ರಬಲವಾದ್ದರಿಂದ ಸಜ್ಜನರ ಆಚಾರವನ್ನೇ ನಾವು ಅವಲಂಬಿಸಬೇಕು.

ಒಟ್ಟಿನಲ್ಲಿ ಹೇಳುವುದಾದರೆ ಹಣೆಯಲ್ಲಿ ಧರಿಸುವ ಪುಂಡ್ರವನ್ನು = ನಾಮವನ್ನು ಮಾತ್ರ ಸಚ್ಛಿದ್ರವಾಗಿ ಧರಿಸಿ, ಉಳಿದ ನಾಮಗಳನ್ನು ಅಚ್ಛಿದ್ರವಾಗಿ ಧಾರಣ ಮಾಡಬೇಕು.

**234. ನಾವು ಪ್ರತಿನಿತ್ಯ ಹಣೆಯಲ್ಲಿ ನಾಮವನ್ನು ಧಾರಣ ಮಾಡುವಾಗ ಎರಡು ರೇಖೆಗಳು ಬರುವಂತೆ ಧಾರಣಮಾಡುತ್ತೇವೆ. ಈ ವಿಷಯಕ್ಕೆ ಪ್ರಮಾಣವೇನು?**

ಉ. **"ದ್ವಿರೇಖಮೂರ್ಧ್ವಪುಂಡ್ರಂ ಚ ಕರೋತಿ"**
**ಇತಿ ಸೃಗಾಲೋಪನಿಷದ್ವಾಕ್ಯಾಂತರಮ್ । ತಸ್ಯಾರ್ಥಃ**

ಊರ್ಧ್ವಪುಂಡ್ರಂ ಊರ್ಧ್ವಭಾಗಂ ಲಲಾಟಸಂಬಂಧಿ ಊರ್ಧ್ವಪುಂಡ್ರಂ ಚ ಊರ್ಧ್ವಪುಂಡ್ರಮೇವ ದ್ವಿರೇಖಂ ಕರೋತಿ ಕುರ್ಯಾತ್''। ಎಂದು ಹೇಳಿದಂತೆ ಹಣೆಯಲ್ಲಿ ಮಾತ್ರ ಊರ್ಧ್ವಪುಂಡ್ರವನ್ನು ಧಾರಣ ಮಾಡುವಾಗ ಎರಡು ಗೆರೆಗಳು ಬರುವಂತೆ ಧಾರಣ ಮಾಡಬೇಕು. ಎಂದು ಸೃಗಾಲೋಪನಿಷದ್ವಾಕ್ಯದಿಂದ ತಿಳಿದು ಬರುತ್ತದೆ.

# ಯತಿಗಳು

**235. ಯಾವುದೇ ಪೀಠಾಧಿಪತಿಗಳ ಅಮೃತಹಸ್ತದಿಂದ ಯಾವುದಾದರೂ ಹಣ್ಣು ಮತ್ತು ಮಂತ್ರಾಕ್ಷತೆಯನ್ನು ಶಿಷ್ಯನೇ ಆಗಲಿ, ಭಕ್ತರೇ ಆಗಲಿ ತೆಗೆದುಕೊಂಡಾಗ "ಫಲಮಂತ್ರಾಕ್ಷತೆ" ಎಂದು ವ್ಯವಹರಿಸಬಹುದು. ಆದರೆ ಕಲ್ಲುಸಕ್ಕರೆ ಮಂತ್ರಾಕ್ಷತೆಯನ್ನು ತೆಗೆದುಕೊಂಡಾಗ ಫಲಮಂತ್ರಾಕ್ಷತೆ ಎಂದು ಹೇಗೆ ವ್ಯವಹರಿಸಬೇಕು?**

ಉ. **(ಕೃ.ಸ್ಮೃ. ಕಾ. ಪ್ರ. ಕನ್ನಡ ಪುಟ ೪೪೫-೪೪೬)**
**"ಇಕ್ಷುರ್ವಿಕಾರಸ್ತಸ್ಯ ಸ್ಯುಃ ಯಾವಂತಃ ಕೇವಲಸ್ಯ ಚ ।**
**ಖರ್ಜೂರಂ ನಾರಿಕೇಲಂ ಚ ಪ್ರಿಯಾಲಪನಸಾದಿಕಮ್ ॥**
**ಆಮ್ರಂ ಚ ಕದಲೀ ದ್ರಾಕ್ಷಾ ಕ್ಷೀರಂ ದಧಿ ಘೃತಂ ತಥಾ ।**

**ಅನಿಷಿದ್ಧಾನಿ ಮೂಲಾನಿ ತಥಾ ಕಂದಾದಿಕಂ ಚ ಯತ್ ॥**
**ವಿನೋದಕೇನ ಯತ್ ಪಕ್ವಂ ಧಾನ್ಯಂ ಯಚ್ಚ ಘೃತಾದಿಕಮ್ ।**
**ಏತಾನಿ ಫಲಸಂಜ್ಞಾನಿ ಯೋಽತ್ಯಶಕ್ತೋ ದಿನೇ ಮಮ ॥**
**ಪಾದಶೋಽಶ್ನಾತಿ ಯಸ್ತೃಪ್ತೇಃ ಸಂಪೂರ್ಣಂ ತತ್ಫಲಂ ಲಭೇತ್ ।"**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ - ಕಬ್ಬು, ಕೇವಲ ಕಬ್ಬಿನ ವಿಕಾರಗಳಾದ ಬೆಲ್ಲ, ಸಕ್ಕರೆ, ಕಲ್ಲುಸಕ್ಕರೆ ಮುಂತಾದವುಗಳು ಎಷ್ಟು ಇವೆಯೇ ಅವೆಲ್ಲವೂ, ಉತ್ತತ್ತಿ, ತೆಂಗಿನಕಾಯಿ, ಮೊರಟೆ ಹಣ್ಣು, ಹಲಸಿನ ಹಣ್ಣು ಮಾವಿನ ಹಣ್ಣು, ಬಾಳೇಹಣ್ಣು, ದ್ರಾಕ್ಷಿ, ಹಾಲು, ಮೊಸರು, ತುಪ್ಪ, ನಿಷಿದ್ಧವಲ್ಲದ ಗಡ್ಡೆಗೆಣಸುಗಳು, ನೀರು ಸೇರಿಸದೇ ಪಕ್ವವಾದ ಧಾನ್ಯ ಅಂದರೆ ಹುರಿಗಡಲೆ ಹಿಟ್ಟು ಮುಂತಾದವುಗಳು ಇವುಗಳೆಲ್ಲವೂ ಹಣ್ಣು ಅಂದರೆ ಫಲ ಎಂಬ ಹೆಸರನ್ನು ಹೊಂದಿರುತ್ತವೆ ಎಂದು ಹೇಳಿರುವುದರಿಂದ ಕಲ್ಲುಸಕ್ಕರೆಯು ಕೂಡ ಫಲ ಎಂಬ ಸಂಜ್ಞೆಯನ್ನು ಹೊಂದಿರುವುದಿಂದ,, ಯಾವುದೇ ಪೀಠಾಧಿಪತಿಗಳ ಅಮೃತಹಸ್ತದಿಂದ ನಾವು ಕಲ್ಲುಸಕ್ಕರೆ ಮಂತ್ರಾಕ್ಷತೆಯನ್ನು ಸ್ವೀಕರಿಸಿದಾಗ ''ಫಲಮಂತ್ರಾಕ್ಷತೆ'' ಎಂದು ವ್ಯವಹರಿಸಲು ಯಾವ ಅಡ್ಡಿಯೂ ಇಲ್ಲವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

**236. ಶ್ರೀವಾದೀಂದ್ರತೀರ್ಥಕೃತ ಗುರುಗುಣಸ್ತವನದಲ್ಲಿ ಎಷ್ಟು ಶ್ಲೋಕಗಳಿವೆ?**

ಉ. ಶ್ರೀಧೀರೇಂದ್ರತೀರ್ಥರು ಪೂರ್ವಾಶ್ರಮದಲ್ಲಿ ಗುರುಗುಣಸ್ತವನಕ್ಕೆ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಅವರ ಪೂರ್ವಾಶ್ರಮದ ಹೆಸರು ಶ್ರೀ ಜಯರಾಮಾಚಾರ್ಯರು. ಅವರು ತಮ್ಮ ಗುರುಗುಣಸ್ತವನ ವ್ಯಾಖ್ಯಾನದ ಆರಂಭದಲ್ಲಿ ತಚ್ಛಿಷ್ಯೋ ಜಯರಾಮನಾಮಕಸುಧೀಃ ಸಚ್ಛ್ರಗ್ಧರಾವೃತ್ತ-ಷಟ್‌ತ್ರಿಂಶತ್ಪದ್ಯಮಯೀಂ ಗುರೋಃ ಗುಣನುತಿಂ ವ್ಯಾಕರ್ತುಮುತ್ಕಂಠತೇ ಎಂದು ಹೇಳಿದಂತೆ ಗುರುಗುಣಸ್ತವನದಲ್ಲಿ ಒಟ್ಟು ೩೬ ಪದ್ಯಗಳು (ಶ್ಲೋಕಗಳು) ಇರುತ್ತವೆ.

**237. ಶ್ರೀಮದಾಚಾರ್ಯರು ಒಟ್ಟು ೩೭ ಗ್ರಂಥಗಳನ್ನು ರಚಿಸಿದ್ದಾರೆಂದು ಬಹುಜನರು ಹೇಳುತ್ತಾರೆ. ಆದರೆ ಕೆಲವರು ಮಾತ್ರ ೩೭ಕ್ಕಿಂತಲೂ ಇನ್ನೂ ಹೆಚ್ಚು ಗ್ರಂಥಗಳನ್ನು ಮಾಡಿದ್ದಾರೆಂದು ಹೇಳುತ್ತಾರೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಉ. ಮುನಿತ್ರಯರಲ್ಲಿ ಒಬ್ಬರಾದ ಶ್ರೀವ್ಯಾಸರಾಜರು ತಾವು ರಚಿಸಿರುವ ಗ್ರಂಥಮಾಲಿಕಾಸ್ತೋತ್ರದಲ್ಲಿ " ಗ್ರಂಥಾನ್ ಮಧ್ವಶ್ಚಕಾರಾಸೌ ಸಪ್ತತ್ರಿಂಶದಮಂದಧೀಃ'' ಎಂದು ಹೇಳಿರುವುದರಿಂದ ಶ್ರೀಮದಾಚಾರ್ಯರು ಒಟ್ಟು 37 ಗ್ರಂಥಗಳನ್ನು ರಚಿಸಿರುತ್ತಾರೆಂದು ಸ್ಪಷ್ಟವಾಗುತ್ತದೆ. ಅದನ್ನು ಎಲ್ಲರೂ ಒಪ್ಪಿರುತ್ತಾರೆ. ಇದಲ್ಲದೇ ಅದೇ ಗ್ರಂಥಮಾಲಿಕಾ ಸ್ತೋತ್ರದಲ್ಲಿ "ತ್ರಿಂಶತ್ಸಹಸ್ರಂ ಅಧಿಕಂ ದ್ವ್ಯಧಿಕಂ ಕೃಷ್ಣತುಷ್ಟಿದಂ'' ಎಂಬ ಶ್ಲೋಕದಿಂದ ಶ್ರೀಮದಾಚಾರ್ಯರು ರಚಿಸಿರುವ ಸರ್ವಮೂಲಗ್ರಂಥವೆಂದು ಪ್ರಸಿದ್ಧವಾದ 37 ಕೃತಿಗಳ 32 ಸಾವಿರ ಗ್ರಂಥಾತ್ಮಕವಾಗಿದೆ ಎಂದು ಹೇಳಿದ್ದಾರೆ. 32 ಅಕ್ಷರಗಳಿಗೆ ಒಂದು ಗ್ರಂಥವೆಂಬ ಲೆಕ್ಕದ ಪ್ರಕಾರ 32 ಸಾವಿರವನ್ನು 32 ರಿಂದ ಗುಣಿಸಿದಾಗ ಬರುವ ಗುಣಲಬ್ಧವು, 10 ಲಕ್ಷದ 24 ಸಾವಿರವಾಗುತ್ತದೆ. ಹೀಗಾಗಿ ಶ್ರೀಮದಾಚಾರ್ಯರು ರಚಿಸಿರುವ 37 ಗ್ರಂಥಗಳಲ್ಲಿ ಒಟ್ಟು 10 ಲಕ್ಷದ 24 ಸಾವಿರ ಅಕ್ಷರಗಳು ಇವೆ ಎಂದು ಶ್ರೀವ್ಯಾಸರಾಜರು ಹೇಳಿರುತ್ತಾರೆ. ಈ ಅಕ್ಷರ ಸಂಖ್ಯೆಯು ಶ್ರೀಮದಾಚಾರ್ಯರು ಒಟ್ಟು 37 ಗ್ರಂಥಗಳನ್ನು ರಚಿಸಿರುತ್ತಾರೆಂದು ಹೇಳಿದರೆ ಮಾತ್ರ ಹೊಂದುತ್ತದೆ. ಇಲ್ಲದಿದ್ದರೆ ಹೊಂದುವುದಿಲ್ಲವಾದಕಾರಣ, ಶ್ರೀಮದಾಚಾರ್ಯರು ಒಟ್ಟು 37 ಗ್ರಂಥಗಳನ್ನು ರಚಿಸಿದ್ದಾರೆಂದು ನಮ್ಮ ಅಭಿಪ್ರಾಯ. ಇದಲ್ಲದೆ, ಅನೇಕ ದಾಸರುಗಳೂ ಸಹ ತಮ್ಮ ಕೃತಿಯಲ್ಲಿ ಶ್ರೀಮದಾಚಾರ್ಯರು 37 ಗ್ರಂಥಗಳನ್ನು ರಚಿಸಿರುತ್ತಾರೆ ಎಂದು ಹೇಳಿದ್ದಾರೆ.

**238. ಶ್ರೀಮದಾಚಾರ್ಯರ ಪ್ರಥಮ ಕೃತಿ ಯಾವುದು?**

ಉ. **"ಗೀತಾಭಾಷ್ಯಂ ಚಕಾರಾಸೌ ಪ್ರಥಮಂ ತುಷ್ಟಿದಂ ಹರೇಃ"**

ಎಂದು ಶ್ರೀವ್ಯಾಸರಾಜರು ಗ್ರಂಥಮಾಲಿಕಾಸ್ತೋತ್ರದಲ್ಲಿ ಹೇಳಿದಂತೆ ಗೀತಾಭಾಷ್ಯವು ಶ್ರೀಮದಾಚಾರ್ಯರ ಪ್ರಥಮ ಕೃತಿ.

**239. ಶ್ರೀಟೀಕಾಚಾರ್ಯರು ಸನ್ಯಸ್ತರಾದ ಮೇಲೆ ಕೇಲೀಗೃಹದಲ್ಲಿ ಪ್ರವೇಶಿದ ಬಗ್ಗೆ ಕ್ಷುಲ್ಲಕವಾದ ಆಕ್ಷೇಪವೇನು? ಸಮಾಧಾನವೇನು?**

ಉ. ಸರ್ವಸಂಗಪರಿತ್ಯಾಗ ಮಾಡಿದ ಸಂನ್ಯಾಸಿಗಳಿಗೆ ಕೇಲೀಗೃಹ ಪ್ರವೇಶವು

ಅತ್ಯಂತ ನಿಷಿದ್ಧವಾಗಿದ್ದು ಹೀಗಿದ್ದರೂ ಶ್ರೀಟೀಕಾಚಾರ್ಯರು ಸನ್ಯಸ್ತರಾದ ಮೇಲೆ ಕೇಲೀಗೃಹವನ್ನು ಪ್ರವೇಶಿಸಿದ್ದು ತಪ್ಪಲ್ಲವೇ? ಎಂಬ ಕ್ಷುದ್ರವಾದ ಆಕ್ಷೇಪವು ಮೇಲ್ನೋಟದಲ್ಲಿ ಬರುತ್ತದೆ. ಆದರೆ ರಾಘವೇಂದ್ರವಿಜಯದ ವ್ಯಾಖ್ಯಾನಕಾರರಾದ ರಾಮಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ

ಇತಃ ಪರಂ ಪ್ರಣವೋಪದೇಶಃ ಕರ್ತವ್ಯ ಇತಿ ಸ್ಥಿತೇ ತದೀಯಾಃ ಸಾದೀಶಪುತ್ರಸಂಬಂಧಿನಃ ಪಿತ್ರಾದಯಃ ರುಷಿತಾಃ ಕುಪಿತಾಃ ಸಂತಃ ಸರ್ವಾನ್ ಶಪ್ತ್ವಾ ಪುತ್ರಂ ಗೃಹೀತ್ವಾ ಪುರೀಂ ಸ್ವಪುರೀಮ್। ನಿನ್ಯುಃ ಪ್ರಾಪಿತವಂತಃ ರಾತ್ರೌ ಕೇಲೀಗೃಹಮಪಿ। ಪ್ರಾಪಿತವಂತ ಇತಿ ಯೋಜ್ಯಮ್॥ ತತ್ರ ಕೇಲೀಗೃಹೇ ಸಂಭೋಗಾರ್ಥಂ ಗಚ್ಛತಾ ಭಾರ್ಯಾಜನೇನ ಭಾರ್ಯಾಸಹಿತಸರ್ವಜನೇನೇತಿ ವಾ । ಶೇಷವೇಷಃ ಶೇಷಾಕಾರತಯಾ। ಸಃ ಅಯಂ ದೃಷ್ಟಃ। ಸರ್ವೇಽಪಿ ಭೀತಾ ಇತಿ ಭಾವಃ॥

ಎಂದು ಹೇಳಿರುವಂತೆ ಶ್ರೀಟೀಕಾಚಾರ್ಯರು ಸಂನ್ಯಸ್ತರಾದ ಮೇಲೆ ಕೇಲೀಗೃಹವನ್ನು ಪ್ರವೇಶಿಸುವಾಗ ಅವರಿಗೆ ಅವರ ಗುರುಗಳಾದ ಶ್ರೀಅಕ್ಷೋಭ್ಯತೀರ್ಥರಿಂದ ಪ್ರಣವೋಪದೇಶವು ಆಗಿರಲಿಲ್ಲ. ಆದ್ದರಿಂದ ಯಾವ ಕ್ಷುದ್ರವಾದ ಆಕ್ಷೇಪಕ್ಕೂ ಅವಕಾಶವಿಲ್ಲವೆಂಬುದು ಸಮಾಧಾನ.

**240. ಶ್ರೀವ್ಯಾಸರಾಜರು ಒಟ್ಟು ಎಷ್ಟು ಪ್ರಾಣದೇವರ ಮೂರ್ತಿಗಳನ್ನು ಪ್ರತಿಷ್ಠಾಪನೆ ಮಾಡಿರುತ್ತಾರೆ?**

ಉ. "ದ್ವಾತ್ರಿಂಶತ್ಸಪ್ತಶತಕಮೂರ್ತೀಃ ಹನೂಮತಃ ಪ್ರಭೋಃ ಪ್ರತಿಷ್ಠಾತಾ" ಎಂದು ಶ್ರೀವಿಜಯೀಂದ್ರತೀರ್ಥರು ತಾವು ರಚಿಸಿರುವ ಶ್ರೀವ್ಯಾಸರಾಜರ ಸ್ತೋತ್ರದಲ್ಲಿ ಹೇಳಿದಂತೆ ಶ್ರೀವ್ಯಾಸರಾಜರು ಒಟ್ಟು ೭೩೨ ಪ್ರಾಣದೇವರ ಮೂರ್ತಿಗಳನ್ನು ಅಲ್ಲಲ್ಲಿ ಪ್ರತಿಷ್ಠಾಪನೆ ಮಾಡಿರುತ್ತಾರೆ.

**241. ಮಂತ್ರಾಲಯದಲ್ಲಿ ಯಾರ ಯಾರ ಬೃಂದಾವನಗಳಿವೆ?**

ಉ. 1. ಶ್ರೀ ರಾಘವೇಂದ್ರತೀರ್ಥರು, 2. ಶ್ರೀ ವಾದೀಂದ್ರತೀರ್ಥರು, 3. ಶ್ರೀಸುಧರ್ಮೇಂದ್ರತೀರ್ಥರು, 4. ಶ್ರೀಸುವ್ರತೀಂದ್ರತೀರ್ಥರು, 5. ಶ್ರೀಸುಯಮೀಂದ್ರತೀರ್ಥರು, 6. ಶ್ರೀಸುಜಯೀಂದ್ರತೀರ್ಥರು 7. ಶ್ರೀ ಸುಶಮೀಂದ್ರತೀರ್ಥರು

**242. ಶ್ರೀಸುಜಯೀಂದ್ರತೀರ್ಥರ ಪೂರ್ವಾಶ್ರಮದ ಹೆಸರು?**

ಉ. ಶ್ರೀ ರಾಜಾ. ವೇಂಕಟರಾಘವೇಂದ್ರಾಚಾರ್ಯರು

**243. 104 ಸ್ವತಂತ್ರ ಗ್ರಂಥಗಳನ್ನು ಬರೆದವರು ಯಾರು?**

ಉ. ಶ್ರೀವಿಜಯೀಂದ್ರತೀರ್ಥರು

**244. ಉಪವಾಸದಿಂದ 3 ಸಲ ಭೂಪ್ರದಕ್ಷಿಣೆ ಮಾಡಿದ ಯತಿಗಳು?**

ಉ. ಶ್ರೀಸುರೇಂದ್ರತೀರ್ಥರು

**245. ಶ್ರೀ ರಾಯರು ಬೃಂದಾವನ ಪ್ರವೇಶ ಮಾಡಿದ್ದು ಯಾವಾಗ?**

ಉ. ಶ್ರಾವಣ - ಬಹುಳ - ಬಿದಿಗೆ - 1671

**246. ಶ್ರೀ ಮಧ್ವಾಚಾರ್ಯರು ರಚಿಸಿದ ಬ್ರಹ್ಮಸೂತ್ರ ಭಾಷ್ಯದ ಸಂಖ್ಯೆ?**

ಉ. 22ನೇ ಭಾಷ್ಯ

**247. ಮಧ್ವಮತದಲ್ಲಿ ಮುನಿತ್ರಯರು ಯಾರು?**

ಉ. 1. ಶ್ರೀ ಮಧ್ವಾಚಾರ್ಯರು 2. ಶ್ರೀ ಜಯತೀರ್ಥರು 3. ಶ್ರೀವ್ಯಾಸರಾಜರು

**248. ಪುರಂದರದಾಸರಿಗೆ ಮಂತ್ರೋಪದೇಶವನ್ನು ಯಾರು ಮಾಡಿದರು?**

ಉ. ಶ್ರೀವಿಜಯೀಂದ್ರತೀರ್ಥರು

**249. ನಮ್ಮ ಮಠದಲ್ಲಿ 64 ವಿದ್ಯೆಗಳಲ್ಲಿ ಪಾರಂಗತರಾದ ಯತಿಗಳು?**

ಉ. ಶ್ರೀವ್ಯಾಸರಾಜರು

**250. ಸುಧೆಯನ್ನು ರಚಿಸಿದವರು - ಪರಿಮಳವನ್ನು ರಚಿಸಿದವರು?**

ಉ. ಶ್ರೀ ಜಯತೀರ್ಥರು - ಶ್ರೀ ರಾಘವೇಂದ್ರತೀರ್ಥರು

**251. ಆಚಾರ್ಯರು ರಚಿಸಿದ ಗ್ರಂಥಗಳ ಸಂಖ್ಯೆ ಎಷ್ಟು? ಅವುಗಳ ಹೆಸರೇನು?**

ಉ. ಗ್ರಂಥಗಳ ಸಂಖ್ಯೆ - 37, "ಸರ್ವಮೂಲ"

**252. "ಧೀರವೇಣುಗೋಪಾಲ" ಯಾರ ಅಂಕಿತ?**

ಉ. ಶ್ರೀರಾಘವೇಂದ್ರತೀರ್ಥರ

**253. ಶ್ರೀರಾಯರಿಗೆ ಆಶ್ರಮವಾದ ಸ್ಥಳ ಯಾವುದು?**

ಉ. ತಂಜಾವೂರು

**254. ರಾಯರ ಸ್ತೋತ್ರವನ್ನು ರಚಿಸಿದವರು ಯಾರು?**

ಉ. ಶ್ರೀಅಪ್ಪಣಾಚಾರ್ಯರು

**255. ಶ್ರೀ ರಾಯರಿಗೆ ಆಶ್ರಮವಾದ ಇಸ್ವಿ ಯಾವುದು?**

ಉ. 1621

**256. ಶ್ರೀ ರಾಯರಿಗೆ ಯಾವ ಮಾಸ ತಿಥಿಯಲ್ಲಿ ಪಟ್ಟಾಭಿಷೇಕವಾಗಿದೆ?**

ಉ. ಫಾಲ್ಗುಣ - ಶುದ್ಧ - ದ್ವಿತೀಯಾ

**257. ಶ್ರೀ ಮದಾಚಾರ್ಯರು ಎಷ್ಟು ವರ್ಷ ಕಣ್ಣಿಗೆ ಕಾಣಿಸಿ ಕೊಂಡಿದ್ದರು?**

ಉ. 79 ವರ್ಷ

**258. ಹಂಸನಾಮಕ ಪರಮಾತ್ಮನಿಂದ ಶ್ರೀ ಮದಾಚಾರ್ಯರು ಎಷ್ಟನೇ ಯತಿಗಳು?**

ಉ. 16ನೇ ಯತಿಗಳು

**259. ಹಂಸನಾಮಕ ಪರಮಾತ್ಮನಿಂದ ಶ್ರೀ ರಾಯರು ಎಷ್ಟನೇ ಯತಿಗಳು?**

ಉ. 32ನೇ ಯತಿಗಳು

# ಹರಿದಾಸ ಸಾಹಿತ್ಯ

**260. ಭಾಗಣ್ಣದಾಸರೆಂದು ಯಾರನ್ನು ಕರೆಯುವರು?**

ಉ. ಶ್ರೀಗೋಪಾಲದಾಸರನ್ನು

**261."ಕೂಸೀಮಗದಾಸ" ಎಂದು ಯಾರನ್ನು ಕರೆಯುವರು?**

ಉ. ಶ್ರೀವಿಜಯದಾಸರನ್ನು

**262. ದಾಸರ ಪದ ಪದ್ಯ ಮುಂತಾದವುಗಳಿಗೆ ಪ್ರಾಮಾಣ್ಯವು ಹೇಗೆ?**

ಉ. ಶ್ರೀಮನ್ನ್ಯಾಯಸುಧಾ :- ''ಕ್ವಚಿದೇಕಧಾ। ಯಥಾಽಪ್ತಿಮೂಲತಯಾ ಲೌಕಿಕವಿಷಯೇ ಪಿತೃವಾಕ್ಯೇ । ಶ್ರುತಿಸಂವಾದೇನ ಧರ್ಮಾದಿವಿಷಯೇ ಪ್ರತಿವಾದ್ಯುದೀರಿತವಚನೇ। ತದುಕ್ತ ಏವ ಪರ್ವತೋಽಗ್ನಿಮಾನಿತಿ ವಾಕ್ಯೇ ಯುಕ್ತಿಸಂವಾದೇನ । ಕ್ವಚಿದ್‌ದ್ವೇಧಾ । ಯಥಾಽಽಪ್ತಿಶ್ರುತಿಭ್ಯಾಂ ಮನ್ವಾದಿವಾಕ್ಯೇ ಆಪ್ತಿಯುಕ್ತಿಭ್ಯಾಂ ಪರ್ವತೋಽಗ್ನಿಮಾನಿತ್ಯಾದೌ ಪಿತೃವಾಕ್ಯೇ । ಶ್ರುತಿಯುಕ್ತಿಭ್ಯಾಂ ಈಶ್ವರಃ ಸರ್ವಜ್ಞ ಇತಿ ಪ್ರತಿವಾದ್ಯುದೀರಿತವಚಸೀತಿ। ಜೈಮಿನ್ಯಾದಿವಾಕ್ಯೇ ತ್ರೇಧಾಽಪ್ಯಸ್ತೀತ್ತಿ ಚೇತ್ । ಸತ್ಯಂ । ಯಥಾ ಬ್ರಹ್ಮಸೂತ್ರೇಷು ನ ತಥಾ। ನಿರವಧಿಕಂ ಹಿ ತತ್ರಾಪ್ತ್ಯಾದಿಕಮ್।''

ಅಂದರೆ ಆಪ್ತಿಮೂಲಕತ್ವೇನ ಪ್ರಾಮಾಣ್ಯ ಶ್ರುತಿಮೂಲಕತ್ವೇನ ಪ್ರಾಮಾಣ್ಯ - ಯುಕ್ತಿಮೂಲಕತ್ವೇನ ಪ್ರಾಮಾಣ್ಯವೆಂದು ಪ್ರಾಮಾಣ್ಯವು ಮೂರುವಿಧವಾಗಿದೆ. ಅವುಗಳ ಪೈಕಿ.

1. ಕೆಲವು ವಾಕ್ಯಗಳಲ್ಲಿ ಒಂದೇ ವಿಧವಾದ ಪ್ರಾಮಾಣ್ಯವಿರುತ್ತದೆ. ಉದಾಹರಣೆಗೆ " ಸಾಧ್ವಿದಂ ಭುಂಕ್ಷ್ವ = ಚೆನ್ನಾಗಿದೆ ಇದನ್ನು ತಿನ್ನು ಎಂದು ಮಗನಿಗೆ ತಿಳಿಸಹೊರಟಿರುವ ಲೌಕಿಕ ವಿಷಯವಾದ ತಂದೆಯ ವಾಕ್ಯದಲ್ಲಿ ಮಗನಿಗೆ ತಂದೆಯು ಆಪ್ತನಾದಕಾರಣ ಒಂದೇ ವಿಧವಾದ ಪ್ರಾಮಾಣ್ಯವು ಅಂದರೆ 'ಆಪ್ತಿಮೂಲಕತ್ವೇನ ಪ್ರಾಮಾಣ್ಯವು' ಇರುತ್ತದೆ.

2. ಧರ್ಮಾದಿ ಅದೃಷ್ಟವಿಷಯಗಳ ಬಗ್ಗೆ ಹೇಳಿರುವ ಪ್ರತಿವಾದಿಯ ವಾಕ್ಯದಲ್ಲಿ ಉದಾಹರಣೆಗೆ "ಜ್ಯೋತಿಷ್ಟೋಮಃ ಸ್ವರ್ಗಸಾಧಮ್= ಜ್ಯೋತಿಷ್ಟೋಮ ಯಾಗವು ಸ್ವರ್ಗಕ್ಕೆ ಸಾಧನವೆಂಬ ವಾಕ್ಯದಲ್ಲಿ ಒಂದೇ ವಿಧವಾದ ಪ್ರಾಮಾಣ್ಯವು ಅಂದರೆ ಶ್ರುತಿಮೂಲಕತ್ವೇನ ಪ್ರಾಮಾಣ್ಯವು ಇದೆ.

3. ಇದರಂತೆ ಉದಾಹರಣೆಗೆ ಪರ್ವತಃ ಅಗ್ನಿಮಾನ್ ಧೂಮಾತ್=ಹೊಗೆ ಇರುವುದರಿಂದ ಪರ್ವತವು ಅಗ್ನಿವುಳ್ಳದ್ದು ಎಂದು ಪ್ರತಿವಾದಿಯು ಹೇಳಿದ ವಾಕ್ಯದಲ್ಲಿ ಒಂದೇ ವಿಧವಾದ ಪ್ರಮಾಣ್ಯವು ಅಂದರೆ ಯುಕ್ತಿಮೂಲಕತ್ವೇನ ಪ್ರಾಮಾಣ್ಯವು ಇರುತ್ತದೆ.

4. ಇನ್ನು ಕೆಲವು ಕಡೆ ಎರಡು ವಿಧವಾದ ಪ್ರಾಮಾಣ್ಯವಿರುತ್ತದೆ. ಉದಾಹರಣೆಗೆ ಮನುಋಷಿಗಳೇ ಮೊದಲಾದವರುಗಳ ವಾಕ್ಯದಲ್ಲಿ ಎರಡು ವಿಧವಾದ ಪ್ರಾಮಾಣ್ಯವು ಅಂದರೆ ಆಪ್ತಿಮೂಲಕತ್ವೇನ ಪ್ರಾಮಾಣ್ಯ ಮತ್ತು ಶ್ರುತಿಮೂಲಕತ್ವೇನ ಪ್ರಾಮಾಣ್ಯವಿರುತ್ತದೆ.

5. ಇದರಂತೆ ಉದಾಹರಣೆಗೆ ಪರ್ವತಃ ಅಗ್ನಿಮಾನ್ ಧೂಮಾತ್ ಎಂದು ಮಗನನ್ನು ಕುರಿತು ಹೇಳಿದ ತಂದೆಯ ವಾಕ್ಯದಲ್ಲಿ ಎರಡು ವಿಧವಾದ ಪ್ರಾಮಾಣ್ಯವು ಅಂದರೆ ಮಗನಿಗೆ ತಂದೆಯು ಆಪ್ತನಾದಕಾರಣ ಆಪ್ತಿಮೂಲಕತ್ವೇನ ಪ್ರಾಮಾಣ್ಯ ಮತ್ತು ಯುಕ್ತಿಮೂಲಕತ್ವೇನ ಪ್ರಾಮಾಣ್ಯವು ಇರುತ್ತದೆ.

6. ಇದರಂತೆ ಉದಾಹರಣೆಗೆ "ಈಶ್ವರಃ ಸರ್ವಜ್ಞಃ=ಈಶ್ವರನು ಸರ್ವಜ್ಞನು ಎಂದು ಪ್ರತಿವಾದಿಯು ಹೇಳಿದ ವಾಕ್ಯದಲ್ಲಿ ಎರಡು ವಿಧವಾದ

ಪ್ರಾಮಾಣ್ಯವು ಅಂದರೆ ಶ್ರುತಿಮೂಲಕತ್ವೇನ ಪ್ರಾಮಾಣ್ಯ ಮತ್ತು ಯುಕ್ತಿಮೂಲಕತ್ವೇನ ಪ್ರಾಮಾಣ್ಯವು ಇರುತ್ತದೆ.

7. ಇನ್ನು ಜೈಮಿನಿ ಋಷಿಗಳೇ ಮೊದಲಾದವರುಗಳ ವಾಕ್ಯದಲ್ಲಿ ಮೂರುವಿಧವಾದ ಪ್ರಾಮಾಣ್ಯವು ಅಂದರೆ ಆಪ್ತಿಮೂಲಕತ್ವೇನ ಪ್ರಾಮಾಣ್ಯ-ಶ್ರುತಿಮೂಲಕತ್ವೇನ ಪ್ರಾಮಾಣ್ಯ - ಯುಕ್ತಿಮೂಲಕತ್ವೇನ ಪ್ರಾಮಾಣ್ಯವು ಇರುವುದರಿಂದ ಬ್ರಹ್ಮಸೂತ್ರಗಳಲ್ಲಿ ಮಾತ್ರ ಮೂರು ವಿಧವಾದ ಪ್ರಾಮಾಣ್ಯವಿದೆ. ಆದ್ದರಿಂದ ಬ್ರಹ್ಮಸೂತ್ರಗಳ ಪ್ರಾಮಾಣ್ಯವು ಅನುತ್ತಮವೆನಿಸುವುದು ಎಂಬುದು ಹೇಗೆ? ಎಂಬ ಆಕ್ಷೇಪಕ್ಕೆ ಸಮಾಧಾನವೇನೆಂದರೆ :- ಬ್ರಹ್ಮಸೂತ್ರಕಾರರಾದ ಶ್ರೀವೇದವ್ಯಾಸದೇವರಲ್ಲಿ ಇರುವ ಆಪ್ತಿಪದವಾಚ್ಯವಾದ ವಿವಕ್ಷಿತಾರ್ಥತತ್ತ್ವಜ್ಞಾನಾದಿಗಳು ನಿರವಧಿಕವಾದದ್ದು. ಜೈಮಿನ್ಯಾದಿ ಋಷಿಗಳಲ್ಲಿರುವ ವಿವಕ್ಷಿತಾರ್ಥತತ್ತ್ವಜ್ಞಾನಾದಿಗಳು ಸಾವಧಿಕವಾದದ್ದು, ನಿರವಧಿಕ ಆಪ್ತ್ಯಾದಿ ಮೂಲಕತ್ವೇನ ತ್ರಿವಿಧ ಪ್ರಾಮಾಣ್ಯವು ಬ್ರಹ್ಮಸೂತ್ರಗಳಲ್ಲಿವೆ. ಸಾವಧಿಕ ಆಪ್ತ್ಯಾದಿ ಮೂಲಕತ್ವೇನ ತ್ರಿವಿಧ ಪ್ರಾಮಾಣ್ಯವು ಜೈಮಿನ್ಯಾದಿವಾಕ್ಯಗಳಲ್ಲಿದೆ. ಆದ್ದರಿಂದ ಬ್ರಹ್ಮಸೂತ್ರಗಳಲ್ಲಿರುವ ಪ್ರಾಮಾಣ್ಯವು ಅನುತ್ತಮವೆನಿಸುತ್ತದೆ.

ಈ ರೀತಿಯಾಗಿ ಶ್ರೀಮನ್ನ್ಯಾಯಸುಧಾದಲ್ಲಿ ಶ್ರೀಜಯತೀರ್ಥರು ಹೇಳಿರುತ್ತಾರೆ. ಇದನ್ನನುಸರಿಸಿ ಪ್ರಾಚೀನರೂ - ಪ್ರಾಮಾಣಿಕರೂ ದೇವಾಂಶಸಂಭೂತರೂ ಆದ ಶ್ರೀಪುರಂದರದಾಸರು - ಶ್ರೀ ವಿಜಯದಾಸರು - ಶ್ರೀಗೋಪಾಲದಾಸರು - ಶ್ರೀಜಗನ್ನಾಥದಾಸರು - ಶ್ರೀಪ್ರಾಣೇಶದಾಸರು ಇವರುಗಳು ಸರ್ವಸಮ್ಮತರಾದಕಾರಣ ಇವರುಗಳ ವಾಕ್ಯಗಳ ಪೈಕಿ ಸಂದರ್ಭಾನುಸಾರ ಕೆಲವು ವಾಕ್ಯಗಳಲ್ಲಿ ಆಪ್ತಿಮೂಲಕತ್ವೇನ ಪ್ರಾಮಾಣ್ಯವನ್ನು - ಕೆಲವು ವಾಕ್ಯಗಳಲ್ಲಿ ಶ್ರುತಿಮೂಲಕತ್ವೇನ ಪ್ರಾಮಾಣ್ಯವನ್ನು ಕೆಲವು ವಾಕ್ಯಗಳಲ್ಲಿ ಯುಕ್ತಿಮೂಲಕತ್ವೇನ ಪ್ರಾಮಾಣ್ಯವನ್ನೂ ಒಪ್ಪಿ ಒಟ್ಟಿನಲ್ಲಿ ಅವರ ಪದ-ಪದ್ಯ ಮುಂತಾದವುಗಳಿಗೆ ಪ್ರಾಮಾಣ್ಯವನ್ನು ಒಪ್ಪುವುದರಲ್ಲಿ ಯಾವ ಅನುಪಪತ್ತಿಯೂ ಇಲ್ಲವಾದ್ದರಿಂದ ದಾಸರ ಪದ-ಪದ್ಯ ಮುಂತಾದವುಗಳು ಪ್ರಮಾಣವೆಂದು ಸ್ಪಷ್ಟವಾಗಿ ಹೇಳಬಹುದು. ಇಂತಹ ದಾಸರ ಅನೇಕ ವಾಕ್ಯಗಳನ್ನೂ ಯತಿಗಳ ಹಸ್ತೋದಕವನ್ನು ಭುಂಜಿಸಬೇಕು ಎಂಬ ವಿಷಯಕ್ಕೆ ಪ್ರಮಾಣತ್ವೇನ ಈ ಪೂರ್ವದಲ್ಲಿ

ಉದಾಹರಿಸಲಾಗಿವೆ.

**263.ಪದ ಅಥವಾ ಕೀರ್ತನೆ ಎಂದರೇನು?**

ಪಲ್ಲವಿ-ಅನುಪಲ್ಲವಿ-ಚರಣಗಳಿಂದೊಡಗೂಡಿ ತಾಳ-ಲಯಬದ್ಧ ವಾಗಿರುವ ಗೀತೆಯೇ ಪದ ಅಥವಾ ಕೀರ್ತನೆ.

**264. ಹರಿದಾಸ ಸಾಹಿತ್ಯ ಎಂದರೇನು?**

ಉ. ಹರಿಯು ಈಶ ಅವನನ್ನು ಬಿಟ್ಟು ಬೇರೆ ಎಲ್ಲರೂ ಅವನ ದಾಸರು ಎಂದು ತಿಳಿಸುವ. ಅಪರೋಕ್ಷ ಜ್ಞಾನಿಗಳೂ ಉತ್ತಮ ಸಮಾಜ ಸುಧಾರಕರೂ ಭಗವದ್ಭಕ್ತರೂ ಆದ ಮಹಾನ್ ವ್ಯಕ್ತಿಗಳ ಮುಖಾರವಿಂದದಿಂದ ತನ್ನಷ್ಟಕ್ಕೆ ತಾನೇ ಹೋರಹೊಮ್ಮಿರುವ ಪವಿತ್ರವಾದ ವಾಕ್ಪ್ರವಾಹವೇ ಹರಿದಾಸಸಾಹಿತ್ಯ.

**265. ಶ್ರೀಪುರಂದರದಾಸರ ಕೃತಿಗಳಿಗೆ ಪುರಂದರೋಪನಿಷತ್ ಎಂದು ಹೆಸರು ಬರಲು ಕಾರಣವೇನು?**

**ಉ. ಪದಗಳು ಬರೆದ ವಹಿಗಳ ಮುಂಕೊಂಡು**
**ಮಧ್ವಶಾಸ್ತ್ರದಮೇಲೆ ಕುಳಿತಿರಲದ ಕಂಡು**
**ಹದವನರಿಯದ ದಿಂಡೆಯನೊಬ್ಬನು**
**ಪದದ ವಹಿಯನ್ನು ತೆಗೆದು ಬಿಸಾಟನಾಗ**
**ಎರಡಾವರ್ತಿ ಬಿಸಾಡಲಾಗಿ ಅದು**
**ತಿರುಗಿ ಬಂದು ಮೇಲೆ ಕುಳ್ಳಿರಲು**
**ಗುರುವ್ಯಾಸರು ನೋಡಿ ಹರುಷದಿ**
**ಪುರಂದರ ಉಪನಿಷತ್ತೆಂದು ಕರೆದರು.**

ಎಂದು ಈ ಕೃತಿಯಲ್ಲಿ ಹೇಳಿದಂತೆ ಶ್ರೀ ಪುರಂದರದಾಸರು ರಚಿಸಿದ ಪದ ಪದ್ಯಗಳ ಪುಸ್ತಕವನ್ನು ಶ್ರೀವ್ಯಾಸರಾಯರು ಗೌರವದಿಂದ ತಮ್ಮ ವ್ಯಾಸಪೀಠದಲ್ಲಿ ಇತರ ಶಾಸ್ತ್ರ ಗ್ರಂಥಗಳ ಮೇಲೆ ಇಡುತ್ತಿದ್ದರು. ಇದನ್ನು ಸಹಿಸದೇ ಅಂದಿನ ಒಬ್ಬ ಕುಹಕ ವ್ಯಕ್ತಿಯು ಅದನ್ನು ವ್ಯಾಸಪೀಠದಿಂದ ತೆಗೆದು ಎಸೆದನು. ಆದರೆ ಆ ಪುಸ್ತಕವು ಮತ್ತೆ ಹಾರಿ ಬಂದು ವ್ಯಾಸಪೀಠದಲ್ಲಿ ಕೂತಿತು. ಇದನ್ನು ಕಣ್ಣಾರೆ ಕಂಡು ಶ್ರೀವ್ಯಾಸರಾಜರು ಪುರಂದರದಾಸರ ಕೃತಿಸಮುದಾಯಕ್ಕೆ ಪುರಂದರೋಪನಿಷತ್ತೆಂದು ಕರೆದರು.

**266. ಶ್ರೀಪುರಂದರದಾಸರು ರಚಿಸಿದ ಕೀರ್ತನೆಗಳ ಸಂಖ್ಯೆ?**

ಉ. 4,75,000

**267. ಯಾರು ಯಾರಿಗೆ ಎಷ್ಟು ವರ್ಷ ಆಯುಷ್ಯವನ್ನು ದಾನಮಾಡಿದರು?**

ಉ. ಶ್ರೀಗೊಪಾಲದಾಸರು - ಶ್ರೀಜಗನ್ನಾಥದಾಸರಿಗೆ - 40 ವರ್ಷ

**268. ಶ್ರೀವರದೇಂದ್ರಪಂಚರತ್ನಮಾಲಿಕಾಸ್ತೋತ್ರವನ್ನು ರಚಿಸಿದವರು?**

ಉ. ಶ್ರೀಜಗನ್ನಾಥ ದಾಸರು

**269. ಶ್ರೀ ಹರಿಕಥಾಮೃತಸಾರದಲ್ಲಿ ಎಷ್ಟು ಸಂಧಿಗಳಿವೆ?**

ಉ. 32 ಸಂಧಿಗಳು

**270. ರಂಗೋಲಿದಾಸರೆಂದು ಯಾರನ್ನು ಕರೆವರು?**

ಉ. ಶ್ರೀಜಗನ್ನಾಥದಾಸರನ್ನು

**271. ವಿಜಯರಾಯರ ಕವಚವನ್ನು ರಚಿಸಿದವರು?**

ಉ. ಶ್ರೀವ್ಯಾಸವಿಠ್ಠಲರು

**272. ಯಾರು ರಚಿಸಿದ ಕೃತಿಗಳಿಗೆ ಯಾರು "ಉಪನಿಷತ್" ಎಂದು ಕರೆದರು?**

ಉ. ಶ್ರೀಪುರಂದರದಾಸರು ರಚಿಸಿದ ಕೃತಿಗಳಿಗೆ ಶ್ರೀವ್ಯಾಸರಾಜರು ''ಪುರಂದರೋಪನಿಷತ್'' ಎಂದು ಕರೆದರು.

**273. ಕನ್ನಡದಲ್ಲಿ "ತಂತ್ರಸಾರವನ್ನು" ಬರೆದವರು ಹಾಗು ಅದಕ್ಕೆ ಫಲಶ್ರುತಿಯನ್ನು ಬರೆದವರು?**

ಉ. ಶ್ರೀವರದೇಂದ್ರತೀರ್ಥರು, ಶ್ರೀಜಗನ್ನಾಥದಾಸರು

**274. ಶ್ರೀ ಪ್ರಾಣೇಶದಾಸರ ಮೊದಲನೇ ಹೆಸರೇನು?**

ಉ. ಕುಲಕರ್ಣಿ ಯೋಗೀಂದ್ರರಾಯರು

## ಸಾಮಾನ್ಯ-(General)

**275. ವಕಾರ ಪಂಚಕಗಳು ಯಾವುವು? ಅವುಗಳಿಂದೇನು ಲಾಭ?**

ಉ. **ವಸ್ತ್ರೇಣ, ವಪುಷಾ, ವಾಚಾ, ವಿದ್ಯಯಾ, ವಿನಯೇನ ಚ ।
ವಕಾರಪಂಚಕೈರ್ಹೀನೋ ನರೋ ನಾಯಾತಿ ಗೌರವಮ್ ॥**

ಎಂದು ಹೇಳಿದಂತೆ - ವಸ್ತ್ರ ವಪುಸ್ಸು (ದೇಹ), ವಾಕ್ - ವಿದ್ಯೆ ಹಾಗೂ ವಿನಯ ಈ ಐದು ವಕಾರ ಪಂಚಕಗಳು. ಇವುಗಳಿಂದ ಮಾನವನಿಗೆ

ಗೌರವವು ಬರುತ್ತದೆ.

**276. ನಿರಂತರ ದುಃಖವು ಎಲ್ಲಿ ಇರುತ್ತದೆ?**

ಉ. **"ಯತ್ರ ದೇವಸ್ಯ ನಿರ್ಮಾಲ್ಯಂ ವನಿತಾಶ್ಚಾತಿಪೀಡಿತಾಃ।**
**ಅತೃಣಾಃ ಪಶವೋ ಯತ್ರ ತತ್ರ ದುಃಖಂ ನಿರಂತರಮ್ ॥"**

ಎಂದು ಸ್ಮೃತಿಯಲ್ಲಿ ಹೇಳಿದಂತೆ, ಯಾರ ಮನೆಯಲ್ಲಿ ಪ್ರತಿನಿತ್ಯವೂ ನಿರ್ಮಾಲ್ಯ ವಿಸರ್ಜನೆ ಮಾಡಿ ದೇವರ ಪೂಜೆ ಮಾಡುವುದಿಲ್ಲವೋ, ಅಂತಹವರ ಮನೆಯಲ್ಲಿ ಯಾರ ಮನೆಯಲ್ಲಿ ಅನವಶ್ಯಕವಾಗಿ ಹೆಂಗಸರಿಗೆ ಅತಿಪೀಡೆಯನ್ನುಂಟುಮಾಡುತ್ತಾರೋ ಅಂತಹವರ ಮನೆಯಲ್ಲಿ - ಎಲ್ಲಿ ಪಶುಗಳಿಗೆ ಬೇಕಾದ ಮೇವು ಇರುವುದಿಲ್ಲವೋ ಅಂತಹ ಸ್ಥಳದಲ್ಲಿ ನಿರಂತರ ದುಃಖವು ಇರುತ್ತದೆ.

**277. ಬಹಿರ್ದೇಶಕ್ಕೆ ಹೋಗುವಾಗ ತಲೆಗೆ ವಸ್ತ್ರವನ್ನು ಏಕೆ ಸುತ್ತಬೇಕು?**

ಉ. **"ಅನಾವೃತಶಿರಾ ಯಸ್ತು ವಿಣ್ಮೂತ್ರೇ ವಿಸೃಜೇತ್ ದ್ವಿಜಃ।**
**ತಚ್ಛಿರಃ ಶತಧಾ ಭೂಯಾತ್ ಇತಿ ದೇವಾಃ ಶಪಂತಿ ತಮ್ ॥"**

ಎಂದು ಹಾರೀತಸ್ಮೃತಿಯಲ್ಲಿ ಹೇಳಿದಂತೆ, ತಲೆಗೆ ವಸ್ತ್ರವನ್ನು ಸುತ್ತದಲೇ ಮಲ-ಮೂತ್ರ ವಿಸರ್ಜನೆ ಮಾಡಿದರೆ ಅಂತಹ ವ್ಯಕ್ತಿಯ ತಲೆಯು ನೂರು ಹೋಳಾಗಲಿ ಎಂದು ದೇವತೆಗಳು ಶಪಿಸುತ್ತಾರೆ. ಆದ್ದರಿಂದ ಬಹಿರ್ದೇಶಕ್ಕೆ ಹೋಗುವಾಗ ತಲೆಗೆ ವಸ್ತ್ರವನ್ನು ಸುತ್ತಬೇಕು. ಇದು ಪುರುಷರಿಗೆ ಮಾತ್ರ ಅನ್ವಯಿಸುತ್ತದೆ.

**278. ಪ್ರತಿನಿತ್ಯದಲ್ಲೂ ತಿಥಿ-ವಾರ-ನಕ್ಷತ್ರ-ಯೋಗ ಹಾಗೂ ಕರಣವೆಂಬ ಪಂಚ ಅಂಗಗಳನ್ನು ಶ್ರವಣ ಮಾಡಿದರೆ ಏನು ಫಲ?**

ಉ. **"ಲಕ್ಷ್ಮೀಃ ಸ್ಯಾದಚಲಾ ತಿಥಿಶ್ರವಣತೋ ವಾರಾತ್ತಥಾಯುಶ್ಚಿರಮ್**
**ನಕ್ಷತ್ರಂ ಕೃತಪಾಪಸಂಚಯಹರಂ ಯೋಗಾತ್ ಕುಯೋಗಾಪಹಃ।**
**ಸರ್ವಾಭೀಷ್ಟಕರಂ ತಥೈವ ಕರಣಂ ಪಂಚಾಂಗಮೇತತ್ ಶುಭಮ್**
**ಶ್ರೋತವ್ಯಂ ಪ್ರತಿವಾಸರಂ ದ್ವಿಜಮುಖಾತ್ ಶ್ರೇಯಸ್ಕರಂ ಸಗ್ರಹಮ್ ॥**

ಎಂದು ರಾಮಾಯಣದಲ್ಲಿ ಹೇಳಿದಂತೆ ಪ್ರತಿನಿತ್ಯದಲ್ಲಿ ಬ್ರಾಹ್ಮಣನ ಮುಖದಿಂದ ತಿಥಿ-ವಾರ-ನಕ್ಷತ್ರ-ಯೋಗ ಹಾಗೂ ಕರಣ ಈ ಐದು

ಅಂಗಗಳನ್ನು ಶ್ರವಣಮಾಡಬೇಕು. ಅವುಗಳ ಪೈಕಿ ತಿಥಿಯನ್ನು ಶ್ರವಣ ಮಾಡಿದರೆ ದೀರ್ಘಾಯುಸ್ಸು-ನಕ್ಷತ್ರವನ್ನು ಶ್ರವಣಮಾಡಿದರೆ ಹಿಂದೆ ಮಾಡಿದ ಪಾಪನಾಶ, ಯೋಗವನ್ನು ಶ್ರವಣಮಾಡಿದರೆ ಕುಯೋಗ ಪರಿಹಾರ ಹಾಗೂ ಕರಣವನ್ನು ಶ್ರವಣಮಾಡಿದರೆ ಸರ್ವಾಭೀಷ್ಟಸಿದ್ಧಿ ಫಲವೆಂದು ತಿಳಿಯಬೇಕು.

**279. ಪರಮಾತ್ಮನ ಎದುರಿನಲ್ಲಿ ಶ್ರೀಮುಖ್ಯಪ್ರಾಣದೇವರು ಕೈಮುಗಿದು ಕೊಂಡಿರುವ ದೃಶ್ಯವು ಕಂಡುಬರುತ್ತದೆ. ಇದರಂತೆ ಘಂಟೆಯ ಮೇಲೂ ಶ್ರೀಮುಖ್ಯಪ್ರಾಣದೇವರು ಕೈಮುಗಿದುಕೊಂಡಿರುವ ದೃಶ್ಯವು ಕಂಡು ಬರುತ್ತದೆ ಇದರ ಪರಮಾರ್ಥವೇನು?**

ಉ. ಕರವ ಮುಗಿದ ಮುಖ್ಯಪ್ರಾಣ ಕರವ ಮುಗಿದ
ಕರವ ಮುಗಿದ ಶ್ರೀಹರಿಗೆ ಎದುರಾಗಿ।
ದುರುಳರ ಜರಿದು ಶರಣರ ಪೊರೆ ಎಂದು
**ತಾರತಮ್ಯ ಪಂಚಭೇದ ಸತ್ಯವೆಂಬ।**
**ಮರುತಮತ ಪೊಂದಿದವರ ನೀ ಕಾಯೆಂದ॥**
**ಜೀವೇಶ್ವರೈಕ್ಯ ಜಗತ್ತು ಮಿಥ್ಯಾ ಎಂದು।**
**ಈ ವಿಧ ಪೇಳುವ ಮಾಯಿಗಳನಳಿ ಎಂದು॥**
**ಇಲ್ಲಿ ಮಾತ್ರ ಭೇದ ಅಲ್ಲಿ ಒಂದೇ ಎಂಬ।**
**ಕ್ಷುಲ್ಲಕರನು ಹಿಡಿದು ಹಲ್ಲು ಮುರೀ ಎಂದು॥**
**ಪರಿಪರಿ ಭಕ್ತರ ಹೃದಯದೊಳಗೆ ನಿಂತು।**
**ನಿರುತಮಾಡುವ ಕರ್ಮ ಹರಿಗೆ ಅರ್ಪಿತವೆಂದು॥**
**ಹರಿ ಮಾಡುವ ವ್ಯಾಪಾರ ಬಲ್ಲಕಾರಣನಾಗಿ।**
**ಗುರುಪುರಂದರವಿಠಲಗೆರಗಿ ನಿಂತು॥**

ಎಂದು ಪುರಂದರೋಪನಿಷತ್ತಿನಲ್ಲಿ ಒಂದು ಕೃತಿಯು ಕಂಡುಬರುತ್ತದೆ. ಇದರ ಪ್ರಕಾರ, ಕೆಟ್ಟವರನ್ನು ಹಿಮ್ಮೆಟ್ಟಿಮೊರೆ ಹೊಕ್ಕವರನ್ನು ಕಾಪಾಡು - ವಾಯುಮತವನ್ನು ಹೊಂದಿದವರನ್ನು ನೀನು ಕಾಪಾಡು - ಜೀವಬ್ರಹ್ಮರ ಐಕ್ಯ - ಜಗತ್ತು ಮಿಥ್ಯ ಎಂದು ಈ ರೀತಿ ಹೇಳುವ ಮಾಯಿಗಳನ್ನು ನಾಶಮಾಡು ಸಂಸಾರಾವಸ್ಥೆಯಲ್ಲಿ ಜೀವ - ಬ್ರಹ್ಮರಿಗೆ ಭೇದ, ಆದರೆ

ಮುಕ್ತಿಯಲ್ಲಿ ಸಾಮ್ಯವನ್ನು ಹೇಳುವ ಅಲ್ಪರನ್ನು ಹಿಡಿದು ಅವರ ಹಲ್ಲನ್ನು ಮುರಿ - ಎಂಬೀ ಮುಂತಾದ ಅಭಿಪ್ರಾಯದಿಂದ ಪರಮಾತ್ಮನ ಎದುರಿನಲ್ಲಿ ಮುಖ್ಯ ಪ್ರಾಣದೇವರು ಕೈಮುಗಿದುಕೊಂಡು ನಿಂತಿದ್ದಾರೆಂದು ಹಾಗೂ ಇದರಂತೆ ಘಂಟೆಯ ಮೇಲೆ ಮುಖ್ಯಪ್ರಾಣದೇವರು ಕೈಮುಗಿದುಕೊಂಡಿರುವುದಕ್ಕೂ ಈ ಅಭಿಪ್ರಾಯವನ್ನು ಹೇಳಿದರೆ ತಪ್ಪಾಗಲಿಕ್ಕಿಲ್ಲ.

**280. ಆಸನಗಳು ಮತ್ತು ಅವುಗಳ ಫಲಗಳನ್ನು ತಿಳಿಸುವಿರಾ?**

ಉ. **ವಂಶಾಸನೇ ದರಿದ್ರಃ ಸ್ಯಾತ್ಪಾಷಾಣೇ ವ್ಯಾಧಿಸಂಭವಮ್ ।**
**ಧರಣ್ಯಾಂ ದುಃಖಮಾಪ್ನೋತಿ ದೌರ್ಭಾಗ್ಯಂ ದಾರುಕಾಸನೇ ।**
**ತೃಣಾಸನೇ ಯಶೋಹಾನಿಃ ಪಲ್ಲವೇ ಚಿತ್ತವಿಭ್ರಮಃ।**
**ಕುಶಾಸನೇ ಸರ್ವಸಿದ್ಧಿಃ ಕಂಬಲೇ ದುಃಖಮೇವ ಚ ।**
**ಕೃಷ್ಣಾಜಿನೇ ಜ್ಞಾನಸಿದ್ಧಿಃ ಮೋಕ್ಷಃ ಸ್ಯಾದ್ ವ್ಯಾಘ್ರಚರ್ಮಣಿ**

ಎಂಬುದಾಗಿ ಸ್ಮೃತಿಯಲ್ಲಿ ಹೇಳಿದಂತೆ ವಂಶಾಸನದ ಮೇಲೆ ಕುಳಿತರೆ ಅಂದರೆ ಬೊಂಗಿನಿಂದ ಮಾಡಿದ ಆಸನದ ಮೇಲೆ ಕುಳಿತರೆ ದರಿದ್ರನಾಗುತ್ತಾನೆ. ಪಾಷಾದ (ಕಲ್ಲಿನ) ಮೇಲೆ ಕುಳಿತರೆ ವ್ಯಾಧಿಯು ಸಂಭವಿಸುತ್ತದೆ. ನೆಲದ ಮೇಲೆ ಕುಳಿತರೆ ದುಃಖವು ಉಂಟಾಗುತ್ತದೆ. ಹುಲ್ಲಿನ ಆಸನದ ಮೇಲೆ ಕುಳಿತರೆ ಕೀರ್ತಿಯು ನಷ್ಟವಾಗುತ್ತದೆ. ಚಿಗುರೆಲೆ ಮುಂತಾದವುಗಳ ಮೇಲೆ ಕುಳಿತರೆ ಚಿತ್ತಚಾಂಚಲ್ಯವು ಉಂಟಾಗುತ್ತದೆ. ಕುಶಾಸನ(ದರ್ಭೆ) ದ ಮೇಲೆ ಕುಳಿತರೆ ಸರ್ವಸಿದ್ಧಿಯುಂಟಾಗುತ್ತದೆ. ಕಂಬಳಿಯ ಮೇಲೆ ಕುಳಿತರೆ ದುಃಖವು ಉಂಟಾಗುತ್ತದೆ. ಹುಲಿಯ ಚರ್ಮದ ಮೇಲೆ ಕುಳಿತರೆ ಮೋಕ್ಷವು ಸಿಗುತ್ತದೆ. ಆದ್ದರಿಂದ ಸ್ಮೃತಿಯಲಿ ಹೇಳಿದಂತೆ ಫಲವನ್ನು ಅರಿತು ಯೋಗ್ಯ ಆಸನವನ್ನು ಬಳಸಬೇಕು.

**281. ಬ್ರಾಹ್ಮಣನು ಷಟ್ಕರ್ಮನಿರತನೆಂದು ಹೇಳುತ್ತಾರೆ. ಅಂತಹ ಷಟ್ಕರ್ಮಗಳು ಯಾವುವು?**

ಉ. **"ಅಧ್ಯಾಪನಂ ಚಾಧ್ಯಯನಂ ಯಜನಂ ಯಾಜನಂ ತಥಾ ।**
**ದಾನಂ ಪ್ರತಿಗ್ರಹಶ್ಚೈವ ಷಟ್‌ಕರ್ಮಾಣ್ಯಗ್ರಜನ್ಮನಃ ॥"**

ಎಂದು ಸ್ಮೃತಿಯಲ್ಲಿ ಹೇಳಿದಂತೆ (ಸ್ಮೃ.ಆ.ಪ್ರ.ಪು 149) ವೇದವನ್ನು

ಕಲಿಸುವುದು -ಸ್ವಯಂ ವೇದವನ್ನು ಕಲಿಯುವುದು-ಸ್ವಯಂ ಯಾಗವನ್ನು ಮಾಡವುದು-ಯಾಗವನ್ನು ಮಾಡಿಸುವುದು-ದಾನ ಮಾಡುವದು ಹಾಗೂ ದಾನವನ್ನು ಸ್ವೀಕರಿಸುವುದು ಈ ಆರು ಬ್ರಾಹ್ಮಣನಿಗೆ ಹೇಳಿರುವ ಷಟ್ಕರ್ಮಗಳು.

**282. ಒಂದೊಂದು ಯುಗದಲ್ಲಿ ಒಂದೊಂದು ಸ್ಮೃತಿಗೆ ಪ್ರಾಶಸ್ತ್ಯವುಂಟೆಂದು ಹಿರಿಯರು ಹೇಳುತ್ತಾರೆ? ಯಾವ ಯಾವ ಯುಗದಲ್ಲಿ ಯಾವ ಯಾವ ಸ್ಮೃತಿಗೆ ಪ್ರಾಶಸ್ತ್ಯವಿದೆ?**

ಉ. **"ಕೃತೇ ತು ಮಾನವಾಃ ಪ್ರೋಕ್ತಾಃ, ತ್ರೇತಾಯಾಂ ಗೌತಮಾಃ ಸ್ಮೃತಾಃ।**
**ದ್ವಾಪರೇ ಶಂಖಲಿಖಿತಾಃ, ಕಲೌ ಪಾರಾಶರಾಃ ಸ್ಮೃತಾಃ॥**
ಎಂದು ಹೇಳಿದಂತೆ ಕೃತಯುಗದಲ್ಲಿ - ಮನುಸ್ಮೃತಿಗೆ, ತ್ರೇತಾಯುಗದಲ್ಲಿ - ಗೌತಮಸ್ಮೃತಿಗೆ, ದ್ವಾಪರಯುಗದಲ್ಲಿ - ಶಂಖಸ್ಮೃತಿಗೆ, ಹಾಗೂ ಕಲಿಯುಗದಲ್ಲಿ - ಪರಾಶರಸ್ಮೃತಿಗೆ ಪ್ರಾಶಸ್ತ್ಯವು ಇರುತ್ತದೆ.

**283. 18 ವಿದ್ಯಗಳು ಯಾವುವು?**

ಉ. **"ಪುರಾಣನ್ಯಾಯಮೀಮಾಂಸಾ ಧರ್ಮಶಾಸ್ತ್ರಾಂಗಮಿಶ್ರಿತಾಃ।**
**ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ॥**
**ಆಯುರ್ವೇದೋ ಧನುರ್ವೇದಃ ಗಾಂಧರ್ವಶ್ಚೇತಿ ತೇ ತ್ರಯಃ।**
**ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾ ಹ್ಯಷ್ಟಾದಶ ಸ್ಮೃತಾಃ॥"**
ಎಂದು ಯಾಜ್ಞವಲ್ಕ ಸ್ಮೃತಿ ಮತ್ತು "ಅಪರಾರ್ಕ" ಎಂಬ ಗ್ರಂಥದಲ್ಲಿ ಹೇಳಿದಂತೆ, 1) 18 ಪುರಾಣಗಳು, 2) ತರ್ಕಶಾಸ್ತ್ರ, 3)ಮೀಮಾಂಸಾಶಾಸ್ತ್ರ, 4) ಧರ್ಮಶಾಸ್ತ್ರ ಅಂದರೆ ಮನು ಮುಂತಾದವರಿಂದ ಪ್ರಣೀತವಾದ ಸ್ಮೃತಿಗಳು, 5) ಶಿಕ್ಷಾ, 6) ವ್ಯಾಕರಣ, 7) ಛಂದಸ್ಸು, 8) ನಿರುಕ್ತ, 9) ಜ್ಯೋತಿಷ ಹಾಗೂ, 10) ಕಲ್ಪಗಳೆಂಬ ವೇದದ 6 ಅಂಗಗಳು ಹಾಗೂ 4 ವೇದಗಳು ಅಂದರೆ, 11) ಋಗ್ವೇದ, 12) ಯಜುರ್ವೇದ, 13) ಸಾಮವೇದ ಹಾಗೂ, 14) ಅಥರ್ವಣವೇದ, 15) ಆಯುರ್ವೇದ, 16) ಧನುರ್ವೇದ, 17) ಗಂಧರ್ವವೇದ ಅಂದರೆ ಸಂಗೀತಶಾಸ್ತ್ರ ಮತ್ತು 18) ಅರ್ಥಶಾಸ್ತ್ರ. ಇವು 18 ವಿದ್ಯೆಗಳು (ಸ್ಮೃ.ಕಾ.ಪ್ರ.ಪು.73-74)

**284. ಶಿಷ್ಟರು ಎಂದರೆ ಯಾರು?**

**ಉ. "ಶಿಷ್ಯಾಃ ಖಲು ವಿಗತಮತ್ಸರಾಃ ನಿರಹಂಕಾರಾಃ, ಕುಂಭ್ಯಾದಿ ಧಾನ್ಯಾಃ, ಅಲೋಲುಪಾಃ, ಡಮ್ಭದರ್ಪಲೋಭಮೋಹಮದ ಕ್ರೋಧವರ್ಜಿತಾಃ" (ಸ್ಮೃ.ಮು.ಕಾ.ಪ್ರ. ಪುಟ-10)**

ಎಂದು ಬೋಧಾಯನರು ಹೇಳಿದಂತೆ ಮತ್ಸರವಿಲ್ಲದಿರುವ, ಅಹಂಕಾರರಹಿತರಾದ, ಕುಂಭೀ ಧಾನ್ಯವುಳ್ಳ ಅಥವಾ ಕುಸೂಲಧಾನ್ಯವುಳ್ಳ ವಿಷಯ ಭೋಗಾಭಿಲಾಷೆ ರಹಿತರಾದ, ಡಂಭ-ದರ್ಪ-ಲೋಭ-ಮೋಹ-ಮದ-ಕ್ರೋಧ ಇವುಗಳು ಇಲ್ಲದಿರುವ ವ್ಯಕ್ತಿಗಳು ಶಿಷ್ಟರು. (ಒಂದು ವರ್ಷದವರೆಗೆ ತನ್ನ ಪತ್ನಿ, ಪುತ್ರಾದಿಗಳಿಗೂ ಸೇವಕ ವರ್ಗಕ್ಕೂ ಸಾಕಾಗುವಷ್ಟು ಧಾನ್ಯಾದಿ ಸಂಗ್ರಹವುಳ್ಳವನು ಕುಂಭೀಧಾನ್ಯವುಳ್ಳವನೆಂದು ವ್ಯವಹಾರ, ಹೀಗೆಯೇ 2 ವರ್ಷ ಅಥವಾ ಇನ್ನೂ ಸ್ವಲ್ಪ ಹೆಚ್ಚು ಸಮಯದವರೆಗೆ ಪತ್ನೀ ಪುತ್ರಾದಿ ಪರಿವಾರಕ್ಕೂ, ಸೇವಕ ವರ್ಗಕ್ಕೂ ಸಾಕಾಗುವಷ್ಟು ಧಾನ್ಯಾದಿ ಸಂಗ್ರಹವುಳ್ಳವನು ಕುಸೂಲಧಾನ್ಯವುಳ್ಳವನೆಂದು ಸ್ಮೃತಿಯಲ್ಲಿ ವ್ಯವಹಾರವಿದೆ)

**285. ನಮ್ಮ ನೆರಳನ್ನು ನೀರಿನಲ್ಲಿ ನಾವು ನೋಡಬಾರದೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಕಾರಣ ಮತ್ತು ಪ್ರಮಾಣವೇನು?**

**ಉ. "ಆಯುಷ್ಕಾಮೋ ನ ವೀಕ್ಷೇತ ನ ಛಾಯಾಂ ಆತ್ಮನೋ ಜಲೇ ॥"**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಆಯುಸ್ಸನ್ನು ಬಯಸುವವನು ತನ್ನ ನೆರಳನ್ನು ನೀರಿನಲ್ಲಿ ನೋಡಬಾರದು. ಹಾಗೆ ನೋಡಿದಲ್ಲಿ ಆಯುಸ್ಸು ಕ್ಷೀಣವಾಗುತ್ತದೆ.

**286. ಹುಚ್ಚರು ಮುಂತಾದವರು ಜೀವಮಾನಪರ್ಯಂತ ಸಂಧ್ಯಾವಂದನೆಯನ್ನು ಮಾಡುವುದಿಲ್ಲ. ಅವರುಗಳಿಗೆ ದೋಷಉಂಟೆ?**

**ಉ. "ಯತ್ರ ಪುನಃ ಪಿತ್ತವಿಕಾರಾದಿನಾ ಯಾವಜ್ಜೀವಂ ಬುದ್ಧಿವೈಕಲ್ಯಂ। ತತ್ರ ಸಂಧ್ಯಾಸ್ವರೂಪತ್ಯಾಗೇ ದೋಷ ಇತ್ಯುಕ್ತಂ ವ್ಯಾಸೇನೇತಿ ॥" (ಕೃ.ಸ್ಮೃ.ಆ.ಪ್ರ.ಪು.-104)**

ಎಂದು ಹೇಳಿದಂತೆ ಪಿತ್ತವಿಕಾರಾದಿಗಳಿಂದ ಬುದ್ಧಿವೈಕಲ್ಯದಿಂದ ಜೀವಮಾನ ಪರ್ಯಂತ ಸಂಧ್ಯಾವಂದನೆಯನ್ನು ಮಾಡದಿರುವ ಹುಚ್ಚರು ಮುಂತಾದವರು ಗಳಿಗೆ ದೋಷವಿದೆ.

287. ಬುದ್ಧಿವಂತನಾದವನು ಕೆಲವೊಂದು ವಿಷಯಗಳನ್ನು ಬಹಿರಂಗ ಪಡಿಸಬಾರದೆಂದು ಕೆಲವರು ಹೇಳುತ್ತಾರೆ. ಅವು ಯಾವು? (ಚಾಣಕ್ಯನಿತಿ ಅಧ್ಯಾಯ7 ಶ್ಲೋ1)

ಉ. "ಅರ್ಥನಾಶಂ ಮನಸ್ತಾಪಂ ಗೃಹಿಣೀಚರಿತಾನಿ ಚ ।
ನೀಚವಾಕ್ಯಂ ಚಾಪಮಾನಂ ಮತಿಮಾನ್ನ ಪ್ರಕಾಶಯೇತ್ ॥"
ಎಂದು ಹೇಳಿದಂತೆ ಹಣದನಾಶ-ಮನಸ್ಸಿನ ವ್ಯಥೆ-ಹೆಂಡತಿಯ ನಡತೆ-ನೀಚರು ತನ್ನನ್ನು ಕುರಿತು ಆಡಿದ ಮಾತು-ಮತ್ತು ತನಗಾದ ಅವಮಾನ ಇವುಗಳನ್ನು ಬುದ್ಧಿವಂತನಾದವನು ಬಹಿರಂಗಗೊಳಿಸಬಾರದು.

288. ತುಳಸಿ, ಬಿಲ್ವಪತ್ರ, ಕಮಲ ಮತ್ತು ಗಂಗಾಜಲ ಎಷ್ಟು ದಿನಗಳ ತನಕ ಶುದ್ಧವಾಗಿ ಇರುತ್ತವೆ?

ಉ. "ತುಲಸೀ ದಶ ರಾತ್ರಾಣಿ ಪಂಚ ರಾತ್ರಾಣಿ ಬಿಲ್ವಜಮ್ ।
ಕಮಲಂ ತು ತ್ರಿರಾತ್ರಾಣಿ ಸರ್ವದಾ ಜಾಹ್ನವೀಜಲಮ್ ॥
ಎಂಬ ಪ್ರಮಾಣದಲ್ಲಿ ಹೇಳಿದಂತೆ ಗಿಡದಿಂದ ಕಿತ್ತಿದ ಮೇಲೆ ತುಳಸಿ ಹತ್ತು ರಾತ್ರಿಗಳ ತನಕ, ಬಿಲ್ವಪತ್ರ ಐದು ರಾತ್ರಿಗಳ ತನಕ, ಕಮಲವು ಮೂರು ರಾತ್ರಿಗಳ ತನಕ ಶುದ್ಧವಾಗಿರುತ್ತವೆ. ಆದರೆ ಗಂಗಾಜಲವು ಯಾವಾಗಲೂ ಶುದ್ಧವಾಗಿರುತ್ತದೆ. ಆದ್ದರಿಂದಲೇ ಗಂಗೆಯನ್ನು ಕಲಶದಲ್ಲಿ (ಗಂಗಾ ಗಿಂಡಿ) ತಂದು ಮನೆಗಳಲ್ಲಿಟ್ಟು ಪೂಜಿಸುವುದು ರೂಢಿಯಲ್ಲಿ ಕಂಡುಬಂದಿದೆ.

289. ಅಭ್ಯಂಗದ ಸಲುವಾಗಿ ತಲೆಗೆ ಎಣ್ಣೆಯನ್ನು ಹಚ್ಚಿಕೊಂಡಿದ್ದಾಗ ಹಲ್ಲನ್ನು ಉಜ್ಜಬಹುದೇ?

ಉ. (ಸದಾಚಾರಸ್ಮೃತಿವ್ಯಾಖ್ಯಾನ ಆಹ್ನಿಕ ಕೌಸ್ತುಭ)
"ನ ಕುರ್ಯಾದ್ದಂತಕಾಷ್ಠಂ ಚ ತೈಲೇ ಶಿರಸಿ ಚ ಸ್ಥಿತೇ ।
ಎಂದು ಪ್ರಮಾಣದಲ್ಲಿ ಹೇಳಿದಂತೆ, ಅಭ್ಯಂಗದ ಸಲುವಾಗಿ ತಲೆಗೆ ಎಣ್ಣೆಯನ್ನು ಹಚ್ಚಿಕೊಂಡಾಗ ಹಲ್ಲನ್ನುಜ್ಜಬಾರದು.

290. ಬ್ರಾಹ್ಮಣಾದಿ ನಾಲ್ಕುವರ್ಣದವರು ನಾಮಕರಣದ ಸಂದರ್ಭದಲ್ಲಿ ಎಂತಹ ಹೆಸರುಗಳನ್ನಿಡಬೇಕು?

ಉ. **ವರ್ಣಾನಾಂ ನಿಜನಾಮಾನಿ ಮನುರಾಹ ಯಥಾಕ್ರಮಮ್ ।**
**ಮಾಂಗಲ್ಯಂ ಬ್ರಾಹ್ಮಣಸ್ಯ ಸ್ಯಾತ್ ಕ್ಷತ್ರಿಯಸ್ಯ ಬಲಾನ್ವಿತಮ್ ।**
**ವೈಶ್ಯಸ್ಯ ಧನಸಂಯುಕ್ತಂ ಶೂದ್ರಸ್ಯ ತು ಜುಗುಪ್ಸಿತಮ್ ।ಇತಿ॥**
ಮಂಗಲ - ಬಂಧನ - ನಿಂದಾ ಪ್ರತಿಪಾದಕಾನ್ಯೇವ ತೇಷಾಂ ಕ್ರಮೇಣ ನಾಮಧೇಯಾನಿ ಭವಂತೀತ್ಯರ್ಥಃ।
ಎಂದು ಹೇಳಿದಂತೆ :-
ಬ್ರಾಹ್ಮಣನಿಗೆ ಮಂಗಳ ಸೂಚಕವಾದ ಹೆಸರುಗಳು
ಕ್ಷತ್ರಿಯನಿಗೆ ಬಲ ಸೂಚಕವಾದ ಹೆಸರುಗಳು
ವೈಶ್ಯನಿಗೆ ಧನ ಸೂಚಕವಾದ ಹೆಸರುಗಳು
ಶೂದ್ರನಿಗೆ ನಿಂದಾ ಸೂಚಕವಾದ ಹೆಸರುಗಳು
ಈ ಕ್ರಮದಲ್ಲಿ ಹೆಸರುಗಳನ್ನಿಡಬೇಕು.

**291. ಪುರುಷನಿಗೆ ಇಡುವ ಹೆಸರಿನಲ್ಲಿರಬೇಕಾದ ವಿಶೇಷಗಳು ಯಾವುವು? ಮತ್ತು ಸ್ತ್ರೀಯರಿಗಿಡುವ ಹೆಸರುಗಳು ಹೇಗಿರಬೇಕು?**

ಉ. **ಘೋಷವಂತಿ ಯಾನ್ಯಕ್ಷರಾಣಿ ವರ್ಗತೃತೀಯಚತುರ್ಥಾನಿ, ತಾನಿ ನಾಮಾದೌ ಕಾರ್ಯಾಣಿ । ಅಂತಸ್ಥಾಃ ಯರಲವಾಃ ತೇ ಮಧ್ಯೇ ಕರ್ತವ್ಯಾಃ। ಅಭಿನಿಷ್ಠಾನಃ ವಿಸರ್ಜನೀಯಃ ಸೋಽಂತೇ ಕರ್ತವ್ಯಃ।**
ಎಂದು ಹೇಳಿದಂತೆ ಘೋಷಪ್ರಯತ್ನವುಳ್ಳ ವರ್ಣದ ಮೂರು ಮತ್ತು ನಾಲ್ಕನೇ ಅಕ್ಷರಗಳು - ಗ-ಘ-ಡ-ಢ-ಜ-ಝ- ಗಳು ಇವುಗಳಲ್ಲಿ ಯಾವುದಾದರೊಂದು ಅಕ್ಷರವು ಪುರುಷನಿಗಿಡುವ ಹೆಸರಿನ ಆದಿಯಲ್ಲಿರಬೇಕು. ಮತ್ತು ಅಂತಸ್ಥಗಳಾದ ಯ-ರ-ಲ-ವ ಇವುಗಳಲ್ಲಿ ಯಾವುದಾದರು ಒಂದು ಅಕ್ಷರವು ಪುರುಷನಿಗಿಡುವ ಹೆಸರಿನ ಮಧ್ಯದಲ್ಲಿರಬೇಕು. ಹಾಗು ಹೆಸರಿನ ಕೊನೆಯಲ್ಲಿ ವಿಸರ್ಗವು ಇರಬೇಕು. ಹೀಗೆಂದು ಪುರುಷನಿಗಿಡುವ ಹೆಸರಿನಲ್ಲಿರಬೇಕಾದ ವಿಶೇಷವನ್ನು ತಿಳಿಸಿರುತ್ತಾರೆ.
ಇನ್ನು
**ಸ್ತ್ರೀಣಾಂ ಪುನರ್ನಾಮಧೇಯಂ ಮನುರಾಹ:-**
**ಸ್ತ್ರೀಣಾಂ ಸುಖೋದ್ಯಂ-ಅಕ್ರೂರಂ-ವಿಸ್ಪಷ್ಟಾರ್ಥಂ ಮನೋಹರಮ್ ।**
**ಮಾಂಗಲ್ಯಂ ದೀರ್ಘವರ್ಣಾಂತಂ ಆಶೀರ್ವಾದಾಭಿಧಾನವತ್ ॥**

ಎಂದು ಮನು ಋಷಿಗಳು ಹೇಳಿದಂತೆ ಸುಖವಾಗಿ ಉಚ್ಚರಿಸಲು ಯೋಗ್ಯವಾದ ಮಂಗಳವಾಚಕವಾದ ಸ್ಪಷ್ಟವಾದ ಅರ್ಥವುಳ್ಳ ಮನೋಹರವಾದ - ಮೃದುವಾದ ಅಕಾರಾಂತ ಅಥವಾ ಈಕಾರಾಂತವಾದ ಹೆಸರನ್ನು ಸ್ತ್ರೀಯರಿಗೆ ಇಡಬೇಕು.

**292. ಈಗಿನ ಕಾಲದ ಜನರಲ್ಲಿ ಪರಸ್ಪರ ಷೇಕ್‌ಹ್ಯಾಂಡ್ ಕೊಡುವ ಪದ್ಧತಿಇದೆ. ಈ ಪದ್ಧತಿಯು ಹಿಂದಿನ ಕಾಲದಲ್ಲೂ ಇತ್ತೇ ಹೇಗೆ?**

ಉ. **ಸಾಲಗ್ರಾಮಶಿಲಾಸ್ಪರ್ಶಂ ಯೇ ಕುರ್ವಂತಿ ದಿನೇ ದಿನೇ।**
**ವಾಂಛಂತಿ ಕರಸಂಸ್ಪರ್ಶಂ ತೇಷಾಂ ದೇವಾಃ ಸವಾಸವಾಃ ॥**

**(ಸ್ಮೃ. ಮು.ಆಹ್ನಿ.ಪ್ರ-ಪುಟ-216)**

ಎಂಬ ಪ್ರಮಾಣದಲ್ಲಿ ಪ್ರತಿನಿತ್ಯದಲ್ಲೂ ಯಾರು ಶಾಲಗ್ರಾಮ ಶಿಲೆಯನ್ನು ಮುಟ್ಟಿ ಪೂಜಿಸುತ್ತಾರೋ ಅವರ ಕರಸ್ಪರ್ಶವನ್ನು ಇಂದ್ರನಿಂದ ಸಹಿತರಾದ ದೇವತೆಗಳು ಅಪೇಕ್ಷಿಸುತ್ತಾರೆ, ಎಂದು ಹೇಳಿದ್ದರಿಂದ 'ಷೇಕ್‌ಹ್ಯಾಂಡ್' ಹಿಂದಿನ ಕಾಲದಲ್ಲೂ ಇತ್ತೆಂದು ತಿಳಿಯುತ್ತದೆ.

**293. ಬ್ರಾಹ್ಮಣಾದಿ ವರ್ಣದವರಿಗೆ ವಿಹಿತವಾದ ಉಪನಯನ ಕಾಲವು ಯಾವುದು?**

ಉ. **ಕಾಲೋ ನಿರೂಪ್ಯತೇ ಸಮ್ಯಕ್ ಅತ್ರೋಪನಯನಸ್ಯ ಹಿ।**
**ಬ್ರಾಹ್ಮಣಸ್ಯೋಪನಯನಂ ವರ್ಷೇ ಗರ್ಭಾಷ್ಟಮೇ ಭವೇತ್ ॥**
**ಅಥವೋತ್ಪತ್ತಿಮಾರಭ್ಯ ಭವೇದಷ್ಟಮವತ್ಸರೇ।**
**ಏಕಾದಶೇ ಕ್ಷತ್ರಿಯಸ್ಯ ಗರ್ಭಾತ್ತು ದ್ವಾದಶೇ ವಿಶಃ ॥**

ಎಂದು ಹೇಳಿದಂತೆ ಬ್ರಾಹ್ಮಣರಿಗೆ ಗರ್ಭದಿಂದ ಎಂಟನೆಯ ವರ್ಷದಲ್ಲಿ ಅಥವಾ ಜನ್ಮದಿಂದ ಎಂಟನೆಯ ವರ್ಷದಲ್ಲಿ ಉಪನಯನವನ್ನು ಮಾಡಬೇಕು. ಗರ್ಭದಿಂದ ಹನ್ನೊಂದನೆಯ ವರ್ಷದಲ್ಲಿ ಕ್ಷತ್ರಿಯನಿಗೂ ಗರ್ಭದಿಂದ ಹನ್ನೆರಡನೆಯ ವರ್ಷದಲ್ಲಿ ವೈಶ್ಯನಿಗೂ ಉಪನಯನವನ್ನು ಮಾಡಬೇಕು.

**294. ಹಿರಿಯ ಮಗನನ್ನು ದತ್ತು ಕೊಡಬಾರದೆಂದು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **"ಆಪದ್ಯಪಿ ಚ ಕಷ್ಟಾಯಾಂ ನ ದದ್ಯಾತ್ ಅಗ್ರಜಂ ಸುತಮ್।**

ಎಂದು ಹೇಳಿದಂತೆ ಎಂತಹ ಕಷ್ಟಕಾಲದಲ್ಲೂ ಹಿರಿಯ ಮಗನನ್ನು ದತ್ತು ಕೊಡಬಾರದು.

**295. ಪುಣ್ಯ - ಪಾಪಗಳೆರಡೇ ಕೊನೆಯಲ್ಲಿ ನಮ್ಮ ಸಂಗಡ ಬರುತ್ತವೆ ಎಂದು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **ಧನಾನಿ ಭೂಮೌ ಪಶವಶ್ಚ ಗೋಷ್ಠೇ ಭಾರ್ಯಾ ಗೃಹದ್ವಾರಿ ಸುತಃ ಸ್ಮಶಾನೇ।**
**ದೇಹಶ್ಚಿತಾಯಾಂ ಪರಲೋಕಮಾರ್ಗೇ ಕರ್ಮಾನುಗೋ ಗಚ್ಛತಿ ಜೀವ ಏಕಃ ॥**
ಎಂದು ಹೇಳಿದಂತೆ ಮನುಷ್ಯನು ಸತ್ತಮೇಲೆ ಅವನು ಪೂರ್ವದಲ್ಲಿ ಭೂಮಿಯಲ್ಲಿ ಇಟ್ಟಿದ್ದ ಧನವು ಅವನ ಸಂಗಡ ಬರುವುದಿಲ್ಲ. ಭೂಮಿಯಲ್ಲೇ ಇರುತ್ತದೆ. ಇದರಂತೆ ಪಶುಗಳು ಅವನ ಸಂಗಡ ಬರುವುದಿಲ್ಲ. ಕೊಟ್ಟಿಗೆಯಲ್ಲೇ ಇರುತ್ತವೆ. ಹೆಂಡತಿಯು ಅವನ ಸಂಗಡ ಬರುವುದಿಲ್ಲ ಮನೆಯ ದ್ವಾರದಲ್ಲೇ ಇರುತ್ತಾಳೆ. ಮಗನು ಸ್ಮಶಾನದ ತನಕ ಬರುತ್ತಾನೆ. ದೇಹವು ಚಿತೆಯಲ್ಲಿ ಇರುತ್ತದೆ. ಆದರೆ ಪುಣ್ಯಪಾಪಗಳೆರಡೇ ಅವನ ಸಂಗಡ ಬರುತ್ತವೆ.

**296. ಕಾರ್ತೀಕ-ಮಾಘ-ಹಾಗೂ ವೈಶಾಖ ಈ ಮೂರು ಮಾಸಗಳು ಸ್ನಾನಕ್ಕೆ ವಿಶೇಷವಾಗಿ ಪ್ರಸಿದ್ಧವಾಗಿರಲು ಕಾರಣವೇನು?**

**(ಕೃ.ಸ್ಮೃ.ಕಾ.ಪ್ರ. ಪು. ೧೯೨)**

**ತಥಾ ವಾಯುಪುರಾಣೇ ಮಾಘಮಾಹಾತ್ಮ್ಯೇ :-**
**ಪ್ರಾತಃ ಸ್ನಾನೇಽಪ್ಯಶಕ್ತಶ್ಚೇತ್ ಕುರ್ಯಾನ್ಮಾಸತ್ರಯಂ ಬುಧಃ।**
**ತುಲಾಸಂಸ್ಥೇ ದಿನಕರೇ ಮಕರಸ್ಥೇ ಚ ಭಾಸ್ವತಿ ॥**
**ಮೇಷಗೇ ಚ ಸದಾ ಕುರ್ಯಾತ್ಪ್ರಾತಃ ಸ್ನಾನಮತಂದ್ರಿತಃ।**
**ನ ಕುರ್ಯಾತ್ತ್ರಿಷು ಮಾಸೇಷು ಪ್ರಾತಃಸ್ನಾನಂ ನರಾಧಮಃ ॥**
**ರೌರವಂ ನರಕಂ ಯಾತಿ ಯಾವದಿಂದ್ರಾಶ್ಚತುರ್ದಶ ॥ಇತಿ॥**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪ್ರತಿ ದಿನವೂ ಪ್ರಾತಃ ಸ್ನಾನ ಮಾಡಲು ಅಶಕ್ತನಾಗಿದ್ದರೆ ಜ್ಞಾನಿಯಾದವನು ಕಾರ್ತಿಕ-ಮಾಘ ಹಾಗು ವೈಶಾಖ ಈ ಮೂರು ಮಾಸಗಳಲ್ಲಾದರೂ ಸೋಮಾರಿತನವನ್ನು ಬಿಟ್ಟು ಪ್ರಾತಃಸ್ನಾನವುನ್ನು ಮಾಡಬೇಕು. ಇಲ್ಲದಿದ್ದರೆ ರೌರವ ನರಕವನ್ನು ಪಡೆಯುತ್ತಾನೆ ಎಂದು ಇರುವುದಿಂದ ಕಾರ್ತೀಕ -ಮಾಘ ಹಾಗೂ ವೈಶಾಖ

ಈ ಮೂರು ಮಾಸಗಳು ಸ್ನಾನಕ್ಕೆ ವಿಶೇಷವಾಗಿ ಪ್ರಸಿದ್ಧವಾಗಿವೆ.

**297. ವಾಯುಸ್ತುತಿಯ ಮಹತ್ವವನ್ನು ಸೂಕ್ಷ್ಮವಾಗಿ ತಿಳಿಸುವಿರಾ?**

ಶ್ರೀತ್ರಿವಿಕ್ರಮಪಂಡಿತಾಚಾರ್ಯರು ರಚಿಸಿದ ವಾಯುಸ್ತುತಿಯು ಮಾಧ್ವರ ಮಾಂಗಲ್ಯವೆನಿಸಿದ ಮಹಾಮಂತ್ರ. ಇದನ್ನು ಪಠಿಸುವ ಪ್ರತಿಯೊಬ್ಬನೂ ನಿಶ್ಚಯವಾಗಿಯೂ ಅಭೀಷ್ಟವನ್ನು ಪಡೆಯುವನು. ಶ್ರೀ ವಾದಿರಾಜರು ತಾವು ರಚಿಸಿದ ಮಹಾಭಾರತದ ತಾತ್ಪರ್ಯನಿರ್ಣಯ ವ್ಯಾಖ್ಯಾನದ ಕೊನೆಯಲ್ಲಿ ಮಾಧ್ವಗ್ರಂಥಸ್ಯ ಅಭಿಸಂಧಿಂ ವಿದುರ್ದೇವಾಃ ನ ಮಾನವಾಃ ವಾಯುಸ್ತುತಿ ರತಿರ್ನಿತ್ಯಂ ವೇದಾಹಂ ಚ ಕಥಂಚನ ॥ ಅಂದರೆ ಶ್ರೀಮಧ್ವಾಚಾರ್ಯರ ಗ್ರಂಥಗಳ ಅರ್ಥದ ರಹಸ್ಯ ಸ್ವಾರಸ್ಯವನ್ನು ದೇವತೆಗಳು ಮಾತ್ರ ತಿಳಿಯಲು ಸಾಧ್ಯ. ಮನುಷ್ಯರು ತಿಳಿಯಲಾರರು. ಆದರೆ ನಾನು (ವಾದಿರಾಜರು) ಈ ಅರ್ಥವನ್ನು ತಿಳಿಯಲು ಪ್ರತಿದಿನ ವಾಯುಸ್ತುತಿ ಪಠಿಸಿದ್ದರಿಂದ ಹೇಗೋ ಅರ್ಥಮಾಡಿಕೊಂಡೆ ಎಂದು ಈ ವಾಯುಸ್ತುತಿಯ ಮಹತ್ವವನ್ನು ತಿಳಿಸಿದ್ದಾರೆ. ಇದರಿಂದ ವಾಯುಸ್ತುತಿಯ ಮಹತ್ವವು ಸೂಕ್ಷ್ಮವಾಗಿ ತಿಳಿದುಬರುತ್ತದೆ. ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಶ್ರೀಹರಿ ವಾಯುಸ್ತುತಿಯ ಮಹತ್ವವನ್ನು ಅರಿತು ಶ್ರೀವ್ಯಾಸರಾಜರು ಹಾಗೂ ಶ್ರೀವಾದಿರಾಜರು ತಮ್ಮ ತಮ್ಮ ಅನುಭವಪೂರ್ಣವಾದ ಪುರಶ್ಚರಣಕ್ರಮವನ್ನು ಹೇಳಿದ್ದಾರೆ. ಮಾಧ್ವಪರಂಪರೆ ಯಲ್ಲಿ ಪ್ರತಿಯೊಬ್ಬ ಜ್ಞಾನಿಗಳೂ ವಾಯುಸ್ತುತಿಯ ಉಪಾಸಕರೇ ಆಗಿದ್ದಾರೆ. ಬ್ರಹ್ಮಚಾರಿಗಳು-ಗೃಹಸ್ಥಾಶ್ರಮಿಗಳು-ವಾನಪ್ರಸ್ಥಾಶ್ರಮಿಗಳು ಹಾಗೂ ಸಂನ್ಯಾಸಿಗಳು ಎಲ್ಲರೂ ಪಠಿಸುವ ಮಂತ್ರವಿದು. ಇದನ್ನು ವಾಯುದೇವರ ವಿಶೇಷವಾದ ಅನುಗ್ರಹಕ್ಕಾಗಿ ಎಲ್ಲರೂ ಪ್ರತಿದಿನ ಪಠಿಸಲೇಬೇಕು. ಅವಕಾಶವಿದ್ದಲ್ಲಿ ಪುರಶ್ಚರಣಮಾಡಬೇಕು.

**298. ಜನನಾಶೌಚಾದಿಗಳಿಗೆ ಇಷ್ಟು ದಿನಗಳು ಎಂದು ಅವಧಿ ಇರುವಂತೆ ಋಣ ಸೂತಕಕ್ಕೆ ಅವಧಿ ಎಷ್ಟು?**

**ಋಣವೆಂಬ ಪಾತಕವು ಬಹು ಬಾಧೆ ಪಡಿಸುತ್ತಿದೆ ಎಂಬ ಕೃತಿಯಲ್ಲಿ -**
**ಹೆತ್ತ ಸೂತಕ ಮತ್ತೆ ಹತ್ತು ದಿನ ಪರಿಯಂತ**
**ಮೃತ್ಯು ಸೂತಕವು ಹನ್ನೊಂದು ದಿವಸ**
**ಮತ್ತೆ ಋಣ ಸೂತಕವು ಜನ್ಮಜನ್ಮಾಂತರದಿ।**

**ಎತ್ತ ಪೋದರೂ ಬಿಡದೆ ಬೆನ್ಹತ್ತಿಬಹುದು।**

ಎಂದು ಶ್ರೀಪುರಂದರದಾಸರು ಹೇಳಿದಂತೆ ಋಣಸೂತಕವು ಜನ್ಮ ಜನ್ಮಾಂತರದಲ್ಲೂ ಇರುತ್ತದೆ. ಆದ್ದರಿಂದ ಋಣಸೂತಕಕ್ಕೆ ಇಷ್ಟು ದಿನಗಳು ಎಂದು ವಧಿ ಇಲ್ಲ ಅಂದರೆ ಅದನ್ನು ತೀರಿಸುವ ತನಕ ಬೆನ್ಹತ್ತಿಯೇ ಬರುವುದು.

**299. ಮತಗಳ ವಿಭಾಗಗಳನ್ನು ವಿಸ್ತಾರವಾಗಿ ಹೇಳುವಿರಾ?**

ಉ. ತತ್ರ ಸಮಯಾಃ ತ್ರಿವಿಧಾಃ-ಅವೈದಿಕಾಃ ವೈದಿಕಾವೈದಿಕಾಃ ಕೇವಲವೈದಿಕಾಶ್ಚೇತಿ ತತ್ರ ಅವೈದಿಕಮತಾನಿ ಅನೇಕವಿಧಾನಿ. ಲೋಕಾಯತಿಕ - ಬೌದ್ಧ - ಆರ್ಹತ - ಪಾಶುಪತಾದಿಭೇದೇನ ವೈದಿಕಾವೈದಿಕಾನಿ ಚ ಮತಾನಿ - ಸಾಂಖ್ಯ - ಯೋಗ - ನೈಯಾಯಿಕ ವೇಶೇಷಿಕ - ಕೌಮಾರಿಲ - ವೈಯಾಕರಣಾಖ್ಯಾನಿ। ವೈದಿಕಮತಾನಿ ಚ - ಶಂಕರ - ಯಾದವ - ಭಟ್ಟಭಾಸ್ಕರ - ರಾಮಾನುಜ - ಶ್ರೀಕಂಠ ಮಧ್ವಾಚಾರ್ಯಪ್ರವರ್ತಿತಾನಿ.

ಎಂದು ಶ್ರೀವಿಜಯಿಂದ್ರತೀರ್ಥರು 'ಸರ್ವಸಿದ್ಧಾಂತಸಾರಾಸಾರವಿವೇಚನ' ಗ್ರಂಥದಲ್ಲಿ ಹೇಳಿದಂತೆ ಅವೈದಿಕ ಮತಗಳು ವೈದಿಕಾವೈದಿಕ ಮತಗಳು ಕೇವಲ ವೈದಿಕ ಮತಗಳೆಂದು ಮತಗಳು ೩ ವಿಧವಾಗಿರುತ್ತವೆ. ಅವುಗಳ ಪೈಕಿ ಚಾರ್ವಾಕ-ಬೌದ್ಧ-ಜೈನ-ಪಾಶುಪತಾದಿ ಮತಗಳು ಅವೈದಿಕ ಮತಗಳು. ಸಾಂಖ್ಯ-ಯೋಗ-ನೈಯಾಯಿಕ-ವೈಶೇಷಿಕ-ಕೌಮಾರಿಲ-ವೈಯಾಕರಣ ಮತಗಳು ವೈದಿಕಾವೈದಿಕ ಮತಗಳು. ಶಂಕರ ಯಾದವ-ಭಟ್ಟಭಾಸ್ಕರ-ರಾಮಾನುಜ-ಶ್ರೀಕಂಠ ಮಧ್ವಾಚಾರ್ಯ ಇವರುಗಳಿಂದ ಪ್ರವರ್ತಿತವಾದ ಮತಗಳು ವೈದಿಕ ಮತಗಳು.

**300. ನಾವು ಪ್ರತಿನಿತ್ಯ ರಾತ್ರಿ ಎಷ್ಟು ಗಂಟೆಗೆ ಮಲಗಬೇಕು?**

ಉ. **"ಯಾಮಾತ್ಪರತ ಏವಾಥ ಸ್ವಪೇದ್ಧ್ಯಾಯನ್ ಜನಾರ್ದನಮ್।**

ರಾತ್ರಿ ಒಂದು ಯಾಮದ ಮೇಲೆ ನಾವು ಮಲಗಬೇಕು. ಒಂದು ಯಾಮ ಅಂದರೆ ಮೂರು ತಾಸು. ಸೂರ್ಯ ಮುಳುಗಿದ ಮೇಲೆ ಮೊದಲನೇ ಯಾಮ ಆರು ಘಂಟೆಯಿಂದ ಒಂಭತ್ತು ಘಂಟೆ ತನಕ. ಆದ್ದರಿಂದ ನಾವು ಪ್ರತಿನಿತ್ಯ ರಾತ್ರಿ ಒಂಭತ್ತು ಘಂಟೆ ಮೇಲೆ ಮಲಗಬೇಕು. ಅದಕ್ಕಿಂತ ಪೂರ್ವದಲ್ಲಿ ಮಲಗಬಾರದು.

**301. ಪುರಾಣಗಳಲ್ಲಿ ಸಾತ್ವಿಕ-ರಾಜಸ-ತಾಮಸವೆಂದು ತ್ರೈವಿಧ್ಯವು ಇರುವಂತೆ**

ಪುಷ್ಪಗಳಲ್ಲಿ ತ್ರೈವಿಧ್ಯ ಉಂಟೇ?

ಉ. (ಕೃ.ಸ್ಮೃ. ಆ. ಪ್ರ. ಪು. ೧೪೧)

" ಸಾತ್ತ್ವಿಕಾದಿ ಪುಷ್ಪಂ ಕಪಿಂಜಲಸಂಹಿತಾಯಾಂ -

ಸಾತ್ವಿಕಂ ಶುಕ್ಲಪುಷ್ಪಾಣಿ ರಾಜಸಂ ರಕ್ತಪುಷ್ಪಕಂ।

ತಾಮಸಂ ಕೃಷ್ಣಪುಷ್ಪಂ ಚ ಪೀತಮಿಶ್ರಂ ತಥೋಚ್ಯತೇ॥ಇತಿ॥

ಎಂದು ಕಪಿಂಜಲಸಂಹಿತೆಯಲ್ಲಿ ಹೇಳಿದಂತೆ - ಬಿಳಿ ಪುಷ್ಪಗಳು, ಸಾತ್ವಿಕ ಪುಷ್ಪಗಳು ಕೆಂಪು ಪುಷ್ಪಗಳು ರಾಜಸ ಪುಷ್ಪಗಳು. ಕಪ್ಪು ಪುಷ್ಪಗಳು ಹಾಗೂ ಹಳದೀ ಮಿಶ್ರಿತ ಪುಷ್ಪಗಳು ತಾಮಸ ಪುಷ್ಪಗಳೆಂದು ತಿಳಿಯಬೇಕು.

302. ಕೆಲವೊಂದು ಸ್ನೇಹಿತರುಗಳನ್ನು ಬಿಡಬೇಕೆಂದು ಹಿರಿಯರು ಹೇಳುತ್ತಾರೆ. ಅಂತಹ ಸ್ನೇಹಿತರು ಯಾರು?

ಉ. (ಚಾಣಕ್ಯ ನೀತಿ - ಅಧ್ಯಾಯ-೨-ಶ್ಲೋ-೫)

"ಪರೋಕ್ಷ್ಯೇ ಕಾರ್ಯಹಂತಾರಂ ಪ್ರತ್ಯಕ್ಷೇ ಪ್ರಿಯವಾದಿನಮ್।

ವರ್ಜಯೇತ್ತಾದೃಶಂ ಮಿತ್ರಂ ವಿಷಕುಂಭಪಯೋಮುಖಮ್॥"

ಎಂದು ಹೇಳಿದಂತೆ ಸ್ನೇಹಿತನೆಂದು ಹೇಳಿಕೊಳ್ಳುವ ಯಾವನು ನಮ್ಮ ಬೆನ್ನ ಹಿಂದೆ ನಿಂತು ನಮ್ಮ ಕೆಲಸಗಳನ್ನು ಹಾಳು ಮಾಡುವನೋ ಮತ್ತು ಎದುರಿಗೆ ಮಾತ್ರ ಸಿಹಿಯಾದ ಮಾತುಗಳನ್ನು ಆಡುತ್ತಿರುತ್ತಾನೆಯೋ ಅಂಥ ಹಾಲಿನ ಮುಖವಾಡ ವಿರುವ ವಿಷದ ಗಡಿಗೆಯಂಥ ಸ್ನೇಹಿತರನ್ನು ತ್ಯಾಗ ಮಾಡಬೇಕು.

303. ಯಾರ ಯಾರ ನಡುವೆ ಹೋಗಬಾರದು?

ಉ. (ಚಾಣಕ್ಯನೀತಿ ಅಧ್ಯಾಯ ೭, ಶ್ಲೋ ೫)

"ವಿಪ್ರಯೋಃ ವಿಪ್ರವಹ್ನ್ಯೋಶ್ಚ ದಂಪತ್ಯೋಃ ಸ್ವಾಮಿಭೃತ್ಯಯೋಃ।

ಅಂತರೇ ನೈವ ಗಂತವ್ಯಂ ಹರಸ್ಯ ವೃಷಭಸ್ಯ ಚ॥

ಎಂದು ಹೇಳಿದಂತೆ ಇಬ್ಬರು ಬ್ರಾಹ್ಮಣರ ಮಧ್ಯೆ-ಬ್ರಾಹ್ಮಣ ಮತ್ತು ಅಗ್ನಿಯ ಮಧ್ಯೆ ದಂಪತಿಗಳ ಮಧ್ಯೆ-ಸ್ವಾಮಿ ಸೇವಕನ ಮಧ್ಯೆ-ಮತ್ತು-ಶಿವಲಿಂಗ ಮತ್ತುಬಸವನ ಮಧ್ಯದಲಿ ಹಾದು ಹೋಗಬಾರದು.

304. ಕಾಲಿನಿಂದ ಮಗುವನ್ನು ಮುಟ್ಟಬಾರದೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?

ಉ.(ಚಾಣಕ್ಯನೀತಿ ಅಧ್ಯಾಯ ೭, ಶ್ಲೋಕ ೬)

ಪಾದಾಭ್ಯಾಂ ನ ಸ್ಪೃಶೇದಗ್ನಿಂ ಗುರುಂ ಬ್ರಾಹ್ಮಣಮೇವ ಚ।

**ನೈವ ಗಾಂ ನ ಕುಮಾರೀಂ ಚ ನ ವೃದ್ಧಂ ನ ಶಿಶುಂ ತಥಾ ॥ "**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ -ಬೆಂಕಿ-ಗುರು-ಬ್ರಾಹ್ಮಣ-ಹಸು ಕನ್ಯೆ -ವೃದ್ಧ-ಮತ್ತು ಮಗು ಇವರುಗಳನ್ನು ಕಾಲುಗಳಿಂದ ಸ್ಪರ್ಶಮಾಡಬಾರದು.

**305. ಮಾನವನ ಸಹಜ ಗುಣಗಳು ಯಾವುವು?**

ಉ. **ದಾತೃತ್ವಂ, ಪ್ರಿಯವಕ್ತೃತ್ವಂ, ಧೀರತ್ವಂ ಉಚಿತಜ್ಞತಾ ।**
**ಅಭ್ಯಾಸೇನ ನ ಲಭ್ಯಂತೇ, ಚತ್ವಾರಸ್ಸಹಜಾ ಗುಣಾಃ ॥**
ಎಂದು ಹೇಳಿದಂತೆ ದಾತೃತ್ವಂ (ದಾನಮಾಡುವಿಕೆ), ಪ್ರಿಯವಕ್ತೃತ್ವಂ (ಪ್ರಿಯವಾಗಿ ಮಾತನಾಡುವುದು), ಧೀರತ್ವಂ (ಧೈರ್ಯ), ಉಚಿತಜ್ಞತೆ (ಉಚತವಾದದ್ದನ್ನು ತಿಳಿಯುವಿಕೆ) ಈ ನಾಲ್ಕು ಗುಣಗಳು ಮಾನವನ ಸಹಜವಾದ ಗುಣಗಳು. ಇವುಗಳು ಅಭ್ಯಾಸದಿಂದ ಬರುವುದಿಲ್ಲ.

**306. ಯಾವ ಸ್ಥಳವು ವಾಸ ಮಾಡಲು ಯೋಗ್ಯವಲ್ಲ?**

ಉ. **ತತ್ರ ಮಿತ್ರ ನ ವಸ್ತವ್ಯಂ ಯತ್ರ ನಾಸ್ತಿ ಚತುಷ್ಟಯಮ್ ।**
**ಋಣದಾತಾ ಚ ವೈದ್ಯಶ್ಚ ಶ್ರೋತ್ರಿಯಃ ಸಜಲಾನದೀ ॥**
ಎಂದು ಹೇಳಿದಂತೆ ಯಾವ ಸ್ಥಳದಲ್ಲಿ ಸಾಲ ಕೊಡುವವನು, ವೈದ್ಯನು ಶ್ರೋತ್ರಿಯನು ಮತ್ತು ನೀರಿನಿಂದ ಕೂಡಿದ ನದಿಯು, ಈ ನಾಲ್ಕು ಇರುವುದಿಲ್ಲವೋ ಅಂತಹ ಸ್ಥಳವು ವಾಸಕ್ಕೆ ಯೋಗ್ಯವಲ್ಲ.

**307. ಸಜ್ಜನ-ದುರ್ಜನರ ನಡುವೆ ಪ್ರಥಮತಃ ವಂದ್ಯರು ಯಾರು ಏಕೆ?**

ಉ. **ದುರ್ಜನಃ ಪ್ರಥಮಂ ವಂದ್ಯಃ ಸಜ್ಜನಸ್ತದನಂತರಮ್ ।**
**ಮುಖಪ್ರಕ್ಷಾಲನಾತ್ಪೂರ್ವಂ ಗುದಪ್ರಕ್ಷಾಲನಂ ಯಥಾ ॥**
ಎಂದು ಹೇಳಿದಂತೆ-ಲೋಕದಲ್ಲಿ ಮುಖಪ್ರಕ್ಷಾಲನಕ್ಕಿಂತ ಪೂರ್ವದಲ್ಲಿ ಗುದಪ್ರಕ್ಷಾಲನೆಯು ಹೇಗೆ ಕಂಡುಬಂದಿದೆಯೋ ಅದರಂತೆ ಸಜ್ಜನ ದುರ್ಜನರ ನಡುವೆ ಗುದ(ನೀಚ) ಸ್ಥಾನಾಪನ್ನರಾದ ದುರ್ಜನರು ಪ್ರಥಮತಃ ವಂದ್ಯರು.

**308. ಮಾತು-ಧ್ಯಾನ-ಊಟ-ಹಾಗೂ ಸ್ನಾನ ಇವುಗಳನ್ನು ಹೇಗೆ ಮಾಡಬೇಕೆಂಬುದನ್ನು ದೃಷ್ಟಾಂತ ಕೊಟ್ಟು ತಿಳಿಸಿರಿ.**

ಉ. **"ಶುಕವದ್ಭಾಷಣಂ ಕುರ್ಯಾತ್ ಬಕವದ್‌ಧ್ಯಾನಮಾಚರೇತ್ ।**

**ಅಜವಚ್ಚರ್ವಣಂ ಕುರ್ಯಾತ್ ಗಜವತ್ ಸ್ನಾನಮಾಚರೇತ್ ॥**

ಎಂದು ಹೇಳಿದಂತೆ, ಗಿಣಿ (ಗಿಳಿ) ಯಂತೆ ಮಾತು ಮುದ್ದಾಗಿರಬೇಕು ಬಕಪಕ್ಷಿಯಂತೆ ದೀರ್ಘಕಾಲ ಧ್ಯಾನ ಮಾಡಬೇಕು. ಆಡಿನಂತೆ (ಆಡು ಮುಟ್ಟದ ಸೊಪ್ಪಿಲ್ಲ ಎಂಬಂತೆ) ಆರು ಬಗೆಯ ರಸಗಳಲ್ಲಿಯೂ ಸಮಾನ ಪ್ರೀತಿಯಿದ್ದು ಷಡ್ರಸಾನ್ನ ಭಕ್ಷಿಸಬೇಕು. ಇದು ಆರೋಗ್ಯಕ್ಕೆ ಒಳ್ಳೆಯದು. ಆನೆಯಂತೆ ಧೀರ್ಘಕಾಲ ಸ್ನಾನದ ಸುಖವನ್ನು ಅನುಭವಿಸುತ್ತಾ ಸ್ನಾನ ಮಾಡಬೇಕು.

**309. ನಾಲ್ಕು ವರ್ಣದವರಿಗೂ ಅವರವರ ವರ್ಣಕ್ಕೆ ಅನುಗುಣವಾಗಿ ಧರಿಸಲು ವಸ್ತ್ರವು ವಿಹಿತವಾಗಿದೆ ಎಂದು ಕೆಲವರು ಹೇಳುತ್ತಾರೆ. ಇದು ನಿಜವೆ? ಇದಕ್ಕೆ ಪ್ರಮಾಣವೇನು?**

ಉ. **(ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀಕೃತಪುಟ ೧೪)**
**ವರ್ಣಭೇದೇನ ವಸ್ತ್ರಭೇದಮಾಹ ಭೃಗುಃ-**
**"ಬ್ರಾಹ್ಮಣಸ್ಯ ಸಿತಂ ವಸ್ತ್ರಂ ನೃಪತೇಃ ರಕ್ತಮುಲ್ಬಣಂ ।**
**ಪೀತಂ ವೈಶ್ಯಸ್ಯ ಶೂದ್ರಸ್ಯ ನೀಲಂ ಮಲವದಿಷ್ಯತೇ ॥**
ಎಂಬಿ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಬ್ರಾಹ್ಮಣನಿಗೆ ಬಿಳಿವಸ್ತ್ರವೂ, ಕ್ಷತ್ರಿಯನಿಗೆ ಧಾತುರಕ್ತವಸ್ತ್ರವೂ, ವೈಶ್ಯನಿಗೆ ಹಳದಿ ವಸ್ತ್ರವೂ, ಶೂದ್ರನಿಗೆ ಕಪ್ಪು ವಸ್ತ್ರವೂ ಧರಿಸಲು ವಿಹಿತವಾಗಿದೆ.

**310. ಶಾಸ್ತ್ರನಿಷಿದ್ಧವಾದ ಪದಾರ್ಥಗಳನ್ನು ನಾವು ತಿಂದರೆ ಏನಾಗುತ್ತದೆ?**

ಉ. **ನಿಷಿದ್ಧಭಕ್ಷಣಂ ಕೃತ್ವಾ ಮೋಹಾತ್ ಸೂಕರತಾಂ ವ್ರಜೇತ್ ।**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಮೋಹದಿಂದ/ ಅಜ್ಞಾನದಿಂದ ನಿಷಿದ್ಧವಾದ ಪದಾರ್ಥಗಳನ್ನು ತಿಂದರೆ ಹಂದಿ ಜನ್ಮವು ಬರುತ್ತದೆ. ಆದ್ದರಿಂದ ತಿನ್ನಬಾರದು.

**311. ಮಲಿನವಾದ ಬಟ್ಟೆಯನ್ನುಟ್ಟರೆ ನಗ್ನನಂತೆಯೇ ಎಂದು ಕೆಲವರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **(ಸ್ಮೃತ್ಯರ್ಥಸಾಗರ)**
**ಮಲವಸ್ತ್ರೋ ದಗ್ಧವಸ್ತ್ರಃ ಛಿನ್ನವಸ್ತ್ರೋऽರ್ಧವಸ್ತ್ರಕಃ ।**
**ಏಕವಾಸಾ ಅವಾಸಶ್ಚ ನಗ್ನ ಏವ ಭವೇನ್ನರಃ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಬಟ್ಟೆ ಮಲಿನವಾಗಿದ್ದಲ್ಲಿ, ಸುಟ್ಟಿದ್ದಲ್ಲಿ, ಹರಿದಿದ್ದಲ್ಲಿ ಅಂತಹ ಬಟ್ಟೆಯನ್ನುಟ್ಟರೆ ಆ ವ್ಯಕ್ತಿ ನಗ್ನನೆನಿಸುವನು. ಮತ್ತು ಅರ್ಧಬಟ್ಟೆಯನ್ನು - ಒಂದೇ ಬಟ್ಟೆಯನ್ನು ಉಟ್ಟರೂ ಅಂತಹ ವ್ಯಕ್ತಿ ನಗ್ನನೆನಿಸುವನು ಮತ್ತು ಬಟ್ಟೆಯನ್ನು ಉಡದಿದ್ದರೂ ಸಹ ಅಂತಹ ವ್ಯಕ್ತಿ ನಗ್ನನೆನಿಸುತ್ತಾನೆ.

**312. ಉಪ್ಪಿನಿಂದ ನಾವು ಹಲ್ಲನ್ನು ತಿಕ್ಕಬಹುದೇ?**

ಉ. **"ವಂಶಪಲ್ಲಿಆಚಾರ್ಯಕೃತಸದಾಚಾರಸ್ಮೃತಿವ್ಯಾಖ್ಯಾನೇ**
**ಆಹ್ನಿಕಕೌಸ್ತುಭೇ ಮುದ್ರಿತಪುಸ್ತಕೇ ಪು. ೬**
**ದಂತಧಾವನಮಂಗುಲ್ಯಾ ಪ್ರತ್ಯಕ್ಷಲವಣೇನ ಚ।**
**ಮೃತ್ತಿಕಾಭಕ್ಷಣೇ ಚೈವ ತುಲ್ಯಂ ಗೋಮಾಂಸಭಕ್ಷಣಮ್ ॥"**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಉಪ್ಪಿನಿಂದ ಹಲ್ಲನ್ನು ತಿಕ್ಕುವುದು ಗೋಮಾಂಸಭಕ್ಷಣಕ್ಕೆ ಸಮವಾದದ್ದು ಎಂದು ಹೇಳಿರುವುದರಿಂದ ಉಪ್ಪಿನಿಂದ ನಾವು ಹಲ್ಲನ್ನು ತಿಕ್ಕಬಾರದು.

**313. ಸಂಪ್ರದಾಯವೆಂದರೇನು?**

ಉ. **" ಸ್ವಕುಲಕ್ರಮಾಗತಾಚಾರಃ ಸಂಪ್ರದಾಯಃ"**
ಎಂದು (ಸ್ಮೃ. ಕಾ. ಪ್ರ. ಪು. ೮೭) ಹೇಳಿದಂತೆ ತನ್ನ ವಂಶ ಪರಂಪರೆಯಿಂದ ಬಂದಿರುವುದು ಸಂಪ್ರದಾಯ.

**314. ಲೋಕದಲ್ಲಿ ಧರ್ಮವು ಅನೇಕವಿಧವಾಗಿದೆಯೆಂದು ಹಿರಿಯರು ಹೇಳುತ್ತಾರೆ. ಅನೇಕ ವಿಧವಾದ ಧರ್ಮಗಳು ಯಾವವು?**

ಉ. **(ಸ್ಮೃ.ಕಾ.ಪ್ರ. ೭೦-೭೧)**
**" ಧರ್ಮೋ ಬಹುವಿಧೋ ಲೋಕೇ ಶ್ರುತಿಭೇದಮುಖೋದ್ಭವಃ।**
**ದೇಶಧರ್ಮಾಶ್ಚ ದೃಶ್ಯಂತೇ ಕುಲಧರ್ಮಾಸ್ತಥೈವ ಚ ॥**
**ಜಾತಿಧರ್ಮಾಃ ವಯೋಧರ್ಮಾಃ ಗುಣಧರ್ಮಾಶ್ಚ ಶೋಭನೇ।**
**ಶರೀರಕಾಲಧರ್ಮಾಶ್ಚ ಆಪದ್ಧರ್ಮಾಸ್ತಥೈವ ಚ ॥**
ಎಂದು ಮಹಾಭಾರತದಲ್ಲಿ ಹೇಳಿದಂತೆ, ದೇಶಧರ್ಮಗಳು-ಕುಲಧರ್ಮಗಳು-ಜಾತಿಧರ್ಮಗಳು-ವಯೋಧರ್ಮಗಳು-ಗುಣಧರ್ಮಗಳು-ಶರೀರ ಮತ್ತು ಕಾಲಧರ್ಮಗಳು ಅಂದರೆ ಶರೀರ ಮತ್ತು

ಕಾಲಕ್ಕೆ ಅನುಗುಣವಾದ ಧರ್ಮಗಳು ಹಾಗೂ ಆಪದ್ಧರ್ಮಗಳು ಎಂದು ಮುಂತಾಗಿ ಪ್ರಪಂಚದಲ್ಲಿ ಅನೇಕ ವಿಧವಾದ ಧರ್ಮಗಳು ಕಂಡು ಬರುತ್ತವೆ.

**315.ನಾಲ್ಕು ಗಕಾರಗಳು ಯಾವುವು? ಮತ್ತು ಅವುಗಳ ಫಲವೇನು?**

ಉ. **"ಗೀತಾ ಗಂಗಾ ಚ ಗಾಯತ್ರೀ ಗೋವಿಂದೇತಿ ಹೃದಿ ಸ್ಥಿತೇ ।
ಚತುರ್ಗಕಾರಸಂಯುಕ್ತೇ ಪುನರ್ಜನ್ಮ ನ ವಿದ್ಯತೇ ॥**
ಎಂದು ಮಹಾಭಾರತದಲ್ಲಿ ಹೇಳಿದಂತೆ, ಗೀತಾ, ಗಂಗಾ, ಗಾಯತ್ರೀ ಹಾಗೂ ಗೋವಿಂದ ಇವು ನಾಲ್ಕು ಗಕಾರಗಳು. ಇವುಗಳ ಪಾರಾಯಣಾದಿಗಳು-ಸ್ನಾನ ಜಪ ಸ್ಮರಣೆ ಮುಂತಾದವುಗಳಿಂದ ಪುನರ್ಜನ್ಮವಿರುವುದಿಲ್ಲ.

**316.ನದ್ಯಾದಿಗಳಲ್ಲಿ ಸ್ನಾನ ಮಾಡುವಾಗ ಪರಸ್ಪರವಾಗಿ ಒಬ್ಬರಿಗೊಬ್ಬರು ನೀರನ್ನು ಎರಚಬಹುದೆ?**

ಉ. **(ಸ್ಮೃ.ಕಾ.ಪ್ರ.ಪು. ೩೬) " ತಥಾ ಶಾಂಡಿಲ್ಯಃ ಅಂಬು ನ ಕ್ಷೋಭಯೇದಂಗೈಃ, ಪಾದೇನೋತ್ಸಾದಯೇನ್ನ ಚ । ಚಲನಪ್ಲವನಕ್ರೀಡಾಂ ನ ಗಂಡೂಷಜಲಂ ಪಿಬೇತ್ ॥ ಅನ್ಯೋನ್ಯಂ ವಾ ಕ್ಷಿಪೇತ್ತೋಯಮ್ "**
ಎಂಬೀ ಮುಂತಾದ ಶಾಂಡಿಲ್ಯರ ವಚನವನ್ನು ಸ್ಮೃತಿಮುಕ್ತಾವಲೀ ಕಾಲನಿರ್ಣಯಪ್ರಕರಣದಲ್ಲಿ ಸ್ನಾನ ನಿಯಮವನ್ನು ತಿಳಿಸುವಾಗ ಶ್ರೀಕೃಷ್ಣಾಚಾರ್ಯರು ಉದಾಹರಿಸಿರುತ್ತಾರೆ. ಇದರಿಂದ ನದ್ಯಾದಿಗಳಲ್ಲಿ ಸ್ನಾನ ಮಾಡುವಾಗ ಪರಸ್ಪರವಾಗಿ ಒಬ್ಬರಿಗೊಬ್ಬರು ನೀರನ್ನು ಎರಚಬಾರದೆಂದು ತಿಳಿಯುತ್ತದೆ.

**317.ಯಾವ ವಿಷಯದಲ್ಲೇ ಆಗಲಿ ಅತ್ಯಂತಾಸಕ್ತಿಯನ್ನಾಗಲಿ ಅಥವಾ ಸರ್ವಥಾ ಅನಾಸಕ್ತಿಯನ್ನಾಗಲೀ ತೋರುವುದು ಒಳ್ಳೆಯದಾ?**

ಉ. **(ಸ್ಮೃ. ಷೋ, ಪ್ರ. ಪು. ೫೨೯)
" ನಕ್ತಂಚರ್ಯಾಂ ದಿವಾ ಸ್ವಾಪಂ ಆಲಸ್ಯಂ ಪೈಶುನಂ ಮದಮ್ ।
ಅತಿಯೋಗಮಯೋಗಂ ಚ ಶ್ರೇಯೋಽರ್ಥೀ ಪರಿವರ್ಜಯೇತ್ ॥**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಶ್ರೇಯಸ್ಸನ್ನು ಬಯಸುವವನು ಯಾವ ವಿಷಯದಲ್ಲೇ ಆಗಲಿ ಅತ್ಯಂತ ಹೆಚ್ಚಿನ ಆಸಕ್ತಿಯನ್ನಾಗಲೀ ಅಥವಾ ಸರ್ವಥಾ ಅನಾಸಕ್ತಿಯನ್ನಾಗಲೀ ತೋರಿಸಬಾರದು. ಹಾಗೆ ತೋರಿಸುವುದು ಒಳ್ಳೆಯದಲ್ಲ. ಒಳ್ಳೆಯ ವಿಷಯದಲ್ಲಿಯೇ ಆದರೂ ಅತಿ ಆಸಕ್ತಿಯು ಒಳ್ಳೆಯದಲ್ಲ. ಎಲ್ಲಾ

ವಿಷಯದಲ್ಲಿಯೂ ಮಧ್ಯಸ್ಥನಾಗಿರಬೇಕು.

**318. ಲೋಕದಲ್ಲಿ ಯಾವುದೇ ವಿಷಯದಲ್ಲಿ ಸ್ಪಷ್ಟವಾಗಿ ಮಾತನಾಡುವವನ ಬಗ್ಗೆ ಶಾಸ್ತ್ರವು ಏನು ಹೇಳುತ್ತದೆ?**

**ಉ. (ಚಾಣಕ್ಯನೀತಿ ಅಧ್ಯಾಯ ೫ ಶ್ಲೋಕ-೫)**

**"ನಿಸ್ಪೃಹೋ ನಾಧಿಕಾರೀ ಸ್ಯಾನ್ನಾಕಾಮೋ ಮಂಡನಪ್ರಿಯಃ।**
**ನಾವಿದಗ್ಧಃ ಪ್ರಿಯಂ ಬ್ರೂಯಾತ್ ಸ್ಫುಟವಕ್ತಾ ನ ವಂಚಕಃ॥**

ಎಂದು ಹೇಳಿದಂತೆ ಸ್ಪಷ್ಟವಾಗಿ ಮಾತನಾಡುವವನು ವಂಚಕನಲ್ಲ.

**319. ಪ್ರಾತಃ ದ್ಯೂತಪ್ರಸಂಗೇನ ಮಧ್ಯಾಹ್ನೇ ಸ್ತ್ರೀಪ್ರಸಂಗತಃ।**
**ರಾತ್ರೌ ಚೌರ್ಯಪ್ರಸಂಗೇನ ಕಾಲೋ ಗಚ್ಛತಿ ಧೀಮತಾಮ್॥**
**ಎಂಬ ಶ್ಲೋಕದ ಅಭಿಪ್ರಾಯವೇನು?**

**ಉ. (ಚಾಣಕ್ಯ ನೀತಿ ಅಧ್ಯಾಯ ೯, ಶ್ಲೋಕ ೧೧)**

" ಬೆಳಿಗ್ಗೆ ಜೂಜಾಡುವುದರಿಂದ ಅಂದರೆ ಮಹಾಭಾರತದ ಪಠನಾದಿಗಳಿಂದ - ಮಧ್ಯಾಹ್ನ ಸ್ತ್ರೀಪ್ರಸಂಗದಿಂದ ಅಂದರೆ ರಾಮಾಯಣ ಪಠನಾದಿಗಳಿಂದ- ರಾತ್ರಿ ಚೌರ್ಯಪ್ರಸಂಗದಿಂದ ಅಂದರೆ ಭಾಗವತದ ಪಠನಾದಿಗಳಿಂದ ಸತ್ಪುರುಷರಿಗೆ ಕಾಲವು ಕಳೆಯುತ್ತದೆಂದು ಅಭಿಪ್ರಾಯ.

**320. ನಮ್ಮನ್ನು ನಾವೇ ಹೊಗಳಿಕೊಳ್ಳುವುದು ಸರಿಯೋ? ತಪ್ಪೊ?**

**ಉ. (ಚಾಣಕ್ಯನೀತಿ ಅಧ್ಯಾಯ ೯ ಶ್ಲೋ.೧೨)**

**" ಸ್ವಹಸ್ತಗ್ರಥಿತಾ ಮಾಲಾ ಸ್ವೇನ ಘೃಷ್ಟಂ ಚ ಚಂದನಂ।**
**ಸ್ವಕೃತಂ ಚಾತ್ಮಸ್ತೋತ್ರಂ ಚ ಶಕ್ರಸ್ಯಾಪಿ ಶ್ರಿಯಂ ಹರೇತ್॥"**

ಎಂದು ಹೇಳಿದಂತೆ ತನ್ನ ಕೈಯಿಂದಲೇ ಕಟ್ಟಿದ ಹೂ ಮಾಲೆಯನ್ನು ಧರಿಸಿಕೊಂಡರೆ ತಾನೇ ತೆಯ್ದ ಗಂಧವನ್ನು ಹಚ್ಚಿಕೊಂಡರೆ - ಮತ್ತು ತನ್ನನ್ನು ತಾನೇ ಹೊಗಳಿಕೊಂಡರೆ ಅವನು ದೇವೇಂದ್ರನೇ ಆಗಿದ್ದರೂ ಸರಿ ಅಂಥವನ ಐಶ್ವರ್ಯವು ನಾಶವಾಗುತ್ತದೆ. ಆದ್ದರಿಂದ ನಮ್ಮನ್ನು ನಾವೇ ಹೊಗಳಿ ಕೊಳ್ಳುವುದು ಸರಿಯಲ್ಲ.

**321. ಹಗಲಿನಲ್ಲಿ ಮಾಡಬೇಕಾದ ಕೆಲವೊಂದು ಕರ್ತವ್ಯವನ್ನು ಕಾರಣಾಂತರದಿಂದ**

ಹಗಲಿನಲ್ಲಿ ಮಾಡದಿದ್ದಲ್ಲಿ ಆ ಕರ್ತವ್ಯಗಳನ್ನು ರಾತ್ರಿ ಮಾಡಬಹುದೆ?

ಉ. (ಕೃಸ್ಮೃ. ಕಾ. ಪ್ರ. ಪು. ೧೧೯-೧೨೦)

ಅತ್ರ ಸಂಗ್ರಹೇ ವಿಶೇಷೋ ದರ್ಶಿತಃ-

"ರಾತ್ರೌ ಪ್ರಹರಪರ್ಯಂತಂ ದಿವಾಕೃತ್ಯಾನಿ ಕಾರಯೇತ್।

ಬ್ರಹ್ಮಯಜ್ಞಂ ಚ ಸೌರಂ ಚ ವರ್ಜಯಿತ್ವಾ ವಿಶೇಷತಃ॥

ಎಂದು ಹೇಳಿದಂತೆ ಬ್ರಹ್ಮಯಜ್ಞ-ಸೂರ್ಯನಮಸ್ಕಾರ ಇವುಗಳನ್ನು ಬಿಟ್ಟು ಹಗಲಿನಲ್ಲಿ ಮಾಡಬೇಕಾದ ಕೆಲವೊಂದು ಕರ್ತವ್ಯ ಕರ್ಮಗಳನ್ನು ಹಗಲಿನಲ್ಲಿ ಕಾರಣಾಂತರದಿಂದ ಮಾಡಲು ಆಗದಿದ್ದಲ್ಲಿ ಆ ಕರ್ತವ್ಯಕರ್ಮಗಳನ್ನು ರಾತ್ರಿ ಒಂದು ಜಾವದ ಒಳಗಾಗಿ ಮಾಡಿ ಮುಗಿಸಬಹುದು.

322. ಕೆಲವೊಂದು ಸಂದರ್ಭಗಳಲ್ಲಿ ಮೌನವನ್ನು ಆಚರಿಸಬೇಕೆಂದು ಹಿರಿಯರು ಹೇಳುತ್ತಾರೆ. ಆ ಸಂದರ್ಭಗಳು ಯಾವವು?

ಉ. "ಸ್ನಾನಭೋಜನಯೋರ್ಹೋಮೇ ಜಪೇ ವೈ ದಂತಧಾವನೇ।

ಪುರೀಷಮೂತ್ರೋತ್ಸರ್ಗೇ ಚ ಸಪ್ತ ಮೌನಂ ವಿಧೀಯತೇ॥"

ಎಂದು ಹೇಳಿದಂತೆ-ಸ್ನಾನ, ಭೋಜನ, ಹೋಮ, ಜಪ, ದಂತಧಾವನ, ಮೂತ್ರವಿಸರ್ಜನ/ನೆ ಹಾಗೂ ಮಲವಿಸರ್ಜನ/ನೆ, ಈ ಏಳು ಸಂದರ್ಭಗಳಲ್ಲಿ ಮೌನವನ್ನು ಆಚರಿಸಬೇಕು. (ಸ್ಮೃತ್ಯರ್ಥಸಾಗರ)

323. ಪರಪಾಕ ಬಿಟ್ಟವನಿಗೆ ಪ್ರತಿಗ್ರಹದಿಂದ ದೋಷವಿಲ್ಲವೆಂದು ಕೆಲವರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು.

ಉ. (ಗರುಡ ಪುರಾಣ ೮-೫೬)

ಸ್ವಾಧ್ಯಾಯಹೋಮಸಂಯುಕ್ತಃ ಪರಪಾಕವಿವರ್ಜಿತಃ।

ರತ್ನಪೂರ್ಣಾಮಪಿ ಮಹೀಂ ಪ್ರತಿಗೃಹ್ಯ ನ ಲಿಪ್ಯತೇ॥

ಎಂದು ಗರುಡ ಪುರಾಣದಲ್ಲಿ ಹೇಳಿದಂತೆ-ಸ್ವಾಧ್ಯಾಯ ಅಂದರೆ ಸ್ವಶಾಖಾಧ್ಯಯನ/ವೇದಾಧ್ಯಯನ ಹಾಗೂ ಹೋಮಗಳಿಂದ ಕೂಡಿದವನೂ, ಪರಪಾಕ ಬಿಟ್ಟವನೂ, ದಾನಕ್ಕೆ ಉತ್ತಮ ಪಾತ್ರ. ಅವನು ರತ್ನಪೂರ್ಣವಾದ ಭೂಮಿಯನ್ನೇ ದಾನವಾಗಿ ಪಡೆದರೂ ಪಾಪವುಳ್ಳವ ನಾಗಲಾರ.

**324. ರುದ್ರದೇವರು ವೈಷ್ಣವಾಗ್ರೇಸರರು ಎಂಬುದಕ್ಕೆ ಪ್ರಮಾಣವೇನು?**

ಉ. ವಾಯುಪುರಾಣಾಂತರ್ಗತ ಮಾಘಮಾಸ ಮಹಾತ್ಮೆಯಲ್ಲಿ ಒಂದನೇ ಅಧ್ಯಾಯದಲ್ಲಿ ಮಾಸಗಳಲ್ಲಿ ಮಾಘಮಾಸವೇ ಶ್ರೇಷ್ಠವಾದದ್ದು ಎಂದು ಹೇಳುವ ಸಂದರ್ಭದಲ್ಲಿ "ವೈಷ್ಣವಾನಾಂ ಯಥಾ ರುದ್ರಃ- ತಥಾ ವೈ ಮಾಘ ಮಾಸೋsಯಂ ಮಾಸಾನಾಮುತ್ತಮೋತ್ತಮಃ" ಎಂಬೀ ಮುಂತಾದ ಶ್ಲೋಕ ಗಳಿಂದ (ಬ್ರಹ್ಮ- ವಾಯು-ಸರಸ್ವತಿ-ಭಾರತೀದೇವಿಯರನ್ನು ಬಿಟ್ಟು) ವಿಷ್ಣು ಭಕ್ತರಲ್ಲಿ ರುದ್ರದೇವರು ಹೇಗೆ ಶ್ರೇಷ್ಠರೋ ಅದರಂತೆ ಮಾಸಗಳಲ್ಲಿ ಮಾಘ ಮಾಸವು ಶ್ರೇಷ್ಠವಾದದ್ದೆಂದು ಹೇಳಲಾಗಿದೆ. ಇದರಿಂದ ರುದ್ರದೇವರು ವೈಷ್ಣವಾಗ್ರೇಸರರು ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

**325. ಅಪವಿತ್ರವಾದ ಅಮೇಧ್ಯ ಮುಂತಾದವುಗಳಲ್ಲಿ ಸೇರಿಕೊಂಡಿರುವ ಬಂಗಾರವನ್ನು ಸ್ವೀಕರಿಸಬಹುದೇ? (ತೆಗೆದುಕೊಳ್ಳ ಬಹುದುದೆ?)**

ಉ. **(ಸ್ಮೃ.ಪೋ.ಪ್ರ. ಪು. ೫೨೨)**

**"ವಿಷಾದಪ್ಯಮೃತಂ ಗ್ರಾಹ್ಯಂ ಬಾಲಾದಪಿ ಸುಭಾಷಿತಮ್।**
**ಅಮಿತ್ರಾದಪಿ ಸದ್ವೃತ್ತಂ ಅಮೇಧ್ಯಾದಪಿ ಕಾಂಚನಮ್॥"**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಅಮೇಧ್ಯ ಮುಂತಾದ ಅಪವಿತ್ರ ವಸ್ತುವಿನಲ್ಲಿ ಸೇರಿಕೊಂಡಿದ್ದರೂ ಬಂಗಾರವನ್ನು ಸ್ವೀಕರಿಸಬಹುದು (ತೆಗೆದುಕೊಳ್ಳಬಹುದು) ಬಂಗಾರವು ಯಾವಾಗಲೂ ಶುದ್ಧವಾದದ್ದು.

**326. ನಮ್ಮ ನಮ್ಮ ಮನೆಗಳಲ್ಲಿ ಆಹ್ವಾನಿತ ಬ್ರಾಹ್ಮಣರನ್ನು ಭೋಜನಕ್ಕೆ ಕೂಡಿಸಿ ಭೋಜನದ ಆರಂಭದಲ್ಲೇ ಸಾವಕಾಶವಾಗಿ ಆಗಲಿ (ಸಾವಕಾಶವಾಗಿ ಆಗಬೇಕು) ಎಂದು ಬ್ರಾಹ್ಮಣರನ್ನು ಉದ್ದೇಶಿಸಿ ಮನೆಯ ಯಜಮಾನನು ಹೇಳುವುದು ರೂಢಿಯಲ್ಲಿದೆ. ಇದರ ಹಿನ್ನೆಲೆ ಏನು? ಅಥವಾ ಇದರ ಪರಮಾರ್ಥವೇನು?**

ಉ. **ಅನಾರೋಗ್ಯಂ ಅನಾಯುಷ್ಯಂ ಅಸ್ವರ್ಗ್ಯಂ ಚಾತಿಭೋಜನಂ।**
**ಅಪುಣ್ಯಂ ಲೋಕವಿದ್ವಿಷ್ಟಂ** . . . . . . . . . . .

ಅಂದರೆ ಅತಿಯಾಗಿ ಊಟಮಾಡುವುದು ಆರೋಗ್ಯಕ್ಕೆ ಬಾಧಕ, ಆಯುಷ್ಯಕ್ಕೆ ಮಾರಕ, ಸ್ವರ್ಗವಿರೋಧಿ, ಪಾಪಸಾಧನ ಮತ್ತು ಲೋಕ ನಿಂದಿತ ಎಂಬುದಾಗಿ ನಿರೂಪಿಸಿ "ತಸ್ಮಾತ್ತತ್ಪರಿವರ್ಜಯೇತ್" ಆದುದರಿಂದ ಅತಿ

ಭೋಜನವನ್ನು ತ್ಯಜಿಸಬೇಕು ಎಂದು ಮನುಸ್ಮೃತಿಯಲ್ಲಿ ಎಚ್ಚರಿಸಲಾಗಿದೆ. ಉದರದ ಅರ್ಧಭಾಗವನ್ನಷ್ಟೇ ಆಹಾರ ಪದಾರ್ಥಗಳಿಂದ ತುಂಬಿಸಿ ಕಾಲು ಭಾಗವನ್ನು ನೀರಿನಿಂದ ತುಂಬಿಸಿ ಮತ್ತೊಂದು ಕಾಲು ಭಾಗವನ್ನು ವಾಯು ಸಂಚಾರಕ್ಕಾಗಿ ಖಾಲಿ ಬಿಡಬೇಕೆಂದು ಶಾಸ್ತ್ರದಲ್ಲಿ ಅಲ್ಲಲ್ಲಿ ತಿಳಿಸಿರುವ ಪ್ರಮೇಯ, ವೈದ್ಯಕೀಯ ಶಾಸ್ತ್ರದಲ್ಲೂ ಈ ನಿಯಮವನ್ನು ಒತ್ತಿ ಹೇಳಲಾಗಿದೆ.

**"ಅನ್ನೇನ ಕುಕ್ಷೇರ್ದ್ವಾವಶೌ ಪಾನೇನೈಕಂ ಪ್ರಪೂರಯೇತ್।**
**ಆಶ್ರಯಂ ಪವನಾದೀನಾಂ ಚತುರ್ಥಂ ಅವಶೇಷಯೇತ್॥** (ವಾಗ್ಭಟೀಅ-೪೬)
**ಜಠರಂ ಪೂರಯೇದರ್ಧಂ ಅನ್ನೈರ್ಭಾಗಂ ಜಲೇನ ಚ।**
**ವಾಯೋಃ ಸಂಚರಣಾರ್ಥಾಯ ಚತುರ್ಥಂ ಅವಶೇಷಯೇತ್॥**

(ಮಿ - ೪೭೭) ಎಂಬುದಾಗಿ

ಇನ್ನು ಶ್ರೀಐಜಿಸ್ವಾಮಿಗಳವರ ವಿದ್ಯಾಶಿಷ್ಯರಾದ ಶ್ರೀ ಅಡವೀ ಸ್ವಾಮಿಗಳವರ ಆಜ್ಞಾಪತ್ರದ ಪ್ರಕಾರ ಭೋಜನಕ್ಕೆ ಎರಡು ಘಳಿಗೆ ಕಾಲ ಅಂದರೆ ೪೮ ನಿಮಿಷಗಳ ಕಾಲಾವಕಾಶವು ಶಾಸ್ತ್ರದಲ್ಲಿ ಕೊಡಲಾಗಿದೆ ಎಂದು ತಿಳಿದು ಬರುತ್ತದೆ. ಆದ್ದರಿಂದ ಅವಸರವಾಗಿ ಊಟ ಮಾಡದಲೆ ನಿಧಾನವಾಗಿ ಭೋಜನ ಮಾಡಬೇಕೆಂದು ಯಜಮಾನನು ಬ್ರಾಹ್ಮಣರಲ್ಲಿ ವಿಜ್ಞಾಪನೆ ಮಾಡಿಕೊಳ್ಳಬೇಕು, ಎಂಬ ಅರ್ಥದ ಹಿನ್ನೆಲೆಯಲ್ಲಿ ಯಜಮಾನನು ಬ್ರಾಹ್ಮಣರನ್ನು ಉದ್ದೇಶಿಸಿ ಸಾವಕಾಶವಾಗಿ ಆಗಬೇಕೆಂದು ಪ್ರಾರ್ಥನೆ ಮಾಡುತ್ತಾನೆ/ಮಾಡಿಕೊಳ್ಳುತ್ತಾನೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಇದಲ್ಲದೆ ಅತಿಥಿಯನ್ನು ಶಾಸ್ತ್ರೀಯ ವಿಧಿಗಳು ಗುಣವಾಗಿ ಅವನ ಆರೋಗ್ಯಕ್ಕೆ ಪೋಷಕವಾಗುವಂತೆ ಪುಣ್ಯಪ್ರದವಾಗುವಂತೆ ತೃಪ್ತಿಪಡಿಸುವುದು ಯಜಮಾನನ ಹೊಣೆಗಾರಿಕೆಯೇ ಹೊರತು, ಹೇಗಾದರೂ ಮಾಡಿ ತೃಪ್ತಿ ಪಡಿಸುವಂತಹದ್ದಲ್ಲ. ಶಾಸ್ತ್ರೀಯವಾಗಿ ಆರೋಗ್ಯಕರವಾಗಿ ಅವನನ್ನು ತೃಪ್ತಿಪಡಿಸಬೇಕಾದರೆ ಅವನು ತನ್ನ ಹೊಟ್ಟೆಯಲ್ಲಿ ಅವಕಾಶ ಸಹಿತವಾಗಿ ಊಟ ಮಾಡುವಂತೆ ಮಾಡಬೇಕು. ಒಂದುವೇಳೆ ಅವನು ಹಾಗೆ ಅವಕಾಶ ಬಿಡದೆ ಊಟ ಮಾಡಿದರೆ, ಆ ಅಪರಾಧಕ್ಕೆ ಅವನಿಗೆ ಊಟ ಹಾಕಿದ ಯಜಮಾನನೂ ಪಾತ್ರಧಾರಿ ಯಾಗಬಲ್ಲನು. ಆದ್ದರಿಂದ ಊಟ ಮಾಡವವನು ತನ್ನ ಹೊಟ್ಟೆಯ ಅರ್ಧಭಾಗವನ್ನು ತುಂಬಿಸಿಕೊಳ್ಳಲು

ಬೇಕಾದ ಭೋಜನ ಹಾಕಿದ ಯಜಮಾನನೇ ಅವನು ಹೊಟ್ಟೆಯ ಕಾಲು ಭಾಗವನ್ನು ಗಾಳಿಯ ಸಂಚಾರಕ್ಕಾಗಿ ಅವಕಾಶವನ್ನು ಬಿಡುವಂತೆಯು ಕೇಳಿಕೊಳ್ಳಬೇಕು. ಊಟಕ್ಕೆ ಕೂಡುವವನು ಅನ್ಯಥಾ ಭಾವಿಸದಂತೆ ವಿನೀತನಾಗಿ ನಿವೇದಿಸಿಕೊಳ್ಳಬೇಕಷ್ಟೆ. ಆದ್ದರಿಂದ ಹೊಟ್ಟೆಯ ಎರಡು ಭಾಗವನ್ನು ಅನ್ನದಿಂದ ತುಂಬಿಸಿಕೊಂಡು, ಕಾಲು ಭಾಗವನ್ನು ನೀರಿನಿಂದ ತುಂಬಿಸಿಕೊಂಡು, ಇನ್ನೊಂದು ಕಾಲು ಭಾಗವನ್ನು ವಾಯುಸಂಚಾರಕ್ಕಾಗಿ ಖಾಲಿ ಬಿಡಬೇಕೆಂಬುದರ ಹಿನ್ನೆಲೆಯಲ್ಲಿ ಯಜಮಾನನು ವಿನಯದಿಂದ ವಾಯು ಸಂಚಾರಕ್ಕೆ ಅವಕಾಶವಿರುವಂತೆ ಭೋಜನ ಮಾಡಬೇಕೆನ್ನುವುದನ್ನು ಸೂಚಿಸುತ್ತಾ ಸಾವಕಾಶವಾಗಿ ಆಗಲಿ / ಆಗಬೇಕು ಎಂದು ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತಾನೆ ಎಂದು ಹೇಳಿದರೂ ತಪ್ಪಾಗಲಿಕ್ಕಿಲ್ಲ. ಇದಕ್ಕೆ ಪೂರಕವಾಗಿ ಯಜಮಾನನು ಬ್ರಾಹ್ಮಣನಿಗೆ ಊಟಕ್ಕೆ ಕುಳಿತ ಕೂಡಲೆ ನೀರನ್ನು ಬಡಿಸಿ ಸಾವಕಾಶವನ್ನು ಹೇಳುವುದರ ಮೂಲಕ ಊಟ ಮಾಡುತ್ತಿರುವ ಬ್ರಾಹ್ಮಣನು ತನ್ನ ಹೊಟ್ಟೆಯ ಕಾಲು ಭಾಗವನ್ನು ನೀರಿನಿಂದ ತುಂಬಿಸಿಕೊಳ್ಳಬೇಕಾದಂತೆ, ಮತ್ತೆ ಕಾಲು ಭಾಗದಲ್ಲಿ ಗಾಳಿಗೆ ಅವಕಾಶ ನೀಡಬೇಕು ಎಂದು ಸಾಂಕೇತಿಕವಾಗಿ ಸೂಚಿಸಿಕೊಡುವಂತೆಯೂ ಪದ್ಧತಿ ಇದೆ. ಒಟ್ಟಿನಲ್ಲಿ ಕಾಲಕ್ಕೆ ಸಂಬಂಧಪಟ್ಟಂತೆಯೂ, ಮತ್ತು ಭೋಜನಕ್ಕೆ ಕೂತವನ ಉದರದ ಅವಕಾಶಕ್ಕೆ ಸಂಬಂಧಪಟ್ಟಂತೆಯೂ, ಅಂದರೆ ಉದರವು ಬರೇ ಆಹಾರ ಪದಾರ್ಥಗಳಿಂದಲೇ ತುಂಬಿ ಹೋಗುವಂತೆ ಅವುಗಳನ್ನು ಸ್ವೀಕರಿಸದೇ, ವಾಯುಸಂಚಾರಕ್ಕೆ ಬೇಕಾದ ಎಡೆಯನ್ನು ಉಳಿಸಿಕೊಂಡು ಉದರದಲ್ಲಿ ವಾಯುಸಂಚಾರಕ್ಕೆ ಅವಕಾಶ ಸಹಿತವಾಗಿ ಊಟ ಮಾಡಿ ಎಂಬ ನಿವೇದನೆಯ ರೂಪವಾಗಿ ಸಾವಕಾಶವನ್ನು ಕೇಳಿಕೊಳ್ಳುವ ಪದ್ಧತಿಯು ಜಾರಿಯಲ್ಲಿ ಬಂದಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

**327. ನಮ್ಮ ಶ್ರೀಮಠದಲ್ಲಿ ಪ್ರತಿಯೊಬ್ಬ ಸ್ವಾಮಿಗಳವರ ಆರಾಧನೆಯ ದಿನ ಅನಧ್ಯಯನದ ದಿನವೆಂದು ಪರಿಗಣಿಸಿ ಅನಧ್ಯಯನವನ್ನು ಆಚರಿಸುತ್ತೇವೆ. ಇದಕ್ಕೆ ಪ್ರಮಾಣವೇನು?**

ಉ. ನಮ್ಮ ಶ್ರೀಮಠದಲ್ಲಿ ಯತಿಗಳ ಪುಣ್ಯದಿನವನ್ನು ಅನಧ್ಯಯನದ ದಿನವೆಂದು

ಪರಿಗಣಿಸಿ, ಅಂದು ಅನಧ್ಯಯನವನ್ನು ಆಚರಿಸುತ್ತೇವೆ. ಆ ದಿನದಂದು ವೃಂದಾವನಸ್ಥರಾದ ಆ ಯತಿಗಳು ವಿಶೇಷವಾಗಿ ಸನ್ನಿಹಿತರಾಗುವ ಪ್ರಯುಕ್ತ ಶಿಷ್ಯಾಗಮನೇ ಅನಧ್ಯಾಯಃ ಅಂದರೆ ಶಿಷ್ಯರು ಬಂದಲ್ಲಿ ಶಾಸ್ತ್ರಾಧ್ಯಯನ ನಡೆಸಬಾರದೆಂಬ ನಿಯಮಕ್ಕನುಗುಣವಾಗಿ, ಅವರ ವಿಶೇಷ ಸನ್ನಿಧಾನ ಉಂಟಾಗುವ ಅಂದು ಶಾಸ್ತ್ರಾಧ್ಯಯನವನ್ನು ನಡೆಸಬಾರದೆಂಬ ವಿಚಾರದ ಹಿನ್ನೆಲೆಯಲ್ಲಿ ಅಂದು ಅವರ ಹೆಸರಿನಲ್ಲಿ ವಿಶೇಷವಾಗಿ ಪೂಜಾದಿಗಳನ್ನು ನಡೆಸಿ, ಜಪ ಪಾರಾಯಣಾದಿಗಳನ್ನು ಮಾಡಿ ಅಂದು ವಿಶೇಷವಾಗಿ ಅವರ ಗುಣಗಾನ ಮಾಡಿ ವಿಶೇಷವಾಗಿ ಅವರ ಸ್ಮರಣೆಯನ್ನು ಮಾಡಬೇಕು.

**328. ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯಕೃತ ಶ್ರೀಹರಿವಾಯುಸ್ತುತಿಯ ಸ್ಥಾನದಲ್ಲಿ, ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ಹುಟ್ಟುವುದಕ್ಕಿಂತ ಪೂರ್ವದಲ್ಲಿ ಯಾವ ಸ್ತೋತ್ರವನ್ನು ಪಠಿಸುತ್ತಿದ್ದರು?**

ಉ. (ಕನ್ನಡ ತತ್ವವಾದ ಮಾರ್ಚ ೯೨ ಪುಟ ೭ ರಿಂದ)

ವಾಯುಸ್ತುತಿ ಎಂದಾಕ್ಷಣ ನಮಗೆ ತ್ರಿವಿಕ್ರಮ ಪಂಡಿತರು ರಚಿಸಿರುವ ವಾಯುಸ್ತುತಿಯು (ಶ್ರೀಹರಿವಾಯುಸ್ತುತಿಯ) ನೆನಪು ಬರುವುದು. ಆದರೆ ಇದಕ್ಕಿಂತಲೂ ಅಧಿಕೃತವಾದ ಇದಕ್ಕೂ ಮೂಲದಂತಿರುವ ವೈದಿಕ ವಾಯುಸ್ತುತಿ ಒಂದಿದೆ. ಷಟ್ ಪ್ರಶ್ನೋಪನಿಷತ್ತಿನಲ್ಲಿ ಪ್ರಸ್ತಾಪಿಸಲ್ಪಡುವ ಈ ವೈದಿಕ ವಾಯುಸ್ತುತಿಯು ಇಂದ್ರಿಯಾಭಿಮಾನಿ ದೇವತೆಗಳ ಮೂಲಕ ಹೊರಹೊಮ್ಮಿದೆ. ತ್ರಿವಿಕ್ರಮ ಪಂಡಿತಾಚಾರ್ಯರ ವಾಯುಸ್ತುತಿಯ ಹದಿನಾಲ್ಕು ಪದ್ಯಗಳು ವಾಯುದೇವರ ಮೂಲರೂಪದ ಮಹಿಮೆಯ ಕುರಿತಾಗಿದ್ದು, ಈ ಪದ್ಯಗಳಿಗೆ ಮೂಲದಂತೆ ಇರುವಂತಹದ್ದು, ವೈದಿಕ ವಾಯುಸ್ತುತಿ ಆದುದರಿಂದ ಒಂಬತ್ತು ಪದ್ಯಗಳಿಂದ ರೂಪುಗೊಂಡ ಈ ವೈದಿಕ ವಾಯುಸ್ತುತಿಯನ್ನು ಪಠಿಸಿ ಬಳಿಕ ಇದಕ್ಕೆ ವ್ಯಾಖ್ಯಾನ ರೂಪದಂತಿರುವ ತ್ರಿವಿಕ್ರಮ ಪಂಡಿತಾಚಾರ್ಯರ ವಾಯುಸ್ತುತಿಯನ್ನು ಪಠಿಸುವುದು ಸಮುಚಿತ.

ಪಠನೆಗಿಂತ ಮುಂಚೆ ಅದರ ಅಸಾಧಾರಣ ವೈಶಿಷ್ಟ್ಯವನ್ನು ವಿವೇಚಿಸಿಕೊಂಡು ಅದನ್ನು ಅನುಸಂಧಾನದಲ್ಲಿ ತಂದುಕೊಳ್ಳಬೇಕು.

**ಸ್ತುತಿಯ ವಿಸ್ತಾರ ನಿರೂಪಣೆ :-** ಇಂದ್ರಿಯಾಭಿಮಾನಿದೇವತೆಗಳು

ತಮ್ಮಲ್ಲಿ ಯಾರು ಶ್ರೇಷ್ಠರು ಎಂಬುದರ ಬಗ್ಗೆ ನಡೆಸಿದ ಸ್ಪರ್ಧೆ.ಅದರಲ್ಲಿ ಪ್ರಾಣದೇವನೇ ಶ್ರೆಷ್ಠ ಎಂದು ನಿರ್ಣಯವಾಗುವ ಆಖ್ಯಾಯಿಕೆ, ಐತರೇಯ-ಬೃಹದಾರಣ್ಯಕ ಹಾಗೂ ಛಾಂದೋಗ್ಯೋಪನಿಷತ್ತುಗಳಲ್ಲೆಲ್ಲ ಉಲ್ಲೇಖಿಸಲ್ಪಡುವುದು. ಆದರೆ ಸ್ಪರ್ಧೆಯಲ್ಲಿ ಸೋತ ರುದ್ರನೇ ಮುಂತಾದ ಇಂದ್ರಿಯಾಭಿಮಾನಿ ದೇವತೆಗಳು ಮುಖ್ಯಪ್ರಾಣನನ್ನು ಕುರಿತು ಸಲ್ಲಿಸಿರುವ ಸ್ತುತಿಯ ವಿಸ್ತಾರ ನಿರೂಪಣೆ ಷಟ್‌ಪ್ರಶ್ನೋಪನಿಷತ್ತಿನಲ್ಲಿ ಬಂದಿದೆ.

ಅಸಾಧಾರಣ ಮಹಿಮೆಗಳ ಉಲ್ಲೇಖ :- ತೇ ಪ್ರೀತಾಃ ಪ್ರಾಣಂ ಸ್ತುವಂತಿ ಪ್ರಾಣದೇವನ ಮಹಿಮೆಯನ್ನು ಕಂಡು ಪ್ರೀತರಾದ ರುದ್ರನೇ ಮುಂತಾದ ಇಂದ್ರಿಯಾಭಿಮಾನಿದೇವತೆಗಳು, ಪ್ರಾಣದೇವನನ್ನು ಸ್ತುತಿಸುವರೆಂಬ ಪ್ರಸ್ತಾವನೆಯಿಂದ ಪ್ರಾರಂಭವಾದ ಒಂಭತ್ತು ಪದ್ಯಗಳ ಈ ಸ್ತುತಿಯ ಯಾತೇ ತನೂರ್ವಾಚಿ ಪ್ರತಿಷ್ಠಿತಾ ಇತ್ಯಾದಿ ಪದ್ಯದಲ್ಲಿ ಇಂದ್ರಿಯನಿಯಾಮಕತ್ವ, ಏಷೋಽಗ್ನಿಸ್ತಪತಿ ಯದಾ ತ್ವಮಭಿವರ್ಷಸಿ ಇತ್ಯಾದಿ ಪದ್ಯಗಳಲ್ಲಿ ದವಾನವರ್ಷಣ ಮುಂತಾದ ಪ್ರಾಕೃತಿಕ ಘಟನೆಗಳ ನಿರ್ವಾಹಕತ್ವ, ದೇವನಾಮಸಿ ವಹ್ನಿತಮಃ . . . . . ಇತ್ಯಾದಿ ಪದ್ಯದಲ್ಲಿ ದೇವತೆಗಳಿಗೆ ಆಹುತಿ ಪ್ರಾಪಕತ್ವ, ವಯಮಾದ್ಯಸ್ಯ ದಾತಾರಃ ಎಂಬ ಮಾತಲ್ಲಿ ದೇವತೆಗಳ ಮೂಲಕ ಆಹಾರಸ್ವೀಕಾರ ಪ್ರಜಾಪತಿಶ್ಚರಸಿ ಗರ್ಭೇ. . . . ಎಂಬ ಮಾತಲ್ಲಿ ಗರ್ಭಸ್ರಷ್ಟೃತ್ವ, ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ ಎಂಬ ಮಾತಲ್ಲಿ ಸರ್ವಾಧಾರತ್ವ, ಪ್ರಾಣಸ್ಯೇತದ್ ವಶೇ ಸರ್ವಂ ತ್ರಿದಿವೇಯತ್ ಪ್ರತಿಷ್ಠಿತಂ ಎಂಬಲ್ಲಿ ಸ್ವರ್ಗಲೋಕಾಧಾರಕತ್ವ ಮುಂತಾದ ಪ್ರಾಣದೇವರ ಅಸಾಧಾರಣ ಮಹಿಮೆಗಳನ್ನು ಸರಳವಾಗಿ ಅಧಿಕೃತವಾಗಿ ಉಲ್ಲೇಖಿಸಲಾಗಿದೆ.

ಪಿತಾ ತ್ವಾಂ ಮಾತರಿಶ್ವನಃ ಮಾತೇವ ಪುತ್ರಾನ್ ರಕ್ಷಸ್ವ ಎಂಬ ಮಾತುಗಳಲ್ಲಿ ತತ್ತ್ವಾಭಿಮಾನಿದೇವತೆಗಳು ತಮಗೆ ತಂದೆಯಂತೆ ತಾಯಿಯಂತೆ ಇರುವವರು ಶ್ರೀವಾಯುದೇವರೆಂದು ನಿವೇದಿಸಿಕೊಂಡು ತಮ್ಮನ್ನು ಮಕ್ಕಳಂತೆ ಕಾಪಾಡಬೇಕೆಂದೂ, ತಮಗೆ ವಿವಿಧ ಸಂಪತ್ತನ್ನೂ, ಪ್ರಜ್ಞೆಯನ್ನೂ ಅನುಗ್ರಹಿಸಬೇಕೆಂದೂ, ಪ್ರಾರ್ಥಿಸಿಕೊಂಡಿರುವರು ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನಃ,

ಈ ವೈದಿಕ ವಾಯುಸ್ತುತಿಯ ಬೃಹತೀ ಛಂಧಸ್ಸಿಗೆ ವಾಯುದೇವರೇ

ಅಭಿಮಾನಿದೇವತೆ ಆಗಿರುವರು. ಆದುದರಿಂದ ಆ ಛಂದಸ್ಸು ಅವರಿಗೆ ಪ್ರಿಯತಮವಾದುದೆಂದು ಆ ಛಂದಸ್ಸಿನ ಪದ್ಯದಲ್ಲೇ ಮೊದಲು ಸ್ತುತಿಸಲಾಗಿದೆ.

ಏಷೋಽಗ್ನಿಸ್ತಪತಿ . . . . ಎಂದು ವೈದಿಕ ವಾಯುಸ್ತುತಿಯ ಮೊದಲ ಮಾತು ವಾಕ್ಯರೂಪದಲ್ಲಿರುವಂತಹದ್ದೆಂದು ಸಾಮಾನ್ಯವಾಗಿ ಪರಿಗಣಿಸಲಾಗುವುದು. ಆದರೆ ಉಳಿದೆಲ್ಲ ಮಾತುಗಳು ಶ್ಲೋಕರೂಪದಲ್ಲಿ ಇರುವುದರಿಂದ ಇದು ಶ್ಲೋಕಾತ್ಮಕವಾಗಿದೆ ಎನ್ನುವುದೇ ಸಮುಚಿತ. ವೈದಿಕ ವಾಯುಸ್ತುತಿಯು ವಾಯುದೇವರಿಗೆ ಪರಮ ಪ್ರಿಯವಾದ ಬೃಹತೀ ಛಂದಸ್ಸಿನ ಪದ್ಯದೊಂದಿಗೆ ಪ್ರಾರಂಭವಾಗುತ್ತದೆ ಎಂಬುದು ಇದರ ಒಂದು ವೈಶಿಷ್ಟ್ಯ.

ಒಂಭತ್ತು ಪದ್ಯಗಳ ಔಚಿತ್ಯ :- ಈ ವೈದಿಕ ವಾಯುಸ್ತುತಿ ಒಂಭತ್ತು ಪದ್ಯಗಳನ್ನು ಒಳಗೊಂಡಿದ್ದು, ವಾಯುದೇವರ ಒಂಭತ್ತು ರೂಪಗಳನ್ನು ಸ್ತುತಿಸುತ್ತಿದೆ. ವಾಯುದೇವರಿಗೆ ಪ್ರಾಣ ಅಪಾನ-ವ್ಯಾನ-ಉದಾನ ಹಾಗೂ ಸಮಾನ ಎಂಬ ಐದು ರೂಪಗಳಲ್ಲದೇ ದೇವತೆಗಳಲ್ಲಿ ಅಶನಾ ಪಿಪಾಸಾ-ಅಪಾನ ಹೂಗೂ ಮೃತ್ಯು ಎಂಬ ನಾಲ್ಕು ರೂಪಗಳಲ್ಲಿ (ರೂಪಗಳಿಂದ) ವಾಯುದೇವನು ಇರುವನೆಂದು ಐತರೇಯಭಾಷ್ಯ ತಿಳಿಸಿದೆ. ಅಶನಾ ಪಿಪಾಸಾಪಾನಶ್ಚ ಮೃತ್ಯುಶ್ಚೇತಿ ಚತುರ್ವಿಧಃ। ಏಕ ಏವ ಮಹಾನ್ ವಾಯುಃ ಸರ್ವದೇವೇಷು ಸಂಸ್ಥಿತಃ ॥ ಹೀಗೆ ದೇವತೆಗಳಲ್ಲಿ ಇರುವ ವಾಯುದೇವನ ಒಂಭತ್ತು ರೂಪಗಳನ್ನು ಸ್ತುತಿಸುವುದಕ್ಕೋ ಎಂಬಂತೆ ವೈದಿಕ ವಾಯುಸ್ತುತಿ ಒಂಭತ್ತು ಪದ್ಯಗಳನ್ನೊಳಗೊಂಡಿರುವುದು ಔಚಿತ್ಯಪೂರ್ಣ.

ಹೀಗೆ ಅನೇಕ ವೈಶಿಷ್ಟ್ಯಗಳನ್ನೊಳಗೊಂಡ ವೈದಿಕ ವಾಯುಸ್ತುತಿಯ ನಿತ್ಯ ಪಠನೆಯನ್ನು ರೂಢಿಯಲ್ಲಿ ಅಳವಡಿಸಿಕೊಳ್ಳುವುದು ಅತ್ಯಗತ್ಯ. ಒಟ್ಟಿನಲ್ಲಿ ಹೇಳುವುದಾದರೆ ತ್ರಿವಿಕ್ರಮ ಪಂಡಿತಾಚಾರ್ಯರಕ್ಕಿಂತ ಪೂರ್ವದಲ್ಲಿ ಈ ಮೇಲೆ ಕಂಡ ವೈದಿಕ ವಾಯುಸ್ತುತಿಯನ್ನು ಪಂಡಿತಾಚಾರ್ಯರ ವಾಯುಸ್ತುತಿಯ ಸ್ಥಾನದಲ್ಲಿ ಪಠಿಸುತ್ತಿದ್ದರು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

**329. ಪ್ರದೋಷ ಕಾಲದಲ್ಲಿ ರುದ್ರದೇವರ ದರ್ಶನ ಮಾಡಬೇಕೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. (ಕೃ. ಸ್ಮೃ. ಕಾ. ಪ್ರ. ಕನ್ನಡ ಪುಟ ೩೪೭) ವೃದ್ಧ ಮನುರಪಿ -
**ಸಾ ರಾತ್ರಿಃ ಸರ್ವಕರ್ಮಘ್ನೀ ಶಂಕರಾರಾಧನಂ ವಿನಾ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಮಹರುದ್ರದೇವರ ಸೇವೆಯ ಹೊರತು ಉಳಿದ ಎಲ್ಲಾ ಕಾರ್ಯಗಳನ್ನು ಪ್ರದೋಷ ಕಾಲವು ನಾಶನ ಮಾಡುತ್ತದೆ: ಅಂದರೆ ಪ್ರದೋಷ ಕಾಲದಲ್ಲಿ ಶಿವನ ದರ್ಶನ ಶಿವನ ಸೇವೆಗಳನ್ನು ಮಾಡಬೇಕು. ಮತ್ತಿತರ ಯಾವ ಶುಭಕರ್ಮವನ್ನು ಮಾಡಕೂಡದು. ಮಾಡಿದರೆ ಆ ಕಾರ್ಯವು ಹಾಳಾಗುತ್ತದೆ ಎಂದು ತಾತ್ಪರ್ಯ.

**330.ಪ್ರದೋಷ ಕಾಲದಲ್ಲಿ ಏನು ಮಾಡಬೇಕು? ಮತ್ತು ಏನು ಮಾಡಬಾರದು?**

ಉ. **(ಕೃ. ಸ್ಮೃ. ಷೋಡಶ ಸಂಸ್ಕಾರ ಕನ್ನಡ ಪುಟ ೩೪೬)**
**ತ್ರಯೋದಶೀ ಯದಾ ರಾತ್ರೌ ಯಾಮಸ್ತತ್ರ ನಿಶಾಮುಖೇ ।**
**ಪ್ರದೋಷ ಇತಿ ವಿಜ್ಞೇಯೋ ಜ್ಞಾನಾರ್ಥೀ ಮೌನಮಾಚರೇತ್ ।**
**ಭೋಜನಂ ಮೈಥುನಂ ಯಾನಂ ಅಭ್ಯಂಗಂ ಹರಿದರ್ಶನಂ ।**
**ಅನ್ಯಾನಿ ಶುಭಕಾರ್ಯಾಣಿ ಪ್ರದೋಷೇ ನೈವ ಕಾರಯೇತ್ ॥**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪ್ರದೋಷ ಕಾಲದಲ್ಲಿ ಮೌನವನ್ನಾಚರಿಸಬೇಕು. ಭೋಜನ-ಸ್ತ್ರೀಸಂಪರ್ಕ-ಪ್ರಯಾಣ (ವಾಹನವನ್ನೇರಿ ಪ್ರಯಾಣ ಮಾಡುವುದು. ಅಭ್ಯಂಜನ-ಶ್ರೀ ಹರಿಯನ್ನು ದೇವಾಲಯಾದಿಗಳಲ್ಲಿ ಸಂದರ್ಶಿಸುವುದು) ಮತ್ತು ಇತರ ಶುಭಕಾರ್ಯಗಳನ್ನು ಪ್ರದೋಷಕಾಲದಲ್ಲಿ ಮಾಡಕೂಡದು.

**331.ನಮ್ಮ ಶ್ರೀ ರಾಘುವೇಂದ್ರ ಸ್ವಾಮಿಗಳವರ ಮಠದಲ್ಲಿ ಪ್ರತಿ ನಿತ್ಯ ಶ್ರೀಗಳವರು ಪ್ರಾತಃಕಾಲದಲ್ಲಿ ಮುಖಪ್ರಕ್ಷಾಲನ ಮಾಡಿಕೊಂಡು ಬಂದು ಗದ್ದುಗೆ ಮೇಲೆ ಕುಳಿತಾಗ ಶ್ರೀಮಠದ ಜೋಯಿಸರು ಬಂದು ಪಂಚಾಂಗವನ್ನು ಶ್ರವಣ ಮಾಡಿಸುತ್ತಾರೆ. ಇದಕ್ಕೆ ಪ್ರಮಾಣವೇನು?**

ಉ. **ಲಕ್ಷ್ಮೀಸ್ಸ್ಯಾದಚಲಾ ತಿಥಿಶ್ರವಣತೋ ವಾರಾತ್ತಥಾಯುಶ್ಚಿರಂ**
**ನಕ್ಷತ್ರಂ ಕೃತಪಾಪಸಂಚಯಹರಂ ಯೋಗಾತ್ಕುಯೋಗಾಪಹಃ ।**
**ಸರ್ವಾಭೀಷ್ಟಕರಂ ತಥೈವ ಕರಣಂ ಪಂಚಾಂಗಮೇತಚ್ಛುಭಂ**
**ಶ್ರೋತವ್ಯಂ ಪ್ರತಿವಾಸರಂ ದ್ವಿಜಮುಖಾತ್ ಶ್ರೇಯಸ್ಕರಂ ಸಗ್ರಹಮ್.**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ, ಪ್ರತಿನಿತ್ಯ ತಿಥಿ ವಾರ

ನಕ್ಷತ್ರ ಯೋಗ ಹಾಗೂ ಕರಣ ಎಂಬ ಪಂಚ ಅಂಗಗಳ ಶ್ರವಣವನ್ನು ಬ್ರಾಹ್ಮಣರ ಮುಖದಿಂದ ಮಾಡಬೇಕು. ಹಾಗೆ ಮಾಡಿದರೆ ಶ್ರೇಯಸ್ಸು ಎಂದು ಇರುವುದರಿಂದ ಪ್ರತಿನಿತ್ಯದಲ್ಲೂ ಬ್ರಾಹ್ಮಣರ ಮುಖದಿಂದಲೇ ಪಂಚಾಂಗಶ್ರವಣ ಮಾಡಬೇಕು ಹಿಂದೆ ಶ್ರೀರಾಮಚಂದ್ರದೇವರು ಕೂಡ ವಶಿಷ್ಠರ ಮುಖದಿಂದ ಪಂಚಾಂಗಗಳನ್ನು ಶ್ರವಣ ಮಾಡುತಿದ್ದರು ಎಂದು ರಾಮಾಯಣದಲ್ಲಿ ಹೇಳಿದೆ. ಆದ್ದರಿಂದ ನಮ್ಮ ಶ್ರೀರಾಘವೇಂದ್ರಸ್ವಾಮಿಗಳವರ ಮಠದಲ್ಲಿ ಪ್ರತಿನಿತ್ಯ ಶ್ರೀಗಳವರು ಪ್ರಾತಃಕಾಲದಲ್ಲಿ ಮುಖಪ್ರಕ್ಷಾಲನ ಮಾಡಿಕೊಂಡು ಬಂದು ಗದ್ದುಗೆ ಮೇಲೆ ಕುಳಿತಾಗ ಶ್ರೀಮಠದ ಜೋಯಿಸರ ಮುಖದಿಂದ ಪಂಚಾಂಗವನ್ನು ಶ್ರವಣ ಮಾಡುವ ಪದ್ಧತಿಯು ಇದೆ. ಈ ಸಂಪ್ರದಾಯವು ನಮ್ಮ ಮಠದಲ್ಲಿ ಶ್ರೀ ಹಂಸನಾಮಕ ಪರಮಾತ್ಮನ ಕಾಲದಿಂದಲೂ ಅವಿಚ್ಛಿನ್ನವಾಗಿ ನಡೆದು ಬಂದಿದೆ. ನಾವು ಪಂಚಾಂಗವನ್ನು ನೋಡಲು ಸಮರ್ಥರಾಗಿದ್ದರೂ ಬ್ರಾಹ್ಮಣರ ಮೂಲಕ ಪಂಚಾಂಗವನ್ನು ಶ್ರವಣ ಮಾಡುವುದು ಶ್ರೇಯಸ್ಕರವೆಂಬುದು ಶಾಸ್ತ್ರ ಮತ್ತು ಸಂಪ್ರದಾಯಗಳಿಗೆ ಸಮ್ಮತವಾದದ್ದು.

**332.ಅವೈಷ್ಣವರು ಪ್ರತಿಷ್ಠೆ ಮಾಡಿರುವ ದೇವರ ಪ್ರತಿಮೆ ಮುಂತಾದವುಗಳಿಗೆ ನಮಸ್ಕಾರಾದಿಗಳನ್ನು ಮಾಡಬಹುದೇ?**

**ಉ. ಅವೈಷ್ಣವಸ್ಥಾಪಿತಾನಾಂ ಪ್ರತಿಮಾನಾಂ ಚ ವಂದನಮ್ ।**
**ಯಃ ಕರೋತಿ ಸ ಮೂಢಾತ್ಮಾ ರೌರವಂ ನರಕಂ ವ್ರಜೇತ್ ॥**

ಈಗ ಬೀದಿ ಬೀದಿಗಳಲ್ಲಿ ದೇವಾಲಯಗಳು ಬೆಳೆಯುತ್ತಿವೆ. ಅಂತಹ ದೇವಾಲಯಗಳಿಗೆ ಸರ್ವಥಾ ಹೋಗಬಾರದು. ಅಲ್ಲಿ ಪರಮಾತ್ಮನ ಸನ್ನಿಧಾನ ಸರ್ವಥಾ ಇರುವುದಿಲ್ಲ. ಕಾರಣ ಈರೀತಿ ಯಾಗಿದೆ :-

ಈ ಮೇಲೆ ಕಾಣಿಸಿದ ಪ್ರಮಾಣದಲ್ಲಿ ಹೇಳಿದಂತೆ, ವಿಷ್ಣುಚಿಹ್ನೆಗಳಿಂದ ಯುಕ್ತರಾದ ವಿಷ್ಣುಭಕ್ತರು = ವೈಷ್ಣವರು ಕರೆದಲ್ಲಿ ಭಗವಂತ ಬಂದು ನೆಲೆಸುತ್ತಾನೆ. ಅಂತಹ ವಿಷ್ಣುಭಕ್ತರು ಸ್ಥಾಪನೆ ಮಾಡಿದ ಪ್ರತಿಮೆಗಳು ಭಗವಂತನ ಸನ್ನಿಧಾನದಿಂದ ಭರಿತವಾಗಿರುತ್ತವೆ. ಆ ಪ್ರತಿಮೆಗಳನ್ನು ದರ್ಶನ ಮಾಡಿಕೊಂಡು ನಮಸ್ಕಾರಾದಿಗಳಿಂದ ಅಲ್ಲಿಯ ದೇವರನ್ನು ಸೇವಿಸಿದವನು ಪುನೀತನಾಗುತ್ತಾನೆ. ವಿಷ್ಣುಚಿಹ್ನೆಗಳಿಂದ ರಹಿತನಾದ ಅವೈಷ್ಣವನು ಸ್ಥಾಪನ

ಮಾಡಿದ ಪ್ರತಿಮೆಗಳಿಗೆ ಯಾವನು ವಂದಿಸುತ್ತಾನೋ ಅಂಥವನು ಮೂಢನೇ ಸರಿ. ಅವನಿಗೆ ರೌರವ ನರಕವಾಗುತ್ತದೆ. ಆದ್ದರಿಂದ ಈ ವಿಷಯದಲ್ಲಿ ಸದಾ ಜಾಕರೂನಾಗಿ ಸಾಧಕನಾದವನು ಇರಬೇಕು. ಯಾವುದೇ ದೇವಾಲಯಕ್ಕೆ ಹೋಗುವಾಗ ಅಲ್ಲಿಯ ಇತಿಹಾಸವನ್ನು ತಿಳಿದುಕೊಂಡು ಹೋಗಬೇಕು. ಒಟ್ಟಿನಲ್ಲಿ ಅವೈಷ್ಣವರು ಪ್ರತಿಷ್ಠೆ ಮಾಡಿರುವ ದೇವರ ಪ್ರತಿಮೆ ಮುಂತಾದವುಗಳಿಗೆ ನಮಸ್ಕಾರಾದಿಗಳನ್ನು ಮಾಡಬಾರದು.

**333. ಔಷಧವನ್ನು ನಾವು ತೆಗೆದುಕೊಳ್ಳುವಾಗ ಅದನ್ನು ಭಗವಂತನಿಗೆ ಸಮರ್ಪಿಸಿಯೇ ತೆಗೆದುಕೊಳ್ಳಬೇಕೂ? ಹೇಗೆ?**

ಉ. ಸ್ಕಾಂದಪುರಾಣ - ವೈಷ್ಣವಖಂಡ - (15-28, 29)

**ಅನರ್ಪಯಿತ್ವಾ ಯೋ ಭುಂಕ್ತೇ ಅನ್ನಪಾನಂ ಚ ಯತ್ ।**
**ಶ್ವಾನವಿಷ್ಠಾಸಮಂ ಚಾನ್ನಂ ಪಾನಂ ಚ ಮದಿರಾಸಮಮ್ ॥**
**ತಸ್ಮಾನ್ಸಮರ್ಪಯೇತ್ಪುತ್ರ! ಅನ್ನಪಾನಾದಿ ಔಷಧಮ್ ॥**
**ಭಕ್ಷಯೇತ್ಪರಯಾ ಭಕ್ತ್ಯಾ ಅಶುಚೇ ಶುಚಿಕಾರಣಮ್ ॥**

ಎಂದು ಹೇಳಿದಂತೆ ಯಾರು ಭಗವಂತನಿಗೆ ಅರ್ಪಿಸದೇ ಅನ್ನವನ್ನಾಗಲಿ ಪಾನೀಯವನ್ನಾಗಲೀ ಸ್ವೀಕರಿಸುವರೋ ಅವರ ಪಾಲಿಗೆ ಆ ಅನ್ನವು ನಾಯಿಯ ಅಮೇಧ್ಯ ಸಮವಾದರೆ, ಪಾನೀಯವು ಮದ್ಯದ ಸಮವಾಗುತ್ತದೆ. ಆದ್ದರಿಂದ ಅನ್ನವನ್ನು - ಪಾನೀಯವನ್ನು - ಔಷಧವನ್ನು ಭಗವಂತನಿಗೆ ಸಮರ್ಪಿಸಿಯೇ ಭಕ್ತಿಯಿಂದ ಸ್ವೀಕರಿಸಬೇಕು. ಇದರಿಂದಾಗಿ ಆ ವಸ್ತುಗಳೆಲ್ಲಾ ಶುಚಿಗಳೆನಿಸುವವು.

**334. ಎಲ್ಲದಕ್ಕೂ ಭೂಷಣ ಯಾವುದು?**

ಉ. **ಐಶ್ವರ್ಯಸ್ಯ ವಿಭೂಷಣಂ ಸುಜನತಾ ಶೌರ್ಯಸ್ಯ ವಾಕ್ಸಂಯಮಃ**
**ಜ್ಞಾನಸ್ಯೋಪಶಮಃ ಶ್ರುತಸ್ಯ ವಿನಯಃ ವಿತ್ತಸ್ಯ ಪಾತ್ರೇ ವ್ಯಯಃ।**
**ಅಕ್ರೋಧಸ್ತಪಸಃ ಕ್ಷಮಾ ಪ್ರಭವಿತುಃ ಧರ್ಮಸ್ಯ ನಿರ್ವ್ಯಾಜತಾ**
**ಸರ್ವೇಷಾಮಪಿ ಸರ್ವಕಾರಣಮಿದಂ ಶೀಲಂ ಪರಂ ಭೂಷಣಮ್ ॥**

ಐಶ್ವರ್ಯಕ್ಕೆ ಸೌಜನ್ಯವೇ ಭೂಷಣ
ಪರಾಕ್ರಮಕ್ಕೆ ಮಾತಿನ ಹತೋಟಿಯೇ ಭೂಷಣ
ಜ್ಞಾನಕ್ಕೆ ತಾಳ್ಮೆಯೇ ಭೂಷಣ

ಶಾಸ್ತ್ರಶ್ರವಣಕ್ಕೆ ವಿನಯವೇ ಭೂಷಣ
ಹಣಕ್ಕೆ ಸತ್ಪಾತ್ರರಲ್ಲಿ ವ್ಯಯವೇ ಭೂಷಣ
ತಪಸ್ಸಿಗೆ ಸಿಟ್ಟಿಲ್ಲದಿರುವುದೇ ಭೂಷಣ
ಪ್ರಭುವಿಗೆ ಕ್ಷಮಿಸುವ ಗುಣವೇ ಭೂಷಣ
ಧರ್ಮಕ್ಕೆ ನಿರ್ನಿಮಿತ್ತತೆಯೇ ಭೂಷಣ
ಆದರೆ ಎಲ್ಲದಕ್ಕೂ ಶೀಲವೇ ಶ್ರೇಷ್ಠ ಭೂಷಣ

**335. ಮಾನ್ಯತೆಗೆ ನಿಮಿತ್ತಗಳು ಯಾವುವು?**

ಉ. **ವಿತ್ತಂ ಬಂಧುರ್ವಯಃ ಕರ್ಮ ವಿದ್ಯಾ ಚೈವ ತು ಪಂಚಮೀ ।
ಏತಾನಿ ಮಾನ್ಯಸ್ಥಾನಾನಿ ಗರೀಯೋ ಹ್ಯುತ್ತರೋತ್ತರಮ್ ॥**
ಎಂದು ಗೀತಾಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದಂತೆ ಹಣ-ಬಂಧುತ್ವ-ವಯಸ್ಸು-ಕರ್ಮಾನುಷ್ಠಾನ ಮತ್ತು ವಿದ್ಯೆ ಇವು ಐದು ಮಾನ್ಯಸ್ಥಾನಗಳು = ಮಾನ್ಯತೆಯ ನಿಮಿತ್ತಗಳು. ಇವುಗಳಲ್ಲಿ ಉತ್ತರೋತ್ತರ ನಿಮಿತ್ತವು ಶ್ರೇಷ್ಠವಾದದ್ದು.

**336. ನಾವು ತಾಂಬೂಲವನ್ನು ಹಾಕಿ ಕೊಳ್ಳುವಾಗ ಮೊದಲು ವಿಳೇದೆಲಿಯನ್ನು ಹಾಕಿ ಕೊಳ್ಳಬೇಕೊ? ಅಡಿಕೆಯನ್ನು ಹಾಕಿ ಕೊಳ್ಳಬೇಕೊ?**

ಉ. **ಅನಿಧಾಯ ಮುಖೇ ಪರ್ಣಂ ಪೂಗಂ ಖಾದತಿ ಯೋ ನರಃ।
ದಶ ಜನ್ಮ ದರಿದ್ರಶ್ಚ ಮರಣೇ ನ ಹರಿಂ ಸ್ಮರೇತ್ ॥
ಅನಿಧಾಯ ಮುಖೇ ಪರ್ಣಂ ಪೂಗಂ ಖಾದತಿ ಯೋ ನರಃ ।
ಸಪ್ತ ಜನ್ಮ ದರಿದ್ರಃ ಸ್ಯಾತ್ ನರಕೇ ಚ ನಿಮಜ್ಜತಿ ॥**

ಸುಣ್ಣ ಹಚ್ಚಿದ ವಿಳೇದೆಲಿಯನ್ನು ಮೊದಲು ಹಾಕಿಕೊಳ್ಳದೆ, ಅಡಿಕೆಯನ್ನು ಯಾರು ಹಾಕಿ ಕೊಳ್ಳುತ್ತಾರೋ ಅವರು 10 ಜನ್ಮಗಳಲ್ಲಿ (7 ಜನ್ಮಗಳಲ್ಲಿ) ದರಿದ್ರರಾಗಿ ಹುಟ್ಟುತ್ತಾರೆ. ಮತ್ತು ಮರಣ ಕಾಲದಲ್ಲಿ ಹರಿಸ್ಮರಣೆ ಬರುವುದಿಲ್ಲ. ಮತ್ತು ನರಕದಲ್ಲಿ ಬೀಳುತ್ತಾರೆ.

**337. ಯಾವ ಯಾವ ಸಂದರ್ಭಗಳಲ್ಲಿ ಮೌನವ್ರತವನ್ನು ಆಚರಿಸಬೇಕು?**

ಉ. **ಸ್ನಾನಭೋಜನಯೋರ್ಹೋಮೇ ಜಪೇ ವೈ ದಂತಧಾವನೇ ।
ಪುರೀಷಮೂತ್ರೋತ್ಸರ್ಗೇ ಚ ಸಪ್ತ ಮೌನಂ ವಿಧೀಯತೇ ॥**

ಎಂದು ಹೇಳಿದಂತೆ ಸ್ನಾನ-ಭೋಜನ-ಹೋಮ-ಜಪ-ದಂತಧಾವನ-ಮಲವಿಸರ್ಜನೆ-ಮೂತ್ರವಿಸರ್ಜನೆ ಇವುಗಳನ್ನು ಮಾಡುವ ಸಂದರ್ಭಗಳಲ್ಲಿ ಮೌನವನ್ನು ಆಚರಿಸಬೇಕು.

**338.ಯಾರು ಯಾರಿಗೆ ಮೊದಲು ದಾರಿ ಬಿಟ್ಟುಕೊಡಬೇಕು?**

ಉ. (ಸ್ಮೃತಿಮುಕ್ತಾವಳಿ ಷೋಡಶ ಸಂಸ್ಕಾರ ಪ್ರಕರಣ)ಯಾಜ್ಞವಲ್ಕ್ಯೋऽಪಿ :-
**ವೃದ್ಧಭಾರಿನೃಪಸ್ನಾತಸ್ತ್ರೀರೋಗೀ ವರಚಕ್ರಿಣಾಮ್। ಪಂಥಾ ದೇಯೋ ನೃಪಸ್ತೇಷಾಂ ಮಾನ್ಯಃ ಸ್ನಾತಸ್ತು ಭೂಪತೇಃ । ಇತಿ।**
(ಯಾಜ್ಞವಲ್ಕ್ಯಸ್ಮೃತಿ - ಆಚಾರಾಧ್ಯಾಯ ಶ್ಲೋಕ - 117)

1. ವೃದ್ಧ - ಭಾರವನ್ನು ಹೊತ್ತವನು - ರಾಜ - ಸ್ನಾತ ಅಂದರೆ ವಿದ್ಯಾ ವ್ರತಗಳೆರಡನ್ನೂ ಮುಗಿಸಿದ ಸ್ನಾತಕನು - ಹೆಂಗಸು - ರೋಗಿ - ವಿವಾಹಮಾಡಿಕೊಳ್ಳಲು ಹೊರಟವ - ಗಾಡಿಯವನು - ಇವರುಗಳಿಗೆ ಮೊದಲು ದಾರಿ ಬಿಟ್ಟುಕೊಡಬೇಕೆಂದು ಯಾಜ್ಞವಲ್ಕ್ಯ ಋಷಿಗಳ ಅಭಿಪ್ರಾಯ.

2. ಅತ ಏವ ಶಂಖ :
**"ಬಾಲವೃದ್ಧಮತ್ತೋನ್ಮತ್ತೋಪಹತ ದೇಹಭಾರಾಕ್ರಾಂತಸ್ತ್ರೀ ಸ್ನಾತಕ - ಪ್ರವ್ರಜಿತೇಭ್ಯಃ"**
ಬಾಲಕರು - ವೃದ್ಧರು - ಕುಡುಕ - ಹುಚ್ಚ - ರೋಗಿ - ಭಾರವನ್ನು ಹೊತ್ತವನು - ಹೆಂಗಸು - ಸ್ನಾತಕ - ಸಂನ್ಯಾಸಿ ಇವರುಗಳಿಗೆ ಮೊದಲು ದಾರಿಬಿಟ್ಟು ಕೊಡಬೇಕೆಂದು ಶಂಖಸ್ಮೃತಿಕಾರರ ಅಭಿಪ್ರಾಯ.

3. ''ಸ್ತ್ರೀ ಚಾತ್ರ ಗರ್ಭಿಣೀ ಜ್ಞೇಯೇತ್ಯಾಹ ಬೋಧಾಯನೋ ಮುನಿಃ''
ಈ ಮೇಲೆ ಕಾಣಿಸಿದ ವಚನಗಳಲ್ಲಿರುವ ಸ್ತ್ರೀ ಎಂದರೆ ಗರ್ಭಿಣಿಸ್ತ್ರೀ ಎಂದು ತಿಳಿಯಬೇಕು ಎಂದು ಭೋಧಾಯನ ಋಷಿಗಳು ಹೇಳುತ್ತಾರೆ.

4. ವೃದ್ಧಾಯ ಭಾರತಪ್ತಾಯ ಗರ್ಭಿಣ್ಯೈ ದುರ್ಬಲಾಯ ಚ । ಪಂಥಾ ದೇಯೋ ಬ್ರಾಹ್ಮಣಾಯ ಗವೇ ರಾಜ್ಞೇ ಹ್ಯಚುಕ್ಷುಷೇ ॥ ಇತಿ ॥
ಮತ್ತೊಬ್ಬ ಸ್ಮೃತಿಕಾರರ ಅಭಿಪ್ರಾಯದ ಪ್ರಕಾರ ವಯೋವೃದ್ಧ - ಭಾರವನ್ನು ಹೊತ್ತು ಆಯಾಸಪಡುವವನು - ಗರ್ಭಿಣೀ ಸ್ತ್ರೀ - ದುರ್ಬಲನಾದ ಬ್ರಾಹ್ಮಣ - ಗೋವು - ರಾಜ - ಕುರುಡ ಇವರುಗಳಿಗೆ ಮೊದಲು ದಾರಿಬಿಟ್ಟು ಕೊಡಬೇಕು.

**339. ನವವಿಧ ಭಕುತಿಗಳು ಯಾವುವು?**

ಉ. **ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥**
**ಪುರಂದರೋಪನಿಷತ್ತಿನಲ್ಲಿ ನವವಿಧ ಭಕ್ತಿಯನ್ನು ತಿಳಿಸಿಕೊಡುವ ಪರಿ ಹೀಗಿದೆ: -**
**ಹರಿಶ್ರವಣ ಕೀರ್ತನ ಹರಿನಾಮಸ್ಮರಣ**
**ಹರಿಪಾದಸೇವನ ಹರಿಪೂಜಾವಂದನ**
**ಹರಿದಾಸ ಸಖ್ಯತ್ವಹರಿಗಾತ್ಮಾರ್ಪಣ**
**ಹರಿಭಕ್ತಿಯೇ ಮುಕ್ತಿಪಥತತ್ತ್ವ**
**ಪುರಂದರವಿಠ್ಠಲನೆ ಪರಮಾತ್ಮ ಸಿದ್ಧ**
**ವರಮಧ್ವಮತ ಶ್ರುತಿಸ್ಮೃತಿಯೋಳ್ ಪ್ರಸಿದ್ಧ ॥**
ಎಂದು ಹೇಳಿದಂತೆ ವಿಷ್ಣುವಿನ ಬಗ್ಗೆ 1) ಶ್ರವಣ 2) ಕೀರ್ತನ 3) ಸ್ಮರಣೆ 4) ಪಾದಸೇವನ 5) ಅರ್ಚನ 6) ವಂದನ 7) ದಾಸ್ಯ 8) ಸಖ್ಯ 9) ಆತ್ಮನಿವೇದನ ಇವು ಒಂಬತ್ತು ವಿಧವಾದ ಭಕ್ತಿಗಳು.

**340..ವೈಷ್ಣವರು ಯಾರು?**

ಉ. **ಪದ್ಮಪುರಾಣ ಕ್ರಿಯಾಯೋಗಸಾರ 2-94**
**ಶಾಲಗ್ರಾಮಶಿಲಾ ಯೇಷಾಂ ಗೃಹೇ ವಸತಿ ಸರ್ವದಾ।**
**ಶಾಸ್ತ್ರಂ ಭಾಗವತಂ ಚೈವ ಜ್ಞೇಯಾಸ್ತೇ ವೈಷ್ಣವಾ ಜನಾಃ ॥**
ಎಂದು ಹೇಳಿದಂತೆ ಯಾರ ಮನೆಯಲ್ಲಿ ಯಾವಾಲೂ ಶಾಲಗ್ರಾಮವಿರುವುದೋ ಹಾಗು ಭಾಗವತಶಾಸ್ತ್ರವಿರುವುದೋ ಅಂತಹವರು ವೈಷ್ಣವರು=ವಿಷ್ಣುಭಕ್ತರು.

**341. ಗೃಹಸ್ಥಾಶ್ರಮಿಗಳಿಗೆ ಯಾರಾದರು ನಮಸ್ಕಾರವನ್ನು ಮಾಡಿದಾಗ "ಆಯುಷ್ಮಾನ್ ಏಧಿ" ದೀರ್ಘಾಯುಷ್ಮಾನ್ ಭವ" ಎಂದು ಆಶೀರ್ವದಿಸುವಂತೆ ಯತಿಗಳಿಗೆ ನಮಸ್ಕಾರವನ್ನು ಮಾಡಿದಾಗ ಅವರೂ ಸಹಿತ "ದೀರ್ಘಾಯುಷ್ಮಾನ್ ಭವ" ಎಂದು ಆಶೀರ್ವದಿಸಬಹುದೆ?**

ಉ. **ಯತೀನಾಂ ನಾಧಿಕಾರೋಽಸ್ತಿ ಹ್ಯಾಶಿಷಿ ವ್ಯಾಸಶಾಸನಾತ್।**
**ನಾರಾಯಣೇತಿ ಚ ಬ್ರೂಯಾತ್ ಪ್ರಣತಾಯುರ್ವಿವೃದ್ಧಯೇ ॥**



ಎಂದು ಹೇಳಿದಂತೆ, ಶ್ರೀವೇದವ್ಯಾಸರ ಶಾಸನದ ಪ್ರಕಾರ, ನಮಸ್ಕರಿಸಿದವನಿಗೆ "ಆಯುಷ್ಮಾನ್ ಭವ" ಎಂದು ಆಶೀರ್ವದಿಸಲು ಯತಿಗಳಿಗೆ ಅಧಿಕಾರವಿಲ್ಲ. ಆದರೆ ಯಾರಾದರು ತಮಗೆ ನಮಸ್ಕರಿಸಿದಾಗ ಯತಿಗಳು "ನಾರಾಯಣ - ನಾರಾಯಣ" ಎಂದು ಹೇಳುತ್ತಾರೆ.

**342. ನಾವು ಮಾಡಿದ ಪುಣ್ಯಕರ್ಮಗಳನ್ನು ಭಗವಂತನಲ್ಲಿ ಸಮರ್ಪಣೆ ಮಾಡದಿದ್ದರೆ ಏನು ಆಗುತ್ತದೆ?**

ಉ. **ನಾರ್ಪಯಂತಿ ಹತಾ ಲೋಕೇ ಪುಣ್ಯಾನಿ ವಿವಿಧಾನಿ ಚ ।**
**ವಿಫಲಾನಿ ಭವಂತ್ಯೇತೇ ಶ್ರಮ ಏವ ಫಲಂ ಭವೇತ್ ॥ ಇತಿ ಶ್ಲೋಕಃ**

ತಸ್ಯಾರ್ಥಃ :- ಯೇ ವಿವಿಧಾನಿ ಚ ವಿವಿಧಾನ್ಯಪಿ ಪುಣ್ಯಾನಿ ಲೋಕೇ ಪುಣ್ಯಫಲಾಶ್ರಯೇ ಹತಾ ನಾರ್ಪಯಂತಿ। ತೇಷಾಂ ವಿವಿಧಾನ್ಯಪಿ ಪುಣ್ಯಾನಿ ವಿಫಲಾನ್ಯೇವ ಭವಂತಿ । ಇಹಲೋಕೇ ಪರಲೋಕೇ ಚ ಶ್ರಮ ಫಲಂ ಭವೇತ್" ಇತಿ॥

ಎಂದು ಹೇಳಿದಂತೆ ನಾವು ಮಾಡಿದ ಪುಣ್ಯಕರ್ಮಗಳನ್ನು ಭಗವಂತನಲ್ಲಿ ಸಮರ್ಪಣೆ ಮಾಡಲೇಬೇಕು. ಹಾಗೆ ಸಮರ್ಪಣೆ ಮಾಡದಿದ್ದರೆ, ನಾವು ಮಾಡಿದ ಪುಣ್ಯಕರ್ಮಗಳು ನಿಷ್ಫಲವಾಗುತ್ತವೆ.

**343. ಬಿಸಿನೀರಿನಿಂದ ಮಾಡುವ ಸ್ನಾನವು ವ್ಯರ್ಥವೇ ಹೇಗೆ ?**

ಉ. **ಉಷ್ಣೋದಕಂ ವೃಥಾಸ್ನಾನಂ ಶಕ್ತಾನಾಮೇವ ನಾನ್ಯಥಾ ।**
**ತಸ್ಮಾತ್ ಘಟೋದಕಸ್ನಾನಂ ದ್ವಿಗುಣಂ ತತ್ರ ಕೀರ್ತಿತಮ್ ॥**

ತಸ್ಯಾರ್ಥಃ :- ಉಷ್ಣೋದಕಂ ಉಷ್ಣೋದಕವತ್ ಉಷ್ಣೋದಕ ಕೃತಮಿತಿ ಯಾವತ್। ಸ್ನಾನಂ ಶಕ್ತಾನಾಮೇವ ವೃಥಾ। ಅಶಕ್ತಾನಾಂ ವೃಥಾ ನ। ಕಿಂತು ಪುಣ್ಯಪ್ರದಮ್। ಎಂದು ಹೇಳಿದಂತೆ ಶಕ್ತರಿಗೆ ಉಷ್ಣೋದಕಸ್ನಾನ ವ್ಯರ್ಥ. ಆದರೆ ಅಶಕ್ತರಿಗೆ ಉಷ್ಣೋದಕಸ್ನಾನವು ವ್ಯರ್ಥವಲ್ಲ. ಆದರೆ ಪುಣ್ಯಪ್ರದವಾದದ್ದು.

**344. ಒಂದು ಕೈಯಿಂದ ನಮಸ್ಕಾರವನ್ನು ಮಾಡಬಾರದೆ?**

ಉ. **1. ಏಕಹಸ್ತಪ್ರಣಾಮಶ್ಚ ಏಕಾ ಚೈವ ಪ್ರದಕ್ಷಿಣಾ ।**

**ಅಕಾಲದರ್ಶನಂ ವಿಷ್ಣೋಃ ಹಂತಿ ಪುಣ್ಯಂ ಪುರಾಕೃತಮ್ ॥**

**2. ಏಕೇನ ಪಾಣಿನಾ ಯೋ ವೈ ಪ್ರಣಮೇತ್ ದೇವಮಚ್ಯುತಮ್ ।**

**ತಸ್ಯ ದಂಡಃ ಕರಛೇದಃ . . ..**

**3. ಜನ್ಮಪ್ರಭೃತಿ ಯತ್ಕಿಂಚಿತ್ ಪುಮಾನ್ವೈ ಧರ್ಮಮಾಚರೇತ್ ।**

**ಸರ್ವಂ ತನ್ನಿಷ್ಫಲಂ ಯಾತಿ ಏಕಹಸ್ತಾಭಿವಾದನಾತ್।**

ಅಂದರೆ

ಅ) ಶ್ರೀ ಹರಿವಾಯುಗುರುಗಳಿಗೆ ಒಂದು ಕೈಯಿಂದ ನಮಸ್ಕಾರವನ್ನು ಮಾಡಬಾರದು. ಒಂದೇ ಒಂದು ಪ್ರದಕ್ಷಿಣೆಯನ್ನು ಹಾಕಬಾರದು. ಮತ್ತು ಅಪರಾತ್ರಿ ಮುಂತಾದ ಕಾಲದಲ್ಲಿ ಪರಮಾತ್ಮನ ದರ್ಶನವನ್ನು ಮಾಡಬಾರದು. ಒಂದುವೇಳೆ ಒಂದು ಕೈಯಿಂದ ನಮಸ್ಕಾರವನ್ನು ಮಾಡಿದ್ದೇ ಆದರೆ, ಒಂದೇ ಒಂದು ಪ್ರದಕ್ಷಿಣೆಯನ್ನು ಹಾಕಿದ್ದೇ ಆದರೆ ಮತ್ತು ಅಕಾಲದಲ್ಲಿ ಪರಮಾತ್ಮನ ದರ್ಶನವನ್ನು ಮಾಡಿದ್ದೇ ಆದರೆ ಹಿಂದೆ ಸಂಪಾದಿಸಿದ ಪುಣ್ಯವು ನಾಶವಾಗುತ್ತದೆ.

(ವಿವರಣೆ... ಆಸನ್ನಪ್ರಸವಾ ನಾರೀ ಜಲಪೂರ್ಣಘಟಂ ಯಥಾ। ಉದ್ವಹಂತೀ ಶನೈರ್ಯಾತಿ ತಥಾ ಕುರ್ಯಾತ್ ಪ್ರದಕ್ಷಿಣಮ್॥

ಎಂದು ಹೇಳಿದಂತೆ ಪ್ರಸವಿಸುವುದಕ್ಕೆ ಸಿದ್ಧಳಾದ ನಾರಿಯು ಜಲಪೂರ್ಣವಾದ ಘಟವನ್ನು ಎತ್ತಿಕೊಂಡು ನಿಧಾನವಾಗಿ ಹೇಗೆ ಹೋಗುತ್ತಾಳೋ ಅದರಂತೆ ಶ್ರೀಹರಿ-ವಾಯು-ಗುರುಗಳಿಗೆ ನಾವು ಪ್ರದಕ್ಷಿಣೆಯನ್ನು ಮಾಡಬೇಕು)

ಆ) ಒಂದು ಕೈಯಿಂದ ದೇವರಿಗೆ ಯಾರು ನಮಸ್ಕಾರವನ್ನು ಮಾಡುತ್ತಾರೋ ಅವರ ಕೈಯನ್ನು ಕತ್ತರಿಸಿಹಾಕುವುದೇ ಶಿಕ್ಷೆ.

ಇ) ನಾವು ಹುಟ್ಟಿದಾರಭ್ಯ ಯತ್ಕಿಂಚಿತ್ ಧರ್ಮವನ್ನು ಆಚರಿಸಲೇ ಬೇಕು. ಅಂದರೆ ಒಂದು ಕೈಯಿಂದ ನಮಸ್ಕಾರವನ್ನು ಮಾಡಿದರೆ ನಾವು ಆಚರಿಸಿದ ಧರ್ಮವೆಲ್ಲವು ನಿಷ್ಫಲವಾಗುತ್ತದೆ. ಆದ್ದರಿಂದ ಶ್ರೀಹರಿ-ವಾಯು-ಗುರುಗಳಿಗೆ ನಾವು ಒಂದು ಕೈಯಿಂದ ನಮಸ್ಕಾರವನ್ನು ಸರ್ವಥಾ ಮಾಡಬಾರದು. ಹಾಗೆ ಮಾಡುವುದು ಪಾಶ್ಚಾತ್ಯ ಸಂಸ್ಕೃತಿ, ನಮ್ಮ ಭಾರತದೇಶದ ಸಂಸ್ಕೃತಿ ಅಲ್ಲವೆಂದು ತಿಳಿಯಬೇಕು. ಯಾವುದೇ

ವಿಷಯದಲ್ಲಿ ಪಾಶ್ಚಾತ್ಯರ ಅನುಕರಣೆಯು ಅನರ್ಥಕ್ಕೆ ಕಾರಣವೇ ಹೊರತು ಶ್ರೇಯಸ್ಸಿಗೆ ಕಾರಣವಲ್ಲ.

**345. ಎಂಟು ವಿಧವಾದ ವಿವಾಹಗಳು ಯಾವುವು?**

ತತ್ರ ಮನುಃ

**ಚತುರ್ಣಾಮಪಿ ವರ್ಣಾನಾಂ ಪ್ರೇತ್ಯೇಹ ಚ ಹಿತಾಹಿತಾನ್ ।**
**ಅಷ್ಟಾವಿಮಾನ್ ಸಮಾಸೇನ ಸ್ತ್ರೀವಿವಾಹಾನ್ನಿಬೋಧತ ॥**
**ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ ।**
**ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥**

(ಮನುಸ್ಮೃತಿ - ಅಧ್ಯಾಯ 3 - ಶ್ಲೋಕ 20-21)

ಮನು ಋಷಿಗಳು ವಿವಾಹದಲ್ಲಿ ಎಂಟು ಪ್ರಭೇದಗಳನ್ನು ಹೇಳುತ್ತಾರೆ. ಮನು ಋಷಿಗಳು ಹೇಳಿದ ವಿಷಯಗಳನ್ನು ಭೃಗುಮುನಿಗಳು ಮಹರ್ಷಿಗಳನ್ನು ಕುರಿತು ಹೇಳುತ್ತಾರೆ. ಸ್ತ್ರೀಯರ ವಿವಾಹದಲ್ಲಿ ಎಂಟು ಪ್ರಭೇದಗಳಿವೆ. ಈ ವಿವಾಹ ಪ್ರಭೇದಗಳಲ್ಲಿ ಯಾವುದಾದರೊಂದನ್ನು ಅನುಸರಿಸುವುದು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಹಿತಕರವಾಗಿದೆ. ಕೆಲವು ವಿವಾಹವಿಧಾನಗಳು ಕೆಲವರಿಗೆ ಅಹಿತಕರವೂ ಆಗುತ್ತವೆ.

ಈ ವಿವಾಹ ಪ್ರಭೇದಗಳನ್ನು ಸಂಕ್ಷೇಪದಿಂದ ಹೇಳುತ್ತೇನೆ ಕೇಳಿರಿ ಎಂದು ಮನು ಋಷಿಗಳಿಂದ ಉಪದಿಷ್ಟರಾದ ಭೃಗುಮುನಿಗಳು ಋಷಿಗಳನ್ನು ಕುರಿತು ಹಿಂದೆ ಸೂಚಿಸಿದ ಪ್ರಸಿದ್ಧವಾದ ಎಂಟುವಿಧ ವಿವಾಹಗಳ ಹೆಸರುಗಳನ್ನು ಹೇಳುತ್ತಾರೆ.

| | |
|---|---|
| 1. ಬ್ರಾಹ್ಮವಿವಾಹ | 5. ಆಸುರ ವಿವಾಹ |
| 2. ದೈವ ವಿವಾಹ | 6. ಗಾಂಧರ್ವ ವಿವಾಹ |
| 3. ಆರ್ಷ ವಿವಾಹ | 7. ರಾಕ್ಷಸ ವಿವಾಹ |
| 4. ಪ್ರಾಜಾಪತ್ಯ ವಿವಾಹ | 8. ಪೈಶಾಚ ವಿವಾಹ |

**346. ಎಂಟು ವಿಧವಾದ ವಿವಾಹಗಳ ಪೈಕಿ ಧರ್ಮವಿವಾಹಗಳು ಯಾವುವು? ಅಧರ್ಮ ವಿವಾಹಗಳು ಯಾವುವು?**

ಉ. **ಬ್ರಾಹ್ಮ - ದೈವ - ಆರ್ಷ - ಪ್ರಾಜಾಪತ್ಯಾಃ ಧರ್ಮಾಃ ।**
**ಆಸುರ - ರಾಕ್ಷಸ - ಗಾಂಧರ್ವ - ಪೈಶಾಚಾಃ ಅಧರ್ಮಾಃ ॥**

ಈ ಮೇಲೇ ಹೇಳಿದ ಎಂಟುವಿಧವಾದ ವಿವಾಹಗಳ ಪೈಕಿ 1) ಬ್ರಾಹ್ಮ

ವಿವಾಹ 2) ದೈವ ವಿವಾಹ, 3) ಆರ್ಷವಿವಾಹ, ಮತ್ತು 4) ಪ್ರಾಜಾಪತ್ಯವಿವಾಹ,ಈನಾಲ್ಕು ಧರ್ಮವಿವಾಹಗಳು=ಧರ್ಮಸಮ್ಮತವಾದ ವಿವಾಹಗಳು.

1) ಆಸುರ ವಿವಾಹ, 2) ರಾಕ್ಷಸ ವಿವಾಹ, 3) ಗಾಂಧರ್ವ ವಿವಾಹ, 4) ಪೈಶಾಚ ವಿವಾಹ ಈ ನಾಲ್ಕು ವಿವಾಹಗಳು ಧರ್ಮಸಮ್ಮತವಾದ ವಿವಾಹಗಳಲ್ಲ= ಅಧರ್ಮ ವಿವಾಹಗಳು ಎಂದು ಪ್ರಸಿದ್ಧವಾಗಿವೆ.

**347. ಎಂಟು ವಿಧವಾದ ವಿವಾಹಗಳಲ್ಲಿ ಬ್ರಾಹ್ಮಣಾದಿವರ್ಣಗಳಿಗೆ ಸಮ್ಮತವಾದ ವಿವಾಹಗಳು ಯಾವುವು?**

ಉ. ತತ್ರ ಆದ್ಯಾಶ್ಚತ್ವಾರೋ ಬ್ರಾಹಣಸ್ಯೈವ। ತದುಕ್ತಂ ಚಂದ್ರಿಕಾಯಾಮ್ :-

**ಚತ್ವಾರೋ ಬ್ರಾಹ್ಮಣಸ್ಯಾದ್ಯಾಃ ಶಸ್ತಾಃ ಗಾಂಧರ್ವರಾಕ್ಷಸೌ।**
**ರಾಜ್ಞಸ್ತಥಾಽಸುರೋ ವೈಶ್ಯೋ ಶೂದ್ರೇ ಚಾಂತ್ಯಸ್ತು ಗರ್ಹಿತ ॥ಇತಿ॥**

1)ಬ್ರಾಹ್ಮ 2) ದೈವ, 3) ಆರ್ಷ 4) ಪ್ರಾಜಾಪತ್ಯ ಈ ನಾಲ್ಕು ವಿವಾಹಗಳು ಬ್ರಾಹ್ಮಣನಿಗೆ ಮಾತ್ರವೇ ಸಮ್ಮತವಾಗಿವೆ. ಬ್ರಾಹ್ಮಣರು ಮಾತ್ರ ಈ ನಾಲ್ಕುರೀತಿಯ ವಿವಾಹಗಳನ್ನು ಮಾಡಿಕೊಳ್ಳಬೇಕು. ಈ ವಿಷಯವನ್ನು ಚಂದ್ರಿಕಾ ಎಂಬ ಗ್ರಂಥದಲ್ಲೂ ಹೇಳಿರುತ್ತಾರೆ. ಕ್ಷತ್ರಿಯರಿಗೆ ಗಾಂಧರ್ವ ವಿವಾಹ ಮತ್ತು ರಾಕ್ಷಸ ವಿವಾಹಗಳು ಪ್ರಶಸ್ತವಾಗಿವೆ. ವೈಶ್ಯ - ಶೂದ್ರರಿಗೆ ಆಸುರವಿವಾಹವು ಪ್ರಶಸ್ತವಾಗಿದೆ. ಕೊನೆಯದಾದ ಪೈಶಾಚವಿವಾಹವು ಅತ್ಯಂತಗರ್ಹಿತವಾಗಿದೆ=ನಿಂದಿತವಾಗಿದೆ. ಅದನ್ನು ಸರ್ವಥಾ ಎಲ್ಲರೂ ವರ್ಜಿಸುವುದೇ ಅತ್ಯಂತ ಯೋಗ್ಯವಾಗಿದೆ ಎಂದು ಚಂದ್ರಿಕಾ ಎಂಬ ಸ್ಮೃತಿಗ್ರಂಥದ ಅಭಿಪ್ರಾಯವಾಗಿದೆ.

**348. ಪೈಶಾಚವಿವಾಹದ ಬಗ್ಗೆ ಸ್ಮೃತಿಕಾರರ ಅಭಿಪ್ರಾಯ ಏನು?**

**" ಪೈಶಾಚಸ್ಯ ನಿಷಿದ್ಧತ್ವಾತ್ ಏತೇಷಾಮಭಾವೇ ಗ್ರಾಹ್ಯಃ।**

ಹೀಗೆ ಅತ್ಯಂತ ನಿಂದಿತವಾದರೆ ಪೈಶಾಚವಿವಾಹವನ್ನು ಇಲ್ಲಿ ಏತಕ್ಕೆ ಹೇಳ ಬೇಕಾಗಿತ್ತು ಎಂಬ ಆಕ್ಷೇಪಕ್ಕೆ ಉತ್ತರವನ್ನು ಹೇಳುತ್ತಾರೆ :-
ಪೈಶಾಚವಿವಾಹವು ಅತ್ಯಂತ ನಿಷಿದ್ಧ ಮತ್ತು ನಿಂದಿತವಾದದ್ದೇನೋ ಹೌದು. ಆದರೆ ಮೊದಲಿನ ಏಳು ವಿವಾಹವಿಧಿಗಳಿಂದ ವಿವಾಹವಾಗದಿದ್ದರೆ, ಬೇರೆ ಉಪಾಯವಿಲ್ಲದಲೆ ಪೈಶಾಚವಿವಾಹವಿಧಿಯನ್ನು ಸ್ವೀಕರಿಸಬಹುದು ಎಂದು ಗೂಢಾಭಿಪ್ರಾಯವು. ಒಟ್ಟಿನಲ್ಲಿ ಇದು ತಾಮಸವಾದ ವಿವಾಹವಿಧಿ ಎಂದೇ ತಿಳಿಯಬೇಕು.

ವಿಷಯದಲ್ಲಿ ಪಾಶ್ಚಾತ್ಯರ ಅನುಕರಣೆಯು ಅನರ್ಥಕ್ಕೆ ಕಾರಣವೇ ಹೊರತು ಶ್ರೇಯಸ್ಸಿಗೆ ಕಾರಣವಲ್ಲ.

**345. ಎಂಟು ವಿಧವಾದ ವಿವಾಹಗಳು ಯಾವುವು?**

ತತ್ರ ಮನುಃ

**ಚತುರ್ಣಾಮಪಿ ವರ್ಣಾನಾಂ ಪ್ರೇತ್ಯೇಹ ಚ ಹಿತಾಹಿತಾನ್ ।**
**ಅಷ್ಟಾವಿಮಾನ್ ಸಮಾಸೇನ ಸ್ತ್ರೀವಿವಾಹಾನ್ನಿಬೋಧತ ॥**
**ಬ್ರಾಹ್ಮೋ ದೈವಸ್ತಥೈವಾರ್ಷಃ ಪ್ರಾಜಾಪತ್ಯಸ್ತಥಾಸುರಃ ।**
**ಗಾಂಧರ್ವೋ ರಾಕ್ಷಸಶ್ಚೈವ ಪೈಶಾಚಶ್ಚಾಷ್ಟಮೋಽಧಮಃ ॥**

(ಮನುಸ್ಮೃತಿ - ಅಧ್ಯಾಯ 3 - ಶ್ಲೋಕ 20-21)

ಮನು ಋಷಿಗಳು ವಿವಾಹದಲ್ಲಿ ಎಂಟು ಪ್ರಭೇದಗಳನ್ನು ಹೇಳುತ್ತಾರೆ. ಮನು ಋಷಿಗಳು ಹೇಳಿದ ವಿಷಯಗಳನ್ನು ಭೃಗುಮುನಿಗಳು ಮಹರ್ಷಿಗಳನ್ನು ಕುರಿತು ಹೇಳುತ್ತಾರೆ. ಸ್ತ್ರೀಯರ ವಿವಾಹದಲ್ಲಿ ಎಂಟು ಪ್ರಭೇದಗಳಿವೆ. ಈ ವಿವಾಹ ಪ್ರಭೇದಗಳಲ್ಲಿ ಯಾವುದಾದರೊಂದನ್ನು ಅನುಸರಿಸುವುದು ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಹಿತಕರ ವಾಗಿದೆ. ಕೆಲವು ವಿವಾಹವಿಧಾನಗಳು ಕೆಲವರಿಗೆ ಅಹಿತಕರವೂ ಆಗುತ್ತವೆ.

ಈ ವಿವಾಹ ಪ್ರಭೇದಗಳನ್ನು ಸಂಕ್ಷೇಪದಿಂದ ಹೇಳುತ್ತೇನೆ ಕೇಳಿರಿ ಎಂದು ಮನು ಋಷಿಗಳಿಂದ ಉಪದಿಷ್ಟರಾದ ಭೃಗುಮುನಿಗಳು ಋಷಿಗಳನ್ನು ಕುರಿತು ಹಿಂದೆ ಸೂಚಿಸಿದ ಪ್ರಸಿದ್ಧವಾದ ಎಂಟುವಿಧ ವಿವಾಹಗಳ ಹೆಸರುಗಳನ್ನು ಹೇಳುತ್ತಾರೆ.

| | |
|---|---|
| 1. ಬ್ರಾಹ್ಮವಿವಾಹ | 5. ಆಸುರ ವಿವಾಹ |
| 2. ದೈವ ವಿವಾಹ | 6. ಗಾಂಧರ್ವ ವಿವಾಹ |
| 3. ಆರ್ಷ ವಿವಾಹ | 7. ರಾಕ್ಷಸ ವಿವಾಹ |
| 4. ಪ್ರಾಜಾಪತ್ಯ ವಿವಾಹ | 8. ಪೈಶಾಚ ವಿವಾಹ |

**346. ಎಂಟು ವಿಧವಾದ ವಿವಾಹಗಳ ಪೈಕಿ ಧರ್ಮವಿವಾಹಗಳು ಯಾವುವು? ಅಧರ್ಮ ವಿವಾಹಗಳು ಯಾವುವು?**

ಉ. **ಬ್ರಾಹ್ಮ - ದೈವ - ಆರ್ಷ - ಪ್ರಾಜಾಪತ್ಯಾಃ ಧರ್ಮಾಃ ।**
**ಆಸುರ - ರಾಕ್ಷಸ - ಗಾಂಧರ್ವ - ಪೈಶಾಚಾಃ ಅಧರ್ಮಾಃ ॥**

ಈ ಮೇಲೇ ಹೇಳಿದ ಎಂಟುವಿಧವಾದ ವಿವಾಹಗಳ ಪೈಕಿ 1) ಬ್ರಾಹ್ಮ

ವಿವಾಹ 2) ದೈವ ವಿವಾಹ, 3) ಆರ್ಷವಿವಾಹ, ಮತ್ತು 4) ಪ್ರಾಜಾಪತ್ಯವಿವಾಹ,ಈನಾಲ್ಕು ಧರ್ಮವಿವಾಹಗಳು=ಧರ್ಮಸಮ್ಮತವಾದ ವಿವಾಹಗಳು.

1) ಆಸುರ ವಿವಾಹ, 2) ರಾಕ್ಷಸ ವಿವಾಹ, 3) ಗಾಂಧರ್ವ ವಿವಾಹ, 4) ಪೈಶಾಚ ವಿವಾಹ ಈ ನಾಲ್ಕು ವಿವಾಹಗಳು ಧರ್ಮಸಮ್ಮತವಾದ ವಿವಾಹಗಳಲ್ಲ= ಅಧರ್ಮ ವಿವಾಹಗಳು ಎಂದು ಪ್ರಸಿದ್ಧವಾಗಿವೆ.

**347. ಎಂಟು ವಿಧವಾದ ವಿವಾಹಗಳಲ್ಲಿ ಬ್ರಾಹ್ಮಣಾದಿವರ್ಣಗಳಿಗೆ ಸಮ್ಮತವಾದ ವಿವಾಹಗಳು ಯಾವುವು?**

ಉ. ತತ್ರ ಆದ್ಯಾಶ್ಚತ್ವಾರೋ ಬ್ರಾಹಣಸ್ಯೈವ। ತದುಕ್ತಂ ಚಂದ್ರಿಕಾಯಾಮ್ :-

**ಚತ್ವಾರೋ ಬ್ರಾಹ್ಮಣಸ್ಯಾದ್ಯಾಃ ಶಸ್ತಾಃ ಗಾಂಧರ್ವರಾಕ್ಷಸೌ।**
**ರಾಜ್ಞಸ್ತಥಾಽಸುರೋ ವೈಶ್ಯೋ ಶೂದ್ರೇ ಚಾಂತ್ಯಸ್ತು ಗರ್ಹಿತಃ ॥ಇತಿ॥**

1)ಬ್ರಾಹ್ಮ 2) ದೈವ, 3) ಆರ್ಷ 4) ಪ್ರಾಜಾಪತ್ಯ ಈ ನಾಲ್ಕು ವಿವಾಹಗಳು ಬ್ರಾಹ್ಮಣನಿಗೆ ಮಾತ್ರವೇ ಸಮ್ಮತವಾಗಿವೆ. ಬ್ರಾಹ್ಮಣರು ಮಾತ್ರ ಈ ನಾಲ್ಕುರೀತಿಯ ವಿವಾಹಗಳನ್ನು ಮಾಡಿಕೊಳ್ಳಬೇಕು. ಈ ವಿಷಯವನ್ನು ಚಂದ್ರಿಕಾ ಎಂಬ ಗ್ರಂಥದಲ್ಲೂ ಹೇಳಿರುತ್ತಾರೆ. ಕ್ಷತ್ರಿಯರಿಗೆ ಗಾಂಧರ್ವ ವಿವಾಹ ಮತ್ತು ರಾಕ್ಷಸ ವಿವಾಹಗಳು ಪ್ರಶಸ್ತವಾಗಿವೆ. ವೈಶ್ಯ - ಶೂದ್ರರಿಗೆ ಆಸುರವಿವಾಹವು ಪ್ರಶಸ್ತವಾಗಿದೆ. ಕೊನೆಯದಾದ ಪೈಶಾಚವಿವಾಹವು ಅತ್ಯಂತಗರ್ಹಿತವಾಗಿದೆ=ನಿಂದಿತವಾಗಿದೆ. ಅದನ್ನು ಸರ್ವಥಾ ಎಲ್ಲರೂ ವರ್ಜಿಸುವುದೇ ಅತ್ಯಂತ ಯೋಗ್ಯವಾಗಿದೆ ಎಂದು ಚಂದ್ರಿಕಾ ಎಂಬ ಸ್ಮೃತಿಗ್ರಂಥದ ಅಭಿಪ್ರಾಯವಾಗಿದೆ.

**348. ಪೈಶಾಚವಿವಾಹದ ಬಗ್ಗೆ ಸ್ಮೃತಿಕಾರರ ಅಭಿಪ್ರಾಯ ಏನು?**

**" ಪೈಶಾಚಸ್ಯ ನಿಷಿದ್ಧತ್ವಾತ್ ಏತೇಷಾಮಭಾವೇ ಗ್ರಾಹ್ಯಃ।**

ಹೀಗೆ ಅತ್ಯಂತ ನಿಂದಿತವಾದರೆ ಪೈಶಾಚವಿವಾಹವನ್ನು ಇಲ್ಲಿ ಏತಕ್ಕೆ ಹೇಳ ಬೇಕಾಗಿತ್ತು ಎಂಬ ಆಕ್ಷೇಪಕ್ಕೆ ಉತ್ತರವನ್ನು ಹೇಳುತ್ತಾರೆ :-

ಪೈಶಾಚವಿವಾಹವು ಅತ್ಯಂತ ನಿಷಿದ್ಧ ಮತ್ತು ನಿಂದಿತವಾದದ್ದೇನೋ ಹೌದು. ಆದರೆ ಮೊದಲಿನ ಏಳು ವಿವಾಹವಿಧಿಗಳಿಂದ ವಿವಾಹವಾಗದಿದ್ದರೆ, ಬೇರೆ ಉಪಾಯವಿಲ್ಲದಲೆ ಪೈಶಾಚವಿವಾಹವಿಧಿಯನ್ನು ಸ್ವೀಕರಿಸಬಹುದು ಎಂದು ಗೂಢಾಭಿಪ್ರಾಯವು. ಒಟ್ಟಿನಲ್ಲಿ ಇದು ತಾಮಸವಾದ ವಿವಾಹವಿಧಿ ಎಂದೇ ತಿಳಿಯಬೇಕು.

**349. ಆರ್ಷವಿವಾಹದ ಬಗ್ಗೆ ಸ್ಮೃತಿಕಾರರ ಅಭಿಪ್ರಾಯ ಏನು?**

ಉ. **" ಕೇಚಿದಾರ್ಷಮಪಿ ಪ್ರಶಸ್ತಂ ನೇಚ್ಛಂತಿ । ತತ್ರಾಪಿ ಗೋಮಿಥುನರೂಪಶುಲ್ಕಗ್ರಹಣಾತ್ " ॥ಇತಿ॥**

ಕೆಲವರು ಆರ್ಷವಿವಾಹವನ್ನು ಪ್ರಶಸ್ತವೆಂದು ಭಾವಿಸುವುದಿಲ್ಲ. ಈ ವಿವಾಹ ವಿಧಾನದಲ್ಲಿ ಗೋವುಗಳ ಜೋಡಿಯನ್ನು ವಧೂ-ದಕ್ಷಿಣೆಯಾಗಿ ಮೂಲ್ಯದಂತೆ ಸ್ವೀಕರಿಸುವುದರಿಂದ ಇದು ಒಂದು ರೀತಿಯಲ್ಲಿ ಕನ್ಯಾವಿಕ್ರಯವೇ ಆಗುತ್ತದೆ. ಕನ್ಯಾವಿಕ್ರಯವು ಅತ್ಯಂತ ಹೇಯವಾದುದರಿಂದ ಈ ಆರ್ಷವಿವಾಹವು ಅಷ್ಟೊಂದು ಪ್ರಶಸ್ತವಲ್ಲ ಎಂದು ಅವರ ಅಭಿಪ್ರಾಯ.

**350. ಆಸುರವಿವಾಹದ ಬಗ್ಗೆ ಸ್ಮೃತಿಕಾರರ ಅಭಿಪ್ರಾಯವೇನು?**

ಉ. ಆಸುರವಿವಾಹೋಽಪಿ ನ ಪ್ರಶಸ್ತಃ ತದುಕ್ತಂ ಕಾತ್ಯಾಯನೇನ :-

**ಕ್ರೀತಾ ದ್ರವ್ಯೇಣ ಯಾ ನಾರೀ ನ ಸಾ ಪತ್ನೀ ವಿಧಿಯತೇ ।**
**ನ ಸಾ ದೈವೇ ನ ಸಾ ಪಿತ್ರ್ಯೇ ದಾಸೀಂ ತಾಂ ಕವಯೋ ವಿದುಃ ॥ ಇತಿ ॥**

ಆಸುರವಿವಾಹವೂ ಪ್ರಶಸ್ತವಲ್ಲ, ಆಸುರವಿವಾಹವು ಏಕೆ ಪ್ರಶಸ್ತವಲ್ಲ, ಎಂಬ ವಿಷಯವನ್ನು ಕಾತ್ಯಾಯನರು ಈ ರೀತಿ ಹೇಳುತ್ತಾರೆ. :- ಯಾವ ಸ್ತ್ರೀಯು ಹಣ ಕೊಟ್ಟು ಕೊಂಡುಕೊಳ್ಳಲ್ಪಡುತ್ತಾಳೋ, ಆ ಸ್ತ್ರೀಯು ಪತ್ನೀ ಎಂದು ಹೇಳಿಸಿಕೊಳ್ಳಲು ಅರ್ಹಳಾಗುವುದಿಲ್ಲ. ಅವಳು ದೇವತಾಸಂಬಂಧಿಯಾದ ಯಾಗಾದಿಗಳಲ್ಲಿ ಹಬ್ಬ ಹುಣ್ಣಿಮೆ - ವ್ರತಗಳಲ್ಲಿ - ಶ್ರಾದ್ಧಾದಿ ಪಿತೃಕಾರ್ಯಗಳಲ್ಲಿ ಗಂಡನ ಜೊತೆಗೆ ಸಹಭಾಗವನ್ನು ಸ್ವೀಕರಿಸಲು ಅರ್ಹಳಲ್ಲ. ಅವಳು ಹಣದಿಂದ ಕೊಂಡುಕೊಂಡ ದಾಸಿಯಾಗುತ್ತಾಳೆ ಎಂದು ಬಲ್ಲವರು ಹೇಳುತ್ತಾರೆ ಎಂದು ಕಾತ್ಯಾಯನ ಋಷಿಗಳು ಹೇಳುತ್ತಾರೆ. ಈ ರೀತಿ ವಿವಾಹಗಳಲ್ಲಿ ಸೂಕ್ಷ್ಮವಾದ ವಿವೇಚನೆಯನ್ನು ಮಾಡಿಕೊಳ್ಳಬೇಕು.

# ನದಿಗಳು

**351. ಪುಷ್ಕರ ಎಂದರೇನು?**

ಗಂಗೆಯೇ ಮೊದಲಾದ 12 ನದಿಗಳಲ್ಲಿ ಸಾರ್ಧತ್ರಿಕೋಟಿ ತೀರ್ಥ ಸಹಿತ ಪುಷ್ಕರನು ನಿವಾಸಮಾಡುವ ಕಾಲಕ್ಕೆ 'ಪುಷ್ಕರ' ಎಂದು ಹೆಸರು.
ಮೇಷ ಮೊದಲಾದ 12 ರಾಶಿಗಳಲ್ಲಿ ಬೃಹಸ್ಪತಿ ಸಂಚರಿಸುವ ಸಮಯದಲ್ಲಿ ಪುಷ್ಕರನು ಆಯಾ ನದಿಗಳಲ್ಲಿ ವಾಸಿಸುವನು.

ಬೃಹಸ್ಪತಿಯು ಒಂದೊಂದು ವರ್ಷ ಒಂದೊಂದು ರಾಶಿಯಲ್ಲಿ ಸಂಚರಿಸುವನು. ಆಗ ಆಯಾ ನದಿಗಳಲ್ಲಿ ಮೂರುವರೆಕೋಟಿ ತೀರ್ಥಗಳಿಂದ ಸಹಿತನಾದ ಪುಷ್ಕರನು (ತೀರ್ಥರಾಜ) ಹಾಗು ಸಕಲ ಮುನಿಗಳು ವಾಸಿಸುವರು. ಆದಕಾರಣ ಪ್ರವೇಶ ದಿನದಿಂದ 12 ದಿನಗಳು - ಆದಿಪುಷ್ಕರ ಎಂದು, ಕೊನೆಯ 12 ದಿನಗಳು - ಅಂತ್ಯ ಪುಷ್ಕರ ಎಂದು ಪ್ರಸಿದ್ಧಿ ಇದೆ. ಈ ದಿನಗಳಲ್ಲಿ ನದೀತೀರಗಳಲ್ಲಿ ಮಾಡುವ ಕ್ಷೇತ್ರೋಪವಾಸ-ತೀರ್ಥಶ್ರಾದ್ಧ-ಸ್ನಾನ-ದಾನ-ವ್ರತ-ಜಪ-ತಪ-ಪೂಜಾದಿಗಳೆಲ್ಲವೂ ಅನಂತ ಫಲಪ್ರದವಾಗಿವೆ. 60 ಸಾವಿರ ವರ್ಷ ಗಂಗೆಯಲ್ಲಿ ಮಿಂದ ಫಲ ಪುಷ್ಕರ ಸಮಯದಲ್ಲಿ ಒಂದು ದಿನ ಸ್ನಾನ ಮಾಡಿದರೆ ಬರುವುದು.

**ಜನ್ಮಪ್ರಭೃತಿ ಯತ್ಪಾಪಂ ಸ್ತ್ರಿಯಾ ವಾ ಪುರುಷೇಣ ವಾ।**
**ಪುಷ್ಕರೇ ಸ್ನಾತಮಾತ್ರಸ್ಯ ಸರ್ವಮೇವ ಪ್ರಣಶ್ಯತಿ ॥**

ಸ್ತ್ರೀಯರಾಗಲಿ ಪುರುಷರಾಗಲಿ ಹುಟ್ಟಿದಾರಭ್ಯ ಮಾಡಿದ ಪಾಪಗಳು ಪುಷ್ಕರ ಸಮಯದಲ್ಲಿ ಸ್ನಾನ ಮಾಡೋಣದಮಾತ್ರದಿಂದ ನಶಿಸುತ್ತವೆ.

**352.ಸೂರ್ಯನು ಮುಳುಗಿದ ಮೇಲೆ ನದಿಯಲ್ಲಿ ಸ್ನಾನಮಾಡಬಹುದೆ?**

**ವ್ಯಾಸಃ - ನದ್ಯಾಮಸ್ತಮಿತೇ ಸ್ನಾನಂ ವರ್ಜಯೇತ್ತು ಸದಾ ಬುಧಃ।**

**(ಕೃ.ಸ್ಮೃ. ಆ.ಪ್ರ. ಪು. ೧೯೮)**

ಎಂದು ವ್ಯಾಸಸ್ಮೃತಿಯಲ್ಲಿ ಹೇಳಿದಂತೆ ಸೂರ್ಯನು ಮುಳುಗಿದ ಮೇಲೆ ನದಿಯಲ್ಲಿ ಸ್ನಾನಮಾಡಬಾರದು.

**353. ನದೀ ತೀರದಲ್ಲಿ ಮಲಮೂತ್ರ ವಿಸರ್ಜನೆಯನ್ನು ಮಾಡಬಹುದೆ?**

ಉ. **ನದೀತೀರೇ ನ ಕರ್ತವ್ಯಂ ಮಲಮೂತ್ರವಿಸರ್ಜನಮ್ ।**
**ಕುರ್ಯಾದ್ಯದಿ ವಿಮೂಢಾತ್ಮಾ ರೌರವಂ ಕಲ್ಪಮಶ್ನುತೇ ॥**

ನದೀತೀರದಲ್ಲಿ ಮಲಮೂತ್ರ ವಿಸರ್ಜನೆಯನ್ನು ಮಾಡಬಾರದು. ಒಂದುವೇಳೆ ಮಾಡಿದರೆ ಕಲ್ಪದ ವರೆಗೆ ರೌರವ ಎಂಬ ನರಕವನ್ನು ಅನುಭವಿಸುತ್ತಾರೆ.

**354. ಯಾವ ನದಿಗೆ ಯಾವಾಗ ಪುಷ್ಕರಗಳು ಬರುತ್ತವೆ?**

ಬೃಹಸ್ಪತಿಯು ಮೇಷಾದಿರಾಶಿಗಳಲ್ಲಿ ಪ್ರವೇಶ ಮಾಡಿದಾಗ ಗಂಗಾದಿ 12

ನದಿಗಳಿಗೆ ಪುಷ್ಕರ ಬರುತ್ತದೆ. ಬೃಹಸ್ಪತಿಯು ಆಯಾ ರಾಶಿಗಳಲ್ಲಿ ಪ್ರವೇಶ ಮಾಡಿದ ಮೇಲೆ ಒಂದು ವರ್ಷ ಆ ರಾಶಿಯಲ್ಲಿರುತ್ತಾನೆ.

## ಬೃಹಸ್ಪತಿ (ಗುರು)

1) ಮೇಷ ರಾಶಿಯಲ್ಲಿ ಪ್ರವೇಶ ಮಾಡಿದಾಗ ಗಂಗಾ ನದಿಗೆ ಪುಷ್ಕರ
2) ವೃಷಭ ರಾಶಿಯಲ್ಲಿ ಪ್ರವೇಶ ಮಾಡಿದಾಗ ನರ್ಮದಾ ನದಿಗೆ ಪುಷ್ಕರ
3) ಮಿಥುನ ರಾಶಿಯಲ್ಲಿ ಪ್ರವೇಶ ಮಾಡಿದಾಗ ಸರಸ್ವತಿ ನದಿಗೆ ಪುಷ್ಕರ
4) ಕರ್ಕಾಟಕ ರಾಶಿಯಲ್ಲಿ ಪ್ರವೇಶ ಮಾಡಿದಾಗ ಯಮುನಾ ನದಿಗೆ ಪುಷ್ಕರ
5) ಸಿಂಹ ರಾಶಿಯಲ್ಲಿ ಪ್ರವೇಶ ಮಾಡಿದಾಗ ಗೋದಾವರೀ ನದಿಗೆ ಪುಷ್ಕರ
6) ಕನ್ಯಾ ರಾಶಿಯಲ್ಲಿ ಪ್ರವೇಶ ಮಾಡಿದಾಗ ಕೃಷ್ಣಾ ನದಿಗೆ ಪುಷ್ಕರ
7) ತುಲಾ ರಾಶಿಯಲ್ಲಿ ಪ್ರವೇಶ ಮಾಡಿದಾಗ ಕಾವೇರಿ ನದಿಗೆ ಪುಷ್ಕರ
8) ವೃಶ್ಚಿಕ ರಾಶಿಯಲ್ಲಿ ಪ್ರವೇಶ ಮಾಡಿದಾಗ ಭೀಮರಥೀ ನದಿಗೆ ಪುಷ್ಕರ
9) ಧನು ರಾಶಿಯಲ್ಲಿ ಪ್ರವೇಶ ಮಾಡಿದಾಗ ಪುಷ್ಕರ ನದಿಗೆ ಪುಷ್ಕರ
10) ಮಕರ ರಾಶಿಯಲ್ಲಿ ಪ್ರವೇಶ ಮಾಡಿದಾಗ ತುಂಗಭದ್ರಾ ನದಿಗೆ ಪುಷ್ಕರ
11) ಕುಂಭ ರಾಶಿಯಲ್ಲಿ ಪ್ರವೇಶ ಮಾಡಿದಾಗ ಸಿಂಧು ನದಿಗೆ ಪುಷ್ಕರ
12) ಮೀನ ರಾಶಿಯಲ್ಲಿ ಪ್ರವೇಶ ಮಾಡಿದಾಗ ಪ್ರಣೀತಾ ನದಿಗೆ ಪುಷ್ಕರ

**ಮೇಷೇ ಗಂಗಾ ವೃಷೇ ರೇವಾ ಗತೇ ಯುಗ್ಮೇ ಸರಸ್ವತಿ ।**
**ಯಮುನಾ ಕರ್ಕಟೇ ಚೈವ ಗೋದಾವರ್ಯಪಿ ಸಿಂಹಗೇ ॥**
**ಕನ್ಯಾಯಾಂ ಕೃಷ್ಣವೇಣೀ ಚ ಕಾವೇರೀ ಚ ತುಲಾಗತೇ।**
**ವೃಶ್ಚಿಕೇ ಸ್ಯಾದ್ಭೀಮರಥೀ ಚಾಪೇ ಪುಷ್ಕರವಾಹಿನೀ ॥**
**ಮೃಗೇ ತುಂಗಾ ಘುಟೇ ಸಿಂಧುಃ ಪ್ರಣೀತಾ ತಟಿನೀ ಝುಷೇ ।**
**ಮೇಷೇಗುರೌ ಪ್ರವಿಷ್ಟೇ ಗಂಗಾ ಪುಷ್ಕರಯುತಾ ಭವತೀತಿವತ್ ಸರ್ವತ್ರಾನ್ವಯಃ॥**

**355. ತುಂಗಭದ್ರಾ ನದಿಯ ತೀರದಲ್ಲಿರುವ ತೀರ್ಥಕ್ಷೇತ್ರಗಳ ವಿವರ**

**ಗಂಗಾಮೂಲ :**

1) ಸಹ್ಯಾದ್ರಿ ಪರ್ವತ
2) ಹರಿಹರ ಕ್ಷೇತ್ರ (ಗುಹಾರಣ್ಯ)
3) ಶೃಂಗೇರಿ - (ಶಾರದಾಂಬ)

4) ಕೂಡಲಿ - ತುಂಗಾ ಮತ್ತು ಭದ್ರಾ ಸಂಗಮ
5) ಮಹಿಷಿ
6) ಬಾಳಗಾರು
7) ಭೀಮನಕಟ್ಟೆ
8) ತೀರ್ಥಹಳ್ಳಿ
9) ಹರಿಹರಪುರ
10) ಮುತ್ತೂರ್
11) ಹೊನ್ನಾಳಿ
12) ಬಿದರಹಳ್ಳಿ ಅಶ್ವತ್ಥನಾರಾಯಣ
13) ಬಿದರಹಳ್ಳಿ ಸೋಮೇಶ್ವರ
14) ಹೊಳ ಹೊನ್ನೂರು
15) ಹರಿಹರ - (ಹರಿಹರ ದೇವಾಲಯ)
16) ಮುಕ್ಕುಂದಿ
17) ಮೈಲಾರ
18) ಕುರವತ್ತಿ
19) ಕಳಸ
20) ನಾರಾಯಣ ದೇವರ ಕೆರೆ
21) ಹಂಪಿ (ಕಿಷ್ಕಿಂಧ): ಯಂತ್ರೋದ್ಧಾರಕ - ವಿರೂಪಾಕ್ಷ
ನರಹರಿತೀರ್ಥರು - ರಘುನಂದನರು
ಪುರಂದರದಾಸರ ಮಂಟಪ.
22) ಆನೇಗುಂದಿ (ನವವೃಂದಾವನ)
(ಪದ್ಮನಾಭತೀರ್ಥರೇ ಮೊದಲಾದ)
23) ಕಂಪ್ಲಿ
24) ಕೆಂಚನಗುಡ್ಡ (ಶ್ರೀವಸುಧೇಂದ್ರರು)
25) ಚೀಕಲಪರ್ವಿ
ಶ್ರೀಪಾದರಾಜರಿಂದ ಪ್ರತಿಷ್ಠಿತ ಅಶ್ವತ್ಥ ನರಸಿಂಹದೇವರು -
ವಿಜಯದಾಸರ ಜನ್ಮಸ್ಥಳ
26) ಬಿಚ್ಚಾಲಿ - (ಶ್ರೀಪಾದರಾಜರಿಂದ ಪ್ರತಿಷ್ಠಿತ ನರಸಿಂಹದೇವರು - ಶ್ರೀ

ರಾಘವೇಂದ್ರತೀರ್ಥರು ತಪಸ್ಸು ಮಾಡಿದ ಸ್ಥಳ - ಅಪ್ಪಣ್ಣಾಚಾರ್ಯರ ಮೂಲಕ್ಷೇತ್ರ.)

27) ಅಣುಮಂತ್ರಾಲಯ

28) ಮಂತ್ರಾಲಯ ಕ್ಷೇತ್ರ

ಅ) ರಾಮದೇವರಿಂದ ಪ್ರತಿಷ್ಠಿತ ರಾಮಲಿಂಗೇಶ್ವರ ದೇವಾಲಯ.

ಆ) ಶ್ರೀರಾಘವೇಂದ್ರಸ್ವಾಮಿಗಳವರಿಂದ ಪ್ರತಿಷ್ಠಿತ ಶ್ರೀವೆಂಕಟೇಶದೇವರು. ಇತ್ಯಾದಿ.

ಇ) ಶ್ರೀರಾಘವೇಂದ್ರಸ್ವಾಮಿಗಳವರೇ ಮೊದಲಾದ ಮೂಲಬೃಂದಾವನಗಳು.

29) ಗುರ್ಜಾಲ-ರಾಮದೇವರಿಂದ ಪ್ರತಿಷ್ಠಿತ ಶಿವಲಿಂಗ (ಸೈಕತ ಲಿಂಗ)

30) ಗುಂಡ್ರೇವಲ - ಜನಮೇಜಯ ಪ್ರತಿಷ್ಠಿತ ಪ್ರಾಣದೇವರು - ವ್ಯಾಸರಾಜರಿಂದ ಪ್ರತಿಷ್ಠಿತ ಪ್ರಾಣದೇವರು - ವೆಂಕಟರಮಣ ದೇವರು- ಶ್ರೀಸುಬೋಧೇಂದ್ರರ ಮೃತ್ತಿಕಾ ಬೃಂದಾವನ.

# ಚಾತುರ್ಮಾಸ್ಯ

**356. ಚಾತುರ್ಮಾಸ್ಯದ ಸ್ವರೂಪ ಮತ್ತು ಆಚರಿಸಬೇಕಾದ ಧರ್ಮಗಳು ಯಾವು?**

ಉ. **ತತ್ರಶಂಸಾ ವರಾಹಪುರಾಣೇ ಚಾತುರ್ಮಾಸ್ಯಮಾಹಾತ್ಮ್ಯೇ ಧರಣೀವರಾಹ ಸಂವಾದೇ ವರಾಹಃ**

**357.ಪ್ರತಿವರ್ಷ ಶಾಕವ್ರತದಲ್ಲಿ ಅಗಸೆ ಸೊಪ್ಪು ಮತ್ತು ನೆಲ್ಲಿಕಾಯಿಯನ್ನು (ನೆಲ್ಲೀಚೆಟ್ಟನ್ನು) ತೆಗೆದುಕೊಳ್ಳಬಹುದೆ? ತೆಗೆದುಕೊಳ್ಳಬಹುದಾದಲ್ಲಿ ಈ ವಿಷಯಕ್ಕೆ ಪ್ರಮಾಣವೇನು.**

ಉ. **(ಕೃ.ಸ್ಮೃ.ಕಾ.ಪ್ರ.ಕನ್ನಡ ಪುಟ ೨೧೭-೨೧೮)**
**ಅತಸೀ ತುಲಸೀ ಚೈವ ಧಾತ್ರೀ ಚೂತಫಲಂ ತಥಾ।**
**ಗ್ರಾಹ್ಯಾಣ್ಯೇತಾನಿ ಚತ್ವಾರಿ ವಿಷ್ಣುನಾತ್ತಂ ಯತಃ ಪುರಾ ॥**
**ನಾನ್ಯತ್ಕಿಂಚಿತ್ ಸಮಶ್ನೀಯಾತ್ ಭುಕ್ತ್ವಾ ಚಾಂದ್ರಾಯಣಂ ಚರೇತ್।**
ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಅಗಸೆ ಸೊಪ್ಪು (ಚಗಚೆ/ ಚೋಗಚೆ ಸೊಪ್ಪು) ತುಲಸಿ-ನೆಲ್ಲಿ-ಮಾವು ಈ ನಾಲ್ಕು

ಶ್ರೀಮನ್ನಾರಾಯಣನೇ ಸ್ವೀಕರಸಿರುವುದರಿಂದ ಶಾಕರೂಪವಾಗಿದ್ದರೂ ಇವುಗಳನ್ನು ಶಾಕವ್ರತದಲ್ಲಿ ಸ್ವೀಕರಿಸಬಹುದು. ಇವನ್ನು ಬಿಟ್ಟು ಬೇರೆ ಯಾವ ತರಕಾರಿಯನ್ನು ಸ್ವೀಕರಿಸಬಾರದು. ಪ್ರಮಾದವಶಾತ್ ಸ್ವೀಕರಿಸಿದರೆ ಚಾಂದ್ರಾಯಣ ವ್ರತವನ್ನು ಮಾಡಬೇಕು.

**358.ಚಾತುರ್ಮಾಸ್ಯವ್ರತಗಳು ಯಾವು ಯಾವು?**

ಉ. ಶಾಕವ್ರತ - ದಧಿವ್ರತ - ಕ್ಷೀರವ್ರತ - ದ್ವಿದಳವ್ರತ

1. **ಆಸ್ತಿ ಪ್ರಿಯತಮಃ ಕಾಲಃ ಚಾತುರ್ಮಾಸ್ಯಾಭಿಧೋ ಮಮ ।**
**ಸ್ನಾನಂ ವ್ರತಂ ಜಪೋ ಹೋಮಃ ತತ್ರಾನಂತಗುಣಂ ಸ್ಮೃತಮ್ ॥**
2. **ಮಾಸೇಷ್ವನ್ಯೇಷು ಯತ್ಕಿಂಚಿತ್ ಕ್ರಿಯತೇ ಮಮ ತೋಷಣಮ್ ।**
**ತಸ್ಮಾತ್ ಕೋಟಿಗುಣಂ ಪುಣ್ಯಂ ಮಾಘೇ ಮಕರಗೇ ರವೌ ।**
3. **ತತೋsಪಿ ಕೋಟಿಗುಣಿತಂ ವೈಶಾಖೇ ಮಾಸಿ ಲಭ್ಯತೇ ।**
**ತತೋಽಪ್ಯನಂತಗುಣಿತಂ ಚಾತುರ್ಮಾಸ್ಯೇ ನ ಸಂಶಯಃ ॥**
**ಇತ್ಯಾದಿ ತತ್ಸ್ವರೂಪಂ ತತ್ರೈವೋಕ್ತಮ್ ।**

ಅಂದರೆ ಚಾತುರ್ಮಾಸ್ಯವ್ರತದ ಪ್ರಶಂಸೆಯನ್ನು ವರಾಹಪುರಾಣದಲ್ಲಿ ಹೇಳಲಾಗಿದೆ. " ಚಾತುರ್ಮಾಸ್ಯಮಾಹಾತ್ಮ್ಯೇ" ಎಂಬ ಪ್ರಕರಣದಲ್ಲಿ ಧರಣೀದೇವಿ ಮತ್ತು ವರಾಹದೇವರ ಸಂವಾದದಲ್ಲಿ ವರಾಹದೇವರು ಈ ರೀತಿಯಾಗಿ ಚಾತುರ್ಮಾಸ್ಯದ ಪ್ರಶಂಸೆಯನ್ನು ಮಾಡಿದ್ದಾರೆ.

1. ನನಗೆ ಅತ್ಯಂತ ಪ್ರೀತಿಕರವಾದ "ಚಾತುರ್ಮಾಸ್ಯ" ವೆಂಬ ಕಾಲವು ಇದೆ. ಅತ್ಯಂತ ಪವಿತ್ರವಾದ ಆ ಕಾಲದಲ್ಲಿ ಆಚರಿಸತಕ್ಕ ಸ್ನಾನ-ವ್ರತ-ಹೋಮ ಮತ್ತು ಜಪ ಇವುಗಳು ಅನಂತಪಟ್ಟು ಫಲವನ್ನು ಕೊಡತಕ್ಕವುಗಳೆಂದು ಹೇಳಲಾಗಿದೆ.

ಬೇರೇ ಮಾಸಗಳಲ್ಲಿ ನನ್ನ ಪ್ರೀತಿಗಾಗಿ ಯಾವ ಸ್ವಲ್ಪ ಸತ್ಕಾರ್ಯವನ್ನು ಮಾನವನು ಮಾಡುತ್ತಾನೋ ಅದಕ್ಕಿಂತಲೂ ಮಾಘಮಾಸದಲ್ಲಿ ಸೂರ್ಯನು ಮಕರರಾಶಿಯಲ್ಲಿರುವಾಗ ಆಚರಿಸುವುದು ಕೋಟಿ ಪಟ್ಟು ಪುಣ್ಯದಾಯಕವು. ಅದಕ್ಕಿಂತಲೂ ವೈಶಾಖಮಾಸದಲ್ಲಿ ಆಚರಿಸುವ ಸ್ನಾನ-ವ್ರತ-ಜಪ ಹೋಮಾದಿಗಳಿಗೆ ಕೋಟಿ ಪಟ್ಟು ಪುಣ್ಯವು ಲಭಿಸುತ್ತದೆ.

ಅದಕ್ಕಿಂತಲೂ ಕೋಟಿ ಪಟ್ಟು ಪುಣ್ಯವು ಚಾತುರ್ಮಾಸ್ಯದಲ್ಲಿ ಲಭಿಸ್ತುದೆ. ಇದರಲ್ಲಿ ಸಂದೇಹವೇ ಇಲ್ಲ. ಇತ್ಯಾದಿಯಾಗಿ ಚಾತುರ್ಮಾಸ್ಯದ ಸ್ವರೂಪವು ಅಲ್ಲಿಯೇ ಹೇಳಲ್ಪಟ್ಟಿದೆ.

**359. ಶಾಕಾದಿ ವ್ರತಗಳಲ್ಲಿ ಶಾಕಾದಿಗಳನ್ನು ಭಕ್ಷಿಸಿದರೆ ಆಗುವ ಅನರ್ಥಗಳು ಯಾವು?**

ಉ. **1. ಯತ್ಕಿಂಚಿದ್ಭಕ್ಷ್ಯತೇ ಶಾಕಂ ಪ್ರಥಮೇ ಮಾಸಿ ನಾರದ।**
**ತೇನಾರ್ಪಿತಂ ಹರೇಃ ಶಲ್ಯಂ ಹೃದಿ ನಾತ್ರ ವಿಚಾರಣಾ॥**
**2. ದ್ವಿತೀಯೇ ಭಕ್ಷಿತೇ ದಧ್ನಿ ಗೋಮಾಂಸಂ ತೇನ ಭಕ್ಷಿತಮ್।**
**ಕ್ಷೀರೇ ಪಿತೇ ತೃತೀಯೇ ತು ಸುರಾ ಪೀತಾ ನ ಸಂಶಯಃ॥**
**3. ಚತುರ್ಥೇ ಮಾಸಿ ವಿಪ್ರೇಂದ್ರ ದ್ವಿದಲೇಽಪಿ ಚ ಭಕ್ಷಿತೇ।**
**ಕ್ರಿಮಯೋ ಭಕ್ಷಿತಾಸ್ತೇನ ಯಾವದುದ್ಬೋಧನಂ ಹರೇಃ ॥**

ನಾರದನೆ! ಚಾತುರ್ಮಾಸ್ಯದ ಮೊದಲನೆಯ ತಿಂಗಳಲ್ಲಿ (ಶಾಕವ್ರತದಲ್ಲಿ) ಯಾವನು ತರಕಾರಿಯನ್ನು ತಿನ್ನುತ್ತಾನೋ ಅವನಿಂದ ಶ್ರೀಹರಿಯ ಎದೆಯಲ್ಲಿ ಮುಳ್ಳನ್ನು ಚುಚ್ಚಿದಂತಾಗುತ್ತದೆ.

ಎರಡನೇ ತಿಂಗಳಲ್ಲಿ ದಧಿವ್ರತದ ಸಮಯದಲ್ಲಿ ಮೊಸರನ್ನು ಭಕ್ಷಿಸಿದವನು ಗೋಮಾಂಸವನ್ನು ತಿಂದವನಾಗುತ್ತಾನೆ. (ಆದರೆ ''ತಕ್ರಾ ದೀನಾಂ ಅನಿಷೇಧಃ'' ಎಂದು ಹೇಳಿದಂತೆ ದಧಿವ್ರತದಲ್ಲಿ ಮಜ್ಜಿಗೆಯನ್ನು ಸ್ವೀಕರಿಸಬಹುದು)

ಮೂರನೆಯ ಕ್ಷೀರವ್ರತದ ಸಮಯದಲ್ಲಿ ಹಾಲನ್ನು ಕುಡಿದವನು ಹೆಂಡ ಕುಡಿದವನಾಗುತ್ತಾನೆ.

ಬ್ರಾಹ್ಮಣ ಶ್ರೇಷ್ಠನಾದ ನಾರದನೆ! ನಾಲ್ಕನೆಯ ಮಾಸದಲ್ಲಿ ದ್ವಿದಳವ್ರತದಲ್ಲಿ ತೊಗರಿ-ಹೆಸರು ಇತ್ಯಾದಿ ದ್ವಿದಳ ಧಾನ್ಯಗಳನ್ನು ಭಕ್ಷಿಸಿದರೆ ಅವನು ಕಾರ್ತಿಕ ಶುದ್ಧದ್ವಾದಶಿಯಂದು ಶ್ರೀಹರಿಯು ಏಳುವವರೆಗೆ ಕ್ರಿಮಿಗಳನ್ನು ತಿಂದವನಾಗುತ್ತನೆ.

**360. ಮೊಟ್ಟಮೊದಲನೇ ಸಲ ಚಾತುರ್ಮಾಸ್ಯವ್ರತವನ್ನು ಯಾವಾಗ ಆರಂಭಿಸಬೇಕು?**

ಉ. ಧರ್ಮಸಿಂಧು:-

ಚಾತುರ್ಮಾಸ್ಯವ್ರತ ಪ್ರಥಮಾರಂಭ: ಗುರುಶುಕ್ರಾಸ್ತಾದೌ ಆಶೌಚಾದೌ ಚ ನ ಭವತಿ ದ್ವಿತೀಯಾದ್ಯಾರಂಭಸ್ತು ಅಸ್ತಾದೌ ಆಶೌಚಾದೌ ಚ ಭವತ್ಯೇವ।

ಗುರುಶುಕ್ರಾಸ್ತಾದಿಗಳು ಇರುವಾಗ, ಆಶೌಚವು ಇರುವಾಗ ಮೊಟ್ಟಮೊದಲನೇ ಸಲ ಚಾತುರ್ಮಾಸ್ಯವ್ರತವನ್ನು ಆರಂಭಿಸಬಾರದು. ಅವುಗಳು ಇಲ್ಲದಿರುವಾಗ ಆರಂಭಿಸಬೇಕು. ದ್ವಿತೀಯಾದ್ಯಾರಂಭಗಳಿಗೆ ಗುರುಶುಕ್ರಾಸ್ತಾದಿಗಳು ಮತ್ತು ಆಶೌಚವು ಅಡ್ಡಿಯಾಗುವುದಿಲ್ಲ.

**361. ಚಾತುರ್ಮಾಸ್ಯವ್ರತವು ಯಾರಿಗೆ ವಿಹಿತವಾಗಿದೆ?**

ಉ. ಬ್ರಹ್ಮಚಾರಿಗಳು - ಗೃಹಸ್ಥಾಶ್ರಮಿಗಳು - ವಾನಪ್ರಸ್ಥಾಮಿಗಳು ಮತ್ತು ಸಂನ್ಯಾಸಿಗಳು - ಹೀಗೆ ನಾಲ್ಕು ಆಶ್ರಮದವರಿಗೂ - ನಾಲ್ಕು ವರ್ಣದವರಿಗೂ ಚಾತುರ್ಮಾಸ್ಯವ್ರತವು ವಿಹಿತವಾಗಿ ಚಾತುರ್ಮಾಸ್ಯವತ್ರಂ "ಶೈವಾದಿಭಿರಪಿ ಕಾರ್ಯಂ" ಎಂದು ಹೇಳಿದಂತೆ ಶೈವಾದಿಗಳಿಗೂ ವಿಹಿತ ವಾಗಿದೆ.

# ಕ್ಷೌರ ಕಾರ್ಯ

**362. ಕ್ಷೌರಕ್ಕೆ ವಿಹಿತ ಮತ್ತು ನಿಷಿದ್ಧವಾದ ವಾರಗಳು ಯಾವುವು?**

ಉ. **ಏಕಾದಶ ಕ್ಷಪಯತಿ ಕ್ಷಿತಿಜಸ್ತು - ಮಾಸಾನ್ ಸಪ್ತ ಅರ್ಕಜಃ।**
**ಏಕಂ ಮಹಿಮದ್ಯುತಿಃ ಆಯುಷಸ್ತು - ಜ್ಞಃ ಪಂಚ - ಸಪ್ತ ವಿಧುಃ।**
**ಇಂದ್ರಗುರುಃ ತ್ರಿಮಾಸಾನ್ - ಏಕಾದಶೋಽಸುರಗುರುಶ್ಚ॥**

ಅ) ಏಕಾದಶ ಕ್ಷಪಯತಿ ಕ್ಷಿತಿಜಸ್ತು = ಮಂಗಳವಾರ ಕ್ಷೌರ ಮಾಡಿಸಿದರೆ ಹನ್ನೊಂದು ತಿಂಗಳು ಆಯುಸ್ಸು ಕಡಿಮೆ ಆಗುತ್ತದೆ.

ಆ) ಮಾಸಾನ್ ಸಪ್ತ ಆರ್ಕಜಃ = ಶನಿವಾರ ಕ್ಷೌರ ಮಾಡಿಸಿದರೆ ಏಳು ತಿಂಗಳು ಆಯುಸ್ಸು ಕಡಿಮೆ ಆಗುತ್ತದೆ.

ಇ) ಏಕಂ ಮಹಿಮದ್ಯುತಿಃ = ಭಾನುವಾರ ಕ್ಷೌರ ಮಾಡಿಸಿಕೊಂಡರೆ ಒಂದು ತಿಂಗಳು ಆಯುಸ್ಸು ಕಡಿಮೆ ಆಗುತ್ತದೆ.

ಈ) ಜ್ಞಃ ಪಂಚ = ಬುಧವಾರ ಕ್ಷೌರ ಮಾಡಿಸಿಕೊಂಡರೆ ಐದು ತಿಂಗಳು ಆಯುಸ್ಸು ಜಾಸ್ತಿ ಆಗುತ್ತದೆ.

ಉ) ಸಪ್ತ ವಿಧುಃ = ಸೋಮವಾರ ಕ್ಷೌರ ಮಾಡಿಸಿಕೊಂಡರೆ ಏಳು ತಿಂಗಳು ಆಯುಸ್ಸು ಜಾಸ್ತಿ ಆಗುತ್ತದೆ.

ಊ) ಇಂದ್ರಗುರುಃ ತ್ರಿಮಾಸಾನ್ = ಗುರುವಾರ ಕ್ಷೌರ ಮಾಡಿಸಿಕೊಂಡರೆ ಮೂರು ತಿಂಗಳು ಆಯುಸ್ಸು ಜಾಸ್ತಿ ಆಗುತ್ತದೆ.

ಋ) ಏಕಾದಶೋಽಸುರಗುರಶ್ಚ = ಶುಕ್ರವಾರ ಕ್ಷೌರ ಮಾಡಿಸಿಕೊಂಡರೆ ಹನ್ನೊಂದು ತಿಂಗಳು ಆಯುಸ್ಸು ಜಾಸ್ತಿ ಆಗುತ್ತದೆ ಎಂದು ಹೇಳಿರುವುದರಿಂದ ಏಳು ವಾರಗಳ ಪೈಕಿ ಕ್ಷೌರಕ್ಕೆ ಮಂಗಳವಾರ - ಶನಿವಾರ ಮತ್ತು ಭಾನುವಾರ ಈ ಮೂರು ವಾರಗಳು ನಿಷಿದ್ಧವಾದವುಗಳು. ಬುಧವಾರ - ಸೋಮವಾರ - ಗುರುವಾರ ಮತ್ತು ಶುಕ್ರವಾರ ಈ ನಾಲ್ಕು ವಾರಗಳು ವಿಹಿತವಾದವುಗಳು. ಆದರೆ ಮಾಧ್ವರಿಗೆ ಗುರುವಾರ ಕ್ಷೌರಕ್ಕೆ ನಿಷಿದ್ಧ. ಈ ವಿಷಯವನ್ನು ನಾವು ಮುಂದೆ ಸ್ಪಷ್ಟಮಾಡುತ್ತೇವೆ.

**363. ಎಷ್ಟು ದಿನಗಳಿಗೊಮ್ಮೆ ಕ್ಷೌರವನ್ನು ಮಾಡಿಸಿಕೊಳ್ಳಬೇಕು?**

**ದಶಾಹಾತ್ - ದ್ವಾದಶಾಹಾದ್ವಾ - ಮಾಸಾದ್ವಾ ಕ್ಷೌರಮಿಷ್ಯತೇ।**

**ಊರ್ಧ್ವಂ ಮಾಸಾತ್ ಅನಾಯುಷ್ಯಂ ಅಧಃ ಪಕ್ಷಾತ್ತು ಸಂಪದೇ ॥**

ಉ. ಎಂದು ಹೇಳಿದಂತೆ ಹತ್ತು ದಿನ ಅಥವಾ ಹನ್ನೆರಡು ದಿನ ಅಥವಾ ಹೆಚ್ಚೆಂದರೆ ಒಂದು ತಿಂಗಳಿಗೊಮ್ಮೆ ಯಾದರೂ ಕ್ಷೌರವನ್ನು ಮಾಡಿಸಿಕೊಳ್ಳಬೇಕು. ಅದಕ್ಕಿಂತ ಹೆಚ್ಚು ದಿನಗಳಾದರೆ ಆಯುಷ್ಯಕ್ಕೆ ಹಾನಿ. ಹದಿನೈದು ದಿನದ ಒಳಗೆ ಕ್ಷೌರವನ್ನು ಮಾಡಿಸಿಕೊಂಡರೆ ಸಂಪತ್ತು ಉಂಟಾಗುತ್ತದೆ. ಈ ವಿಷಯವು ಗೃಹಸ್ಥಾಶ್ರಮಿಗಳಿಗೆ ಸಂಬಂಧಪಡುತ್ತದೆ.

**364. ಹುಟ್ಟಿದ ಮಗುವಿಗೆ ಎಷ್ಟು ವರ್ಷದೊಳಗಾಗಿ ಕ್ಷೌರಸಂಸ್ಕಾರ ಮಾಡಬೇಕು?**

ಉ. **ಪಂಚಮಾಬ್ದಾತ್ ಊರ್ಧ್ವಂ ಕೇಶಧಾರಣಂ ಅನಾಯುಷ್ಯಮ್।**

ಎಂದು ಹೇಳಿರುವುದರಿಂದ ಹುಟ್ಟಿದ ಮಗುವಿಗೆ ಐದು ವರ್ಷದೊಳಗಾಗಿ ಕ್ಷೌರಸಂಸ್ಕಾರವನ್ನು ಮಾಡಿಸಬೇಕು. ಇಲ್ಲದಿದ್ದರೆ ಆಯುಷ್ಯಕ್ಕೆ ತೊಂದರೆ ಇದೆ. ಐದು ವರ್ಷದ ಮೇಲೆ ಕೇಶಧಾರಣೆಯು ಆಯುಸ್ಸನ್ನು ಕಡಿಮೆ ಮಾಡುತ್ತದೆ.

365. ಕ್ಷೌರಕ್ಕೆ ನಿಷಿದ್ಧವಾದ ತಿಥ್ಯಾದಿಗಳು ಯಾವುವು?

ಉ. ಷಷ್ಠ್ಯಮಾ ಪೂರ್ಣಿಮಾಪಾತ ಚತುರ್ದಶ್ಯಷ್ಟಮೀ ತಥಾ ।
ಆಸು ಸನ್ನಿಹಿತಂ ಪಾಪಂ ತೈಲೇಷು - ಸ್ತ್ರೀಭಗೇ - ಕ್ಷುರೇ ॥

ಎಂದು ಹೇಳಿದಂತೆ ಷಷ್ಠೀ - ಅಮಾವಾಸ್ಯೆ - ಹುಣ್ಣಿಮೆ - ವ್ಯತೀಪಾತ ಎಂಬ ಯೋಗವಿರುವ ತಿಥಿ - ಚತುರ್ದಶೀ ಮತ್ತು ಅಷ್ಟಮೀ ಈ ತಿಥಿಗಳಲ್ಲಿ ತೈಲಾಭ್ಯಂಗ - ಸ್ತ್ರೀಸಂಪರ್ಕ ಹಾಗೂ ಕ್ಷೌರ ಈ ಮೂರು ನಿಷಿದ್ಧವಾದವುಗಳು. ಆದ್ದರಿಂದ ಈ ತಿಥಿಗಳಲ್ಲಿ ಕ್ಷೌರವನ್ನು ಮಾಡಿಸಿಕೊಳ್ಳಬಾರದು.

366. ಕ್ಷೌರವನ್ನು ಮಾಡಿಸಿಕೊಳ್ಳುವಾಗ ಯಾವ ದಿಕ್ಕಿಗೆ ಅಭಿಮುಖವಾಗಿ ಕುಳಿತುಕೋಳ್ಳಬೇಕು?

ಉ. "ಉದಙ್ಮುಖಃ ಪ್ರಾಙ್ಮುಖೋ ವಾ ವಪನಂ ಕಾರಯೇತ್ ಸುಧೀಃ"

ಎಂದು ಹೇಳಿದಂತೆ ಉತ್ತರದಿಕ್ಕಿಗೆ ಅಭಿಮುಖವಾಗಿ ಅಥವಾ ಪೂರ್ವಕ್ಕೆ ಅಭಿಮುಖವಾಗಿ ಕುಳಿತುಕೊಂಡು ಕ್ಷೌರವನ್ನು ಮಾಡಿಸಿಕೊಳ್ಳಬೇಕು.

367. ಕೆಲವೊಂದು ದಿನಗಳಲ್ಲಿ ಕ್ಷೌರವನ್ನು ಮಾಡಿಸಿ ಕೊಂಡರೆ ಅದು ಸುರಾಪಾನಕ್ಕೆ ಸಮಾನವೆ?

ಉ. ಪ್ರಾತಃಕಾಲೇ ಪಿತೃದಿನೇ ದಶಮ್ಯಾದಿದಿನತ್ರಯೇ ।
ಕ್ಷೌರಾಭ್ಯಂಗಂ ನ ಕುರ್ವೀತ ಸುರಾಪಾನಸಮಂ ಭವೇತ್ ॥

ಎಂದು ಹೇಳಿದಂತೆ ಪ್ರಾತಃಕಾಲದಲ್ಲಿ - ಮಾತಾಪಿತೃಗಳ ಶ್ರಾದ್ಧದ ದಿನದಲ್ಲಿ - ದಶಮೀ - ಏಕಾದಶೀ ಮತ್ತು ದ್ವಾದಶೀ ಈ ಮೂರು ದಿನಗಳಲ್ಲಿ (ತಿಥಿತ್ರಯದಲ್ಲಿ) ಕ್ಷೌರವನ್ನು ಮಾಡಿಸಿಕೊಳ್ಳಬಾರದು ಮತ್ತು ತೈಲಾಭ್ಯಂಗವನ್ನೂ ಮಾಡಿಸಿ ಕೊಳ್ಳಬಾರದು. ಒಂದು ವೇಳೆ ಈ ಮೇಲೆ ಕಾಣಿಸಿದ ತಿಥ್ಯಾದಿಗಳಲ್ಲಿ ಕ್ಷೌರವನ್ನು ಮಾಡಿಸಿಕೊಂಡರೆ ಅಥವಾ ತೈಲಾಭ್ಯಂಗವನ್ನು ಮಾಡಿಕೊಂಡರೆ ಅದು ಸುರಾಪಾನಕ್ಕೆ ಸಮಾನವಾದದ್ದು ಆಗುತ್ತದೆ.

ವಿವರಣೆ: ಪ್ರಾತಃಕಾಲದಲ್ಲಿ ಕ್ಷೌರವನ್ನು ಮಾಡಿಸಿಕೊಳ್ಳಬಾರದು. ಸಂಗವಾದಿ ಕಾಲಗಳಲ್ಲಿ ಮಾಡಿಸಿಕೊಳ್ಳಬೇಕು. ಆದ್ದರಿಂದಲೇ ಶಿಷ್ಟರು ಪ್ರಾತಃಕಾಲದಲ್ಲಿ

ಸ್ನಾನ - ಆಹ್ನಿಕ - ದೇವಪೂಜಾದಿಗಳನ್ನು ಮುಗಿಸಿಕೊಂಡು ಸಂಗವಾದಿ ಕಾಲದಲ್ಲಿ ಕ್ಷೌರವನ್ನು ಮಾಡಿಸಿಕೊಳ್ಳುವುದು ಸಂಪ್ರದಾಯ. ಕ್ಷೌರವನ್ನು ಮಾಡಿಸಿಕೊಂಡು ನಂತರದಲ್ಲಿ ದೇವರ ಪೂಜೆಯನ್ನು ಮಾಡುವುದು ಶಿಷ್ಟ ಸಂಪ್ರದಾಯವಲ್ಲ. ಇದರಂತೆ ಪ್ರಾತಃಕಾಲದಲ್ಲಿ ತೈಲಾಭ್ಯಂಗವೂ ನಿಷಿದ್ದವಾಗಿದೆ. ಆದ್ದರಿಂದ ಪ್ರಾತಃಕಾಲದಲ್ಲಿ ತೈಲಾಭ್ಯಂಗವನ್ನು ಮಾಡಿಕೊಳ್ಳಬಾರದು. ಆದರೆ. ಉಗಾದಿ ಪಾಡ್ಯ - ಬಲಿಪಾಡ್ಯ ಮುಂತಾದ ದಿನಗಳಲ್ಲಿ ಪ್ರಾತಃಕಾಲದಲ್ಲೆ ತೈಲಾಭ್ಯಂಗವನ್ನು ಮಾಡಿಕೊಳ್ಳಬೇಕೆಂದು ವಿಶೇಷವಾದ ವಿಧಿಯು ಇರುವುದರಿಂದ ಅಂತಹ ದಿನಗಳಲ್ಲಿ ಪ್ರಾತಃಕಾಲದಲ್ಲೇ ತೈಲಾಭ್ಯಂಗವನ್ನು ಮಾಡಿಕೊಳ್ಳುವುದು ವಿಹಿತ. ಆದರೆ ವಿಶೇಷ ವಿಧಿ ಇಲ್ಲದಿರುವ ಬೇರೆ ದಿನಗಳಲ್ಲಿ ಪ್ರಾತಃಕಾಲದಲ್ಲಿ ತೈಲಾಭ್ಯಂಗವನ್ನು ಮಾಡಿಕೊಳ್ಳುವುದು ನಿಷಿದ್ಧವೆಂದು ತಿಳಿಯಬೇಕು.

**368. ಜನ್ಮಮಾಸ - ಜನ್ಮನಕ್ಷತ್ರದಲ್ಲಿ ಕ್ಷೌರ ನಿಷಿದ್ಧವೆ?**

**ಕ್ಷೌರಕರ್ಮ ನ ಕುರ್ವೀತ ಜನ್ಮಮಾಸೇ ಚ ಜನ್ಮಭೇ।**

ಉ. ಅಂದರೆ ಜನ್ಮಮಾಸ ಮತ್ತು ಜನ್ಮ ನಕ್ಷತ್ರದಲ್ಲಿ ಕ್ಷೌರವನ್ನು ಮಾಡಿಸಿಕೊಳ್ಳಬಾರದು

**369. ಕ್ಷೌರವಿಧಿಯಲ್ಲಿ ಸ್ಮರಿಸಬೇಕಾದವರು ಯಾರು?**

ಉ. **ಕೇಶವಮಾನರ್ತಪುರಂ ಪಾಟಲೀಪುತ್ರಂ ಪುರಿಮಹಿಚ್ಛತಾಮ್।**

**ದಿತಿಮದಿತಿಂ ಚ ಸ್ಮರತಾಂ ಕ್ಷೌರವಿಧೌ ಭವತಿ ಕಲ್ಯಾಣಮ್।**

**ಕ್ಷೌರೇ ಸ್ಮರಣೇ ದೇಶಾಂ ದೋಷಾ ನಶ್ಯಂತಿ ನಿಶ್ಶೇಷಾಃ ॥**

ಎಂದು ಹೇಳಿರುವುದರಿಂದ , ಕ್ಷೌರವನ್ನು ಮಾಡಿಸಿಕೊಳ್ಳುತ್ತಿರುವಾಗ ಕೇಶವ ದಿತಿ - ಅದಿತಿ - ಆನರ್ತ ದೇಶ - ಪಾಟಲೀಪುತ್ರ - ಅಹಿಚ್ಛತ್ರ ಇವುಗಳನ್ನು ಸ್ಮರಿಸಿದರೆ ಕ್ಷೌರಕಾಲದ ದೋಷಗಳು ನಾಶವಾಗಿ ಮಂಗಳವು ಉಂಟಾಗುತ್ತದೆ. ಅಹಿಚ್ಛತ್ರ ಅಂದರೆ ಸರ್ಪವನ್ನು ಛತ್ರಿಯಾಗಿಸಿಕೊಂಡಿರುವ ಶ್ರೀನೃಸಿಂಹದೇವರು.

**370. ಕ್ಷೌರಿಕನೇ ಮನೆಗೆ ಬರಬೇಕು?**

ಉ. **ಸ್ವಯಂ ಮೌಲ್ಯಂ ಸ್ವಯಂ ಪುಷ್ಪಂ ಸ್ವಯಂ ದೃಷ್ಟಂ ಚ ಚಂದನಮ್।**

**ನಾಪಿತಸ್ಯ ಗೃಹೇ ಕ್ಷೌರಂ ಶಕ್ರಾದಪಿ ಹರೇತ್ ಶ್ರಿಯಮ್ ॥**

ಎಂದು ಹೇಳಿದಂತೆ ಕ್ಷೌರಿಕನೇ ಮನೆಗೆ ಬಂದು ಕ್ಷೌರವನ್ನು ಮಾಡಬೇಕು. ನಾವು ಕ್ಷೌರಕ್ಕಾಗಿ ಅವನ ಮನೆಗೆ ಹೋದರೆ ಸಂಪತ್ತು ನಾಶವಾಗುತ್ತದೆ.

**371. ಮುಖಕ್ಷೌರ ಮಾಡಿಸಿಕೊಳ್ಳಬಹುದೇ?**

ಉ. ಬ್ರಾಹ್ಮಣರಿಗೆ ಮುಖಕ್ಷೌರವು ನಿಷಿದ್ಧವಾಗಿದೆ. ಹಿಂದಿನ ಕಾಲದಲ್ಲಿ ಮುಖ ಕ್ಷೌರವನ್ನು ಶ್ಮಶ್ರುಕರ್ಮವೆಂದು ಕರೆಯುತ್ತಿದ್ದರು. ಮುಖಕ್ಷೌರವು ರಾಜರಿಗೆ (ಕ್ಷತ್ರಿಯರಿಗೆ) ವಿಹಿತವಾಗಿದೆ. ಹಿಂದಿನ ಕಾಲದಲ್ಲಿ ಕ್ಷತ್ರಿಯರು ಪ್ರತಿ ಐದು ದಿವಸಗಳಿಗೊಮ್ಮೆ ಮುಖಕ್ಷೌರವನ್ನು ಮಾಡಿಸಿಕೊಳ್ಳುತ್ತಿದ್ದರು. ಮುಖಕ್ಷೌರದಲ್ಲಿ ಮೀಸೆಯನ್ನು ಕತ್ತರಿಸುವುದೂ ಸೇರಿದೆ. ಮುಖಕ್ಷೌರವು ಬ್ರಾಹ್ಮಣರಿಗೆ ನಿಷಿದ್ಧವಾದ ಕಾರಣ ಮುಖಕ್ಷೌರವನ್ನು ಮಾಡಿಸಿಕೊಳ್ಳುವ ಬ್ರಾಹ್ಮಣರನ್ನು 'ಅಲಂಕಾರಾದಿಗಳಿಗೆ ಕೂಡಿಸಬಾರದು' ಇದು ಶಿಷ್ಟಾಚಾರ. ಈ ಮೇಲೆ ಹೇಳಿದ ವಿಷಯವನ್ನು ಈ ಕೆಳಗೆ ಕಾಣಿಸಿರುವ ಪ್ರಮಾಣವು ಸ್ಪಷ್ಟಪಡಿಸುತ್ತದೆ.

ಪಂಚಮೇ ಪಂಚಮೇ ರಾಜ್ಞಾಂ ಕ್ಷೌರಭೇಽಷ್ಯೂರಭೇ ಸ್ಯೂರಯೇಽಥವಾ।

ಶ್ಮಶ್ರುಕರ್ಮ ಪ್ರಕುರ್ವೀತ ನವಮೇ ದಿವಸೇ ತು ನ ॥

**372. ಆಶೌಚದಲ್ಲಿ ಕ್ಷೌರವಿಷಯ ಹೇಗೆ?**

ಉ. **ಅಥ ಆಶೌಚ ಕ್ಷೌರವಿಷಯಃ -**

**ಸನ್ನಿಧಾನೇ ಸಪಿಂಡಾನಾಂ ವಪನಂ ತದ್ವಿಧೀಯತೇ।**

**ಅಸನ್ನಿಧಾನೇ ಸರ್ವತ್ರ ವಪನಂ ನೈವ ಕಾರಯೇತ್ । ಇತಿ ॥**

ಅಂದರೆ ಒಬ್ಬನು ಮೃತನಾದರೆ ಅಲ್ಲಿಯೇ ಸನ್ನಿಹಿತರಾದ ಸಪಿಂಡರಿಗೆ (ಹತ್ತು ದಿನದ ದಾಯಾದಿಗಳಿಗೆ) ಕ್ಷೌರವು ವಿಹಿತವಾಗಿದೆ. ಮೃತನ ಸನ್ನಿಧಿಯಲ್ಲಿ ಸಪಿಂಡರು ಇಲ್ಲದಿದ್ದರೆ ಅವರು ಯಾವಾಗಲೂ ಮರಣನಿಮಿತ್ತವಾದ ಕ್ಷೌರವನ್ನು ಮಾಡಿಸಬೇಕಾಗಿಲ್ಲ.

# ಶ್ರಾದ್ಧ

**373. ಶ್ರಾದ್ಧದಲ್ಲಿ ನಿಮಂತ್ರಿತ ಬ್ರಾಹ್ಮಣರಿಗೆ ಗಂಧವನ್ನು ಎಲೆಯಲ್ಲಿ ಕೊಡಬಹುದೇ?**

ಉ. **"ತತ್ರ ಪತ್ರೇಣ ತದ್ದಾನನಿಷೇಧಃ -**
**ಕದಲೀ ನಾಗವಲ್ಲೀ ಚ ಪದ್ಮಪತ್ರಪಲಾಶಕೇ।**
**ಗಂಧಂ ದದ್ಯಾತ್ ಯದಿ ಶ್ರಾದ್ಧೇ ನಿರಾಶಾಃ ಪಿತರೋ ಗತಾಃ ॥"**
ಎಂಬ ಪ್ರಮಾಣವನ್ನು ಕೃಷ್ಣಾಚಾರ್ಯ ಸ್ಮೃತಿಮುಕ್ತಾವಲೀ ಶ್ರಾದ್ಧಪ್ರಕರಣದಲ್ಲಿ ಉದಾಹರಿಸಲಾಗಿದೆ. ಅದರ ಪ್ರಕಾರ ಬಾಳೆಎಲೆ - ವೀಳೇದೆಲೆ - ತಾವರೆ ಎಲೆ ಹಾಗೂ ಮುತ್ತುಗದ ಎಲೆ ಇವುಗಳಲ್ಲಿ ಗಂಧವನ್ನು ಶ್ರಾದ್ಧದಲ್ಲಿ ನಿಮಂತ್ರಿತ ಬ್ರಾಹ್ಮಣರಿಗೆ ಕೊಟ್ಟರೆ ಪಿತೃಗಳು= ಪಿತೃದೇವತೆಗಳು ನಿರಾಶೆ ಗೊಂಡು ಹೊರಟು ಹೋಗುತ್ತಾರೆ.

374. **ವಿಭಕ್ತರಾದ ಅಣ್ಣತಮ್ಮಂದಿರು ಒಂದು ಕಡೆ ಸೇರಿ ಒಟ್ಟಿಗೆ ಮಾತಾಪಿತೃಗಳ ಶ್ರಾದ್ಧವನ್ನು / ಕಾಲಶ್ರಾದ್ಧವನ್ನು ಮಾಡಬಹುದೆ?**

ಉ. **(ಗರುಡಪುರಾಣ)**
**"ವಿಭಕ್ತೈಸ್ತು ಪೃಥಕ್ಕಾರ್ಯಂ ಶ್ರಾದ್ಧಂ ಸಾಂವತ್ಸರಾದಿಕಮ್ ".**
ಎಂದು ಗರುಡಪುರಾಣದಲ್ಲಿ ಹೇಳಿದಂತೆ ವಿಭಕ್ತರಾದ ಅಣ್ಣತಮ್ಮಂದಿರು ಒಂದುಕಡೆ ಸೇರಿ ಒಟ್ಟಿಗೆ ತಮ್ಮ ಮಾತಾ - ಪಿತೃಗಳ ಶ್ರಾದ್ಧವನ್ನು ಮಾಡಬಾರದು. ಬೇರೆ ಬೇರೆ ಮಾಡಬೇಕು.

375. **ಶ್ರಾದ್ಧದಲ್ಲಿ ಕರ್ತೃ ತನ್ನ ಕೈಯಲ್ಲಿ ಪವಿತ್ರವನ್ನು ಧರಿಸಿರುವಾಗ ನಿಮಂತ್ರಿತ ಬ್ರಾಹ್ಮಣರಿಗೆ ಗಂಧವನ್ನು ಕೊಡಬಹುದೆ?**

ಉ. **ತದ್ದಾನಂ ಅಪವಿತ್ರಕರೇಣ ಕಾರ್ಯಮ್ :-**
**ಅಪವಿತ್ರಕರೋ ಗಂಧೈಃ, ಗಂಧದ್ವಾರೇತಿ ಪೂಜಯೇದಿತಿ।**
**ತಥಾ ದಾನೇ ದೋಷಃ :-**
**ಸಪವಿತ್ರೇಣ ಹಸ್ತೇನ ಗಂಧದಾನಂ ಕರೋತಿ ಯಃ।**
**ತ್ರಯಸ್ತೇ ನರಕಂ ಯಾನ್ತಿ ದಾತಾ ಭೋಕ್ತಾ ತಥಾ ಪಿತಾ ॥**
ಎಂದು (ಸ್ಮೃ. ಶ್ರಾ. ಪ್ರ. ಪು೬೭) ಸ್ಮೃತಿಯಲ್ಲಿ ಹೇಳಿದಂತೆ ಶ್ರಾದ್ಧದಲ್ಲಿ ಕರ್ತೃ ಅಪವಿತ್ರಕರನಾಗಿ (ಕೈಯಲ್ಲಿ ಪವಿತ್ರವಿಲ್ಲದಲೇ) ನಿಮಂತ್ರಿತ ಬ್ರಾಹ್ಮಣರಿಗೆ ಗಂಧವನ್ನು ಕೊಡಬೇಕು. ಒಂದು ವೇಳೆ ಸಪವಿತ್ರಕರನಾಗಿ (ಕೈಯಲ್ಲಿ ಪವಿತ್ರವನ್ನು ಧಾರಣಮಾಡಿ) ಗಂಧವನ್ನ ಕೊಟ್ಟರೆ ದಾತಾ (ಗಂಧವನ್ನು ಕೊಟ್ಟ ಕರ್ತೃ) ಭೋಕ್ತಾ (ನಿಮಂತ್ರಿತ ಬ್ರಾಹ್ಮಣ) ಹಾಗೂ ಪಿತೃ (ಪಿತೃದೇವತೆ) ಈ ಮೂವರೂ ನರಕಕ್ಕೆ ಹೋಗುತ್ತಾರೆ.

**376. ಪ್ರತಿಸಾಂವತ್ಸರಿಕ ಶ್ರಾದ್ಧದಲ್ಲಿ ಅಂದರೆ ತಂದೆ ತಾಯಿಗಳ ಕಾಲಶ್ರಾದ್ಧದ ದಿನದಂದು ಬ್ರಹ್ಮಯಜ್ಞಾಂಗ ನಿತ್ಯತರ್ಪಣವನ್ನು ಯಾವಾಗ ಕೊಡಬೇಕು?**

**ಉ. (ಸದಾಚಾರ ಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀ ಕೃತ ಪುಟ೨೪) ಸಾಂವತ್ಸರಶ್ರಾದ್ಧೇ ಬ್ರಹ್ಮಯಜ್ಞಾಂಗನಿತ್ಯರ್ಪಣಂ ಯಾಜುಷಃ ಆದೌ ಬಹ್ವೃಚಸ್ತು ಅಂತೇ ಏವ ತಿಲವ್ಯತಿರೇಕೇಣ ತಿಲತರ್ಪಣಂ ಕುರ್ಯಾದಿತ್ಯತ್ರ ಸ್ಮೃತಯಃ-**

**"ಶ್ರಾದ್ಧಾದೌ ಯಾಜುಷಃ ಕುರ್ಯುಃ ಅಂತೇ ಬಹ್ವರ್ಚಸಾಮಗಃ।"**

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ತಂದೆ-ತಾಯಿಗಳ ಕಾಲ ಶ್ರಾದ್ಧದ ದಿನದಂದು ಬ್ರಹ್ಮಯಜ್ಞಾಂಗ ನಿತ್ಯಪಿತೃತರ್ಪಣವನ್ನು ಯಜುರ್ವೇದಿಗಳು ಶ್ರಾದ್ಧದ ಆದಿಯಲ್ಲೂ ಋಗ್ವೇದಿಗಳು ಹಾಗು ಸಾಮವೇದಿಗಳು ಶ್ರಾದ್ಧ ಕೊನೆಯಲ್ಲೂ ತಿಲವಿಲ್ಲದಲೆ ಕೊಡಬೇಕು.

**377. ಪಕ್ಷಮಾಸದಲ್ಲಿ ಹದಿನೈದು ದಿನಗಳ ಪೈಕಿ ಯಾವುದಾದರು ಒಂದು ದಿನದಲ್ಲಿ ಮಹಾಲಯ ಶ್ರಾದ್ಧವನ್ನು ಮಾಡುವುದಾದರೆ ಮಾರನೇ ದಿನ ಕೊಡಬೇಕಾದ ತಿಲತರ್ಪಣವನ್ನು ಎಂದು ಕೊಡಬೇಕು?**

ಉ. (ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ - ವಂಶಪಲ್ಲೀ ಕೃತ ಪುಟ ೨೫) ಸಕೃನ್ಮಹಾಲಯಶ್ರಾದ್ಧೇ ಪ್ರತಿಸಾಂವತ್ಸರಿಕಶ್ರಾದ್ಧಸ್ಯೇವ ಪರೇ ಅಹನ್ಯೇವ ತಿಲತರ್ಪಣಮ್ । ನಿತ್ಯಂ ಮಹಾಲಯಶ್ರಾದ್ಧೇ ತದ್ದಿನೇ ಏವ ಶ್ರಾದ್ಧಾಂಗತರ್ಪಣಮ್ ॥

" ಪಕ್ಷಶ್ರಾದ್ಧಂ ಯದಾ ಕುರ್ಯಾತ್ ತರ್ಪಣಂ ತು ದಿನೇ ದಿನೇ।

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ಪಕ್ಷಮಾಸದಲ್ಲಿ ಹದಿನೈದು ದಿನಗಳ ಪೈಕಿ ಯಾವುದಾದರು ಒಂದು ದಿನದಲ್ಲಿ ಮಹಾಲಯ ಶ್ರಾದ್ಧವನ್ನು ಮಾಡುವುದಾದರೆ ಶ್ರಾದ್ಧಾಂಗ ತಿಲತರ್ಪಣವನ್ನು ಮಾರನೇ ದಿನದಂದು ಕೊಡಬೇಕು. ಆದರೆ ಪಕ್ಷಮಾಸದಲ್ಲಿ ಪ್ರತಿನಿತ್ಯದಲ್ಲೂ ಮಹಾಲಯ ಶ್ರಾದ್ಧವನ್ನು ಮಾಡುವುದಾದರೆ ಶ್ರಾದ್ಧಾಂಗ ತಿಲತರ್ಪಣವನ್ನು ಅಂದಂದೇ ಅವತ್ತವತ್ತೇ ಕೊಡಬೇಕು.

**378. ದರ್ಶಶ್ರಾದ್ಧದಲ್ಲಿ ಶ್ರಾದ್ಧಾಂಗ ತಿಲತರ್ಪಣವನ್ನು ಯಾವಾಗ ಕೊಡಬೇಕು?**

ಉ. (ಸದಾಚಾರಸ್ಮೃತಿವ್ಯಾಖ್ಯಾ ಆಹ್ನಿಕ ಕೌಸ್ತುಭ-ವಂಶಪಲ್ಲೀ ಕೃತ ಪುಟ ೨೫) ಅಮಾವಾಸ್ಯಾಯಾಂ ತು ಪೂರ್ವಮೇವ ಶ್ರಾದ್ಧಾಂಗತರ್ಪಣಂ

"ದರ್ಶೇ ತಿಲೋದಕಂ ಪೂರ್ವಂ ಪಶ್ಚಾದ್ದದ್ಯಾತ್ ಮಹಾಲಯೇ।"

ಎಂಬೀ ಮುಂತಾದ ಪ್ರಮಾಣಗಳಲ್ಲಿ ಹೇಳಿದಂತೆ ದರ್ಶಶ್ರಾದ್ಧದಲ್ಲಿ ಶ್ರಾದ್ಧಾಂಗ ತಿಲತರ್ಪಣವನ್ನು ಪೂರ್ವದಲ್ಲಿ ಕೊಡಬೇಕು. ಅಂದರೆ ದರ್ಶಶ್ರಾದ್ಧಕ್ಕಿಂತಲೂ ಪೂರ್ವದಲ್ಲಿ ಕೊಡಬೇಕು. ಮಹಾಲಯ ಶ್ರಾದ್ಧದಲ್ಲಾದರೂ ಶ್ರಾದ್ಧದ ತರುವಾಯದಲ್ಲಿ ಕೊಡಬೇಕು.

# ಜಾತಾಶೌ-ಮೃತಾಶೌಚ

**379. ಯಾವ ಯಾವ ಸಂದರ್ಭಗಳಲ್ಲಿ ಸಂಧ್ಯಾವಂದನೆಯ ಲೋಪದಿಂದ ದೋಷವಿರುವುದಿಲ್ಲ?**

ಉ. ಸ್ಮೃತಿಭಾಸ್ಕರೇ " ರಾಷ್ಟ್ರಕ್ಷೋಭೇ ಚ ರೋಗಾರ್ತೇ ಜಾತೇ ಚ ಶವಸೂತಕೇ। ಸಂಧ್ಯಾವಂದನವಿಚ್ಛಿತ್ತಿಃ ನ ದೋಷಾಯ ಕದಾಚನ॥" (ಕೃ.ಸ್ಮೃ.ಆ.ಪ್ರ.ಪು.-103) ಎಂದು ಹೇಳಿದಂತೆ ರಾಷ್ಟ್ರಕ್ಷೋಭೆ - (ಅಲ್ಲೋಲ ಕಲ್ಲೋಲ) ಉಂಟಾದಾಗ, ರೋಗದಿಂದ ಪೀಡಿತನಾದಾಗ ಹಾಗೂ ಜಾತಾಶೌಚಮೃತಾಶೌಚಗಳು ಬಂದಾಗ ಸಂಧ್ಯಾವಂದನೆಯ ಲೋಪದಿಂದ ದೋಷವಿರುವುದಿಲ್ಲ.

**380. ಜಾತಾಶೌಚ - ಮೃತಾಶೌಚಗಳಲ್ಲಿ ಸಂಧ್ಯಾಕರ್ಮವನ್ನು ಮಾಡುವಾಗ ಮಂತ್ರಗಳನ್ನು ಉಚ್ಚರಿಸಬಹುದೇ? (ಉ.ಕೃ.ಸ್ಮೃ.ಅ.ಪ್ರ.ಪು.103)**

**ಸೂತಕೇಮೃತಕೇ ಚೈವ ಸಂಧ್ಯಾಕರ್ಮವಿಧೀಯತೇ।**
**ಮನಸೋಚ್ಚಾರಯೇನ್ಮಂತ್ರಾನ್ ಪ್ರಾಣಾಯಾಮಂ ಋತೇ ದ್ವಿಜಃ॥**

ಉ. ಎಂದು ಹೇಳಿದಂತೆ ಜಾತಾಶೌಚ - ಮೃತಾಶೌಚಗಳಲ್ಲಿ ಸಂಧ್ಯಾಕರ್ಮವನ್ನು ಮಾಡುವಾಗ ಪ್ರಾಣಾಯಾಮವನ್ನು ಬಿಟ್ಟು ಮಂತ್ರಗಳನ್ನು ಮನಸ್ಸಿನಿಂದ ಉಚ್ಚರಿಸಬೇಕು.

**381. ಜಾತಾಶೌಚ -ಮೃತಾಶೌಚಗಳಲ್ಲಿ ಗಾಯತ್ರೀಮಂತ್ರವನ್ನು ಜಪಿಸಬಹುದೇ?**

ಉ. **ತತ್ರ ಬೃಹಸ್ಪತಿಃ (ಕೃ.ಸ್ಮೃ.ಆ.ಪ್ರ.ಪು.-103)**
**"ಸೂತಕೇ ಮೃತಕೇ ವಾಪಿ ಸಾವಿತ್ರ್ಯಾ ಚಾಂಜಲಿಂ ಕ್ಷಿಪೇತ್**
**ನ ಗಾಯತ್ರೀಂ ಜಪೇದ್ಧೀಮಾನ್ ಕುರ್ಯಾತ್ಸೌರೀಮುಪಸ್ಥಿತಿಮ್ ॥"**
ಎಂದು ಹೇಳಿದಂತೆ ಜಾತಾಶೌಚ-ಮೃತಾಶೌಚಗಳಲ್ಲಿ ಅರ್ಘ್ಯವನ್ನು ಕೊಡಬೇಕು. ಅದರೆ ಗಾಯತ್ರೀಮಂತ್ರವನ್ನು ಜಪಿಸಬಾರದು.



# ಶ್ರೀಮತ್ಸುಬುಧೇಂದ್ರತೀರ್ಥರು




ಪ್ರಸ್ತುತ ಪೀಠಾಧಿಪತಿಗಳು

## ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.